ಸುಕ್ಷೇತ್ರ ಮಾಗಣಗೇರಿ

ಬೃಹನ್ಮತಾಧೀಶ್ವರ ಲಿಂ. ಷ. ಬ್ರ

# ಶ್ರೀಗುರು ಚನ್ನವೃಷಭೇಂದ್ರ

ಶಿವಾಚಾರ್ಯ ಮಹಾಸ್ವಾಮಿಗಳವರ

# ಚರಿತ್ರೆ

ಪ್ರಕಾಶಕರು :

ಶ್ರೀ ಮ. ಘ. ಚ. ಡಾ॥ ವಿಶ್ವಾರಾಧ್ಯ ಶಿವಾಚಾರ್ಯ
ಮಹಾಸ್ವಾಮಿಗಳು M.A.
ಸಾಹಿತ್ಯರತ್ನ, ವೇದಾಂತಾಚಾರ್ಯ

ಲೇಖಕರು :

ಶ್ರೀ ಸಿದ್ರಾಮಯ್ಯ ಸ್ವಾಮಿಮಠ B.A. ಮುರಡಿ

ಪ್ರಕಾಶಕರು : ಶ್ರೀ ಮ. ಘ. ಚ. ಡಾ|| ವಿಶ್ವಾರಾಧ್ಯ ಶಿವಾಚಾರ್ಯ ಮಹಾ ಸ್ವಾಮಿಗಳು M.A ವೇದಾಂತಾಚಾರ್ಯ, ಸಾಹಿತ್ಯರತ್ನ

ಮು. ಪೊ : ಮಾಗಣಗೇರಿ

ತಾ|| ಜೇವರಗಿ

ಜಿ|| ಗುಲಬುರ್ಗಾ

ಪ್ರಥಮಮುದ್ರಣ
೧೦೦೦ ಪ್ರತಿಗಳು



ಪ್ರಕಾಶನದ ದಿನ ಮಾರ್ಗಶಿರ ಬಹುಳ ನವಮಿ ರವಿವಾರ
೧೬-೧೨-೧೯೮೮

ಮುದ್ರಣ : ಶ್ರೀ ಗಜಾನನ ಪ್ರಿಂಟಿಂಗ ಪ್ರೆಸ್ ಗದಗ

ಬೆಲೆ ೬ ರೂಪಾಯಿಗಳು

# ಅರ್ಪಣೆ

ಶ್ರೀ ಮದುಜ್ಜಯಿನಿ ಸದ್ಧರ್ಮ ಸಿಂಹಾಸನ
ಶಾಖಾ ಮೂಗಣಗೇರಿ ಬೃಹನ್ಮಠದ ಕರ್ತೃ
ಗಳಾದ ಮಹಾಮಹಿಮರೂ ಶಿವ
ಪೂಜಾನಿಷ್ಠರೂ ತಪಸ್ವಿಗಳೂ ಆದ
ಶ್ರೀ ತೋಂಟದಾರ್ಯ ಶಿವಾಚಾರ್ಯ
ಮಹಾಸ್ವಾಮಿಗಳವರ
ದಿವ್ಯ ಸನ್ನಿಧಿಗೆ

ಪ್ರಕಾಶಕರು ಹಾಗೂ ಲೇಖಕರು



ಕಥಾನಾಯಕರು

ಲಿಂ. ಶ್ರೀ ಮ.ಘ.ಚ. ಗುರು ಚನ್ನವೃಷಭೇಂದ್ರ
ಶಿವಾಚಾರ್ಯ ಮಹಾಸ್ವಾಮಿಗಳು
ಬೃಹನ್ಮಠ ಮಾಗಣಗೇರಿ (ಜಿ. ಗುಲ್ಬರ್ಗಾ)



ಮಠಾಧ್ಯಕ್ಷರು

**ಶ್ರೀ ಮ. ಘ. ಚ. ಡಾ|| ವಿಶ್ವಾರಾಧ್ಯ ಶಿವಾಚಾರ್ಯ**

**ಮಹಾಸ್ವಾಮಿಗಳು M.A.**

ವೇದಾಂತಾಚಾರ್ಯ ಸಾಹಿತ್ಯರತ್ನ

ಬೃಹನ್ಮಠ ಮೂಗಣಗೇರಿ. (ಜಿ|| ಗುಲ್ಬರ್ಗಾ)



ವೀರಶೈವ ಮತಸ್ಥಾಪನಾಚಾರ್ಯ ಶ್ರೀ ವಿಶ್ವಾರಾಧ್ಯ
ಜ್ಞಾನಸಿಂಹಾಸನಾಧೀಶ್ವರ

## ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು

ಜಂಗಮವಾಡಿಮಠ ಶ್ರೀ ಕ್ಷೇತ್ರ ಕಾಶಿ ವಾರಾಣಾಸಿ (U.P.)

ಶ್ರೀ ಮಹಾಸನ್ನಿಧಾನದಿಂದಾ— ಗೆ. ಸಂ. 7906/22-9-84
ಷ|| ಬ್ರ|| ಶ್ರೀ ವಿಶ್ವಾರಾಧ್ಯ ಶಿವಾಚಾರ್ಯ ಸ್ವಾಮಿಗಳು ಬೃಹನ್ಮಠ,
ಮಾಗಣಗೇರಿ ಇವರಿಗೆ—

ಶ್ರೀಕಾಲೆ ಕೃತಾನೇಕ ಶುಭಾಶೀರ್ವಾದಗಳು.

ಲಿಂಗೈಕ್ಯರಾದ ನಿಮ್ಮ ಗುರುಗಳಾದ ಷ|| ಬ್ರ|| ಶ್ರೀ ಚನ್ನವೃಷಭೇಂದ್ರ ಶಿವಾಚಾರ್ಯ ಸ್ವಾಮಿಗಳವರ ಚರಿತ್ರೆಯನ್ನು ವಿದ್ವಾಂಸರಾದ ಮುರಡಿಯ ಶ್ರೀ ಸಿದ್ರಾಮಯ್ಯ ಸ್ವಾಮಿಯವರು ಬರೆದ ವಿಷಯವು ಅರಿಕೆಯಾಗಿ ಮಹದಾನಂದವಾಯಿತು.

ನಿಮ್ಮ ಗುರುಗಳು ಮಹಾನ್ ತಪಸ್ವಿಗಳೂ, ಸದಾಚಾರಿಗಳೂ, ಶಿವಲಿಂಗ ಪೂಜಾನಿರತರೂ, ಮತ್ತು ನಿಗ್ರಹಾನುಗ್ರಹಸಮರ್ಥರಾಗಿದ್ದ ವಿಷಯವನ್ನು ನಿಮ್ಮ ಭಾಗದ ಜನರು ಅರಿತವರಾಗಿದ್ದಾರೆ. ಮತ್ತು ಅವರ ಅನುಗ್ರಹಕ್ಕೆ ಪಾತ್ರರಾದವರು ಈಗಲೂ ಇದ್ದಾರೆ.

ಗುರುರೇವ ಸರ್ವೇಷಾಂ ಕಾರಣಂ ಸಿದ್ಧಿ ಕರ್ಮಣಾಂ॥ ಎಂಬ ಸಿದ್ಧಾಂತ ಶಿಖಾಮಣಿಯ ಉಕ್ತಿಯನ್ನು ನಿಮ್ಮ ಗುರುಗಳು ಆಚರಣೆಯಲ್ಲಿ ತಂದು ತೋರಿಸಿದ್ದಾರೆ.

ಇಂತಹ ಕ್ರಿಯಾಸಿದ್ಧಿ ಪಡೆದ ಗುರುವರ್ಯರ ಚರಿತ್ರೆಯನ್ನೂ ಪ್ರಕಟಪಡಿಸುತ್ತಿರುವದು ಶ್ಲಾಘನೀಯ ವಿಷಯವಾಗಿದೆ.

ಕ್ರಿಯಾಸಿದ್ಧಿ ಪಡೆದ ಗುರುಗಳ ಸಹಜ ಆಚರಣೆಗಳು ಪವಾಡಗಳಾಗಿ ಪರಿಣಮಿಸುವದು ಸಹಜವಾದ ವಿಷಯವಾಗಿದೆ.

ಇಂತಹ ಆದರ್ಶ ಗುರುಗಳ ಚರಿತ್ರೆಗಳನ್ನೂ ತಯಾರಿಸಿ ಪ್ರಚಾರ ಮಾಡುವದು ಶಿಷ್ಯವರ್ಗದವರ ಆದ್ಯ ಕರ್ತವ್ಯವಾಗಿದೆ.

ಈ ಚರಿತ್ರೆ ನಿರ್ಮಾಣಕ್ಕೆ ಪ್ರೋತ್ಸಾಹವನ್ನಿತ್ತ ನಿಮ್ಮ ಮತ್ತು ನಿಮ್ಮ ಮಠದ ಶಿಷ್ಯರ ಕಾರ್ಯವು ಪ್ರಶಂಸನೀಯವಾಗಿದೆ. ಹಾಗೂ ಆದರ್ಶವಾಗಿದೆ.

ಶಿವಮ್ ಭೂಯಾತ್

ವಾರಾಣಸಿ
22-9-84

ಶುಭಾಶಿಷ:

— ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು —

ಶ್ರೀ ಷ|| ಬ್ರ|| ಪಂ|| ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು
ಹಿರೇಮಠ M. A. ಮಳಲಿ (ಮಳ್ಳಿ)

# ಸದಭಿಪ್ರಾಯ

ಪೂಜ್ಯ ಶ್ರೀಗಳಾದ ಲಿಂಗೈಕ್ಯ ಚನ್ನವೃಷಭೇಂದ್ರ ರೇಣುಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಹಿರೇಮಠ ಮಾಗಣಗೇರಿ ಇವರು ನಮ್ಮನ್ನಗಲಿ ಬಹಳ ದಿವಸಗಳಾದರೂ ನಮ್ಮೆಲ್ಲರ ಮಧ್ಯದಲ್ಲಿ ಇನ್ನೂ ಇದ್ದಾರೆ. ಮತ್ತು ಇರುತ್ತಾರೆ. ಯಾಕೆಂದರೆ ವ್ಯಕ್ತಿ ಕಣ್ಮರೆಯಾಗಬಹುದು. ಆದರೆ ವ್ಯಕ್ತಿತ್ವ ಮರೆಯಾಗದು. ಅವರ ಬಗ್ಗೆ ಹೇಳುವದಾದರೆ ಅಸಾಧಾರಣ ಮಾತಲ್ಲ ! ಅವರ ಕರ್ತೃತ್ವ ಬಹಳ ಉಚ್ಚದಿದ್ದು ಸರ್ವ ನಂಬಿದ ಭಕ್ತರಿಗೆ ತುಂಬಲಾಭದಾಯಕವಾದ ಸಂಗತಿಗಳು ಪ್ರಸ್ತುತ ಲೇಖಕರು ಮನದಟ್ಟುವಂತೆ ವಿವರಿಸಿದ್ದಾರೆ.

ಶ್ರೀಗಳು ಅಗಲಿ ಹೋದರೆಂದು ಅಜ್ಞರಿಗೆ ಭಾಸವಾಗುತ್ತಿರುವ ಮಾತು ಸತ್ಯ. ಆದರೆ ಮರಾಠಿಯಲ್ಲಿ ಒಂದುಕ್ತಿ ಇದೆ. ಅದು 'ಮರಾವೆ ಪಣಕೀರ್ತಿ ರುಪಾಸೆ ಊರಾವೆ" ಎಂದು ಅವರು ತಮ್ಮ ಜೀವನದಲ್ಲೆ ತಮ್ಮನ್ನಷ್ಟೇ ಅಲ್ಲ. ತಮ್ಮನ್ನು ನಂಬಿದ ಭಕ್ತರನ್ನು ಉದ್ಧರಿಸಿದ ಉದಾಹರಣೆಗಳು ಬಹಳವಾಗುತ್ತಿರುವ ಸಂಗತಿಗಳು ಹಸ್ತಗತವಾದ ಈ ಗ್ರಂಥದಿಂದ ತಿಳಿದು ಬರುತ್ತದೆ.

ಒಳ್ಳೆ ಚಾರಿತ್ರವೇ ಜೀವನದ ಉಚ್ಚ ಧ್ಯೇಯ ಅವರೊಬ್ಬ ಜ್ವಲಂತ ಚೇತ್ರ ಪುರುಷರಿದ್ದು ಪರಮಾತ್ಮನೆಡೆಗೆ ಹೋಗುವ ಭಕ್ತ ಸಮೂಹಕ್ಕೆ ದಾರಿದೀಪವಾಗಿದ್ದರು. ಅವರ ಬ್ರಹ್ಮಚರ್ಯ ಜೀವನ ಪ್ರಸಿದ್ಧವಾಗಿತ್ತು. ಅವರುಪತನಕ ಭಕ್ತರ ಇಹಪರಮಾರ್ಗದ ಮಾಲಿನ್ಯವನ್ನು ಕಳೆದು ಭಕ್ತವರ್ಗದ ದುರಂತ

ದುರ್ಘಟನೆಗಳು ತಮ್ಮಿಂದ ತಾವೇ ನಷ್ಟವಾಗಿ ಅವರ ಭೌತಿಕ ಮತ್ತು ಪಾರ ಮಾರ್ಥಿಕ ಮಾರ್ಗಗಳು ಸ್ವಚ್ಛವಾಗಿ ಸುಧಾರಿಸಿಕೊಂಡು ಮುಕ್ತಿಯನ್ನು ಪಡೆಯುತ್ತಿದ್ದವೆಂದು ಹೇಳಲು ಹೆಮ್ಮೆಯನ್ನಿಸುತ್ತದೆ.

ತಮ್ಮ ಪೂಜೆ ಪಾಠಗಳಿಂದ ಈ ನಾಡನ್ನೆ ಬೆಳಗಿದರು. ಇವರ ಕಾಲದಲ್ಲಿ ಈಗಿನಂತೆ ಜನರಿಗಾಗಿ ದವಾಖಾನೆಗಳಿರಲಿಲ್ಲ. ವೈದ್ಯರ ಅಭಾವವಿದ್ದ ಸಂಗತಿ ಎಲ್ಲರಿಗೂ ಗುರುತು. ಶ್ರೀಗಳು ತಮ್ಮ ತಪೋಬಲ ಪೂಜೆಯ ಪ್ರಭಾವದಿಂದ ಭಕ್ತರ ರೋಗ ರುಜಿನಗಳನ್ನು ಕಳೆದು ಅವರ ಬೇಡಿದ ಬಯಕೆಗಳನ್ನು ತೀರಿಸುವ ಪರಮಪಾವಿತ್ರ್ಯ ಸಾಮರ್ಥ್ಯವನ್ನು ಹೊಂದಿದ್ದರು. "ತಪಸಾ ಕಿಂ ನ ಸಿದ್ಧತಿ" ಎಂಬ ಉಕ್ತಿಯು ಇವರಿಂದ ಸಾರ್ಥಕತೆಯನ್ನು ಪಡೆಯಲೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಇಂತಹ ಪರಮಪವಿತ್ರ ಮೂರ್ತಿಗಳ ಜೀವನದ ಮೇಲೆ ಪ್ರಕಾಶ ಹಾಕು ವದು ಬಹಳ ಕಠಿಣವಾಗಿದೆ. ಯಾಕೆಂದರೆ ಅವರು ಸಾಮಾನ್ಯರಲ್ಲ. ಅವರ ಉದಾರ ವ್ಯಕ್ತಿತ್ವ ಅವರನ್ನು ಅಮರತ್ವಕ್ಕೇರಿಸಿತು. ಅವರ ಚರಿತ್ರೆಯನ್ನು ಬರೆದ ಲೇಖಕರು ಮುರಡಿಯ ಸಿದ್ರಾಮಯ್ಯನವರು ನಿಜಕ್ಕೂ ಧನ್ಯರು. ಅದನ್ನು ಹೊರತಂದು ಪ್ರಕಾಶ ಮಾಡಿದ ಅವರುತ್ತರಾಧಿಕಾರಿಗಳು ವಾಸ್ತವವಾಗಿ ಒಂದು ದೊಡ್ಡ ಕೆಲಸವನ್ನು ಮಾಡಿ ಎಲ್ಲಾ ಭಕ್ತರ ಉದ್ಧಾರಕ್ಕಾಗಿ ಕಾರಣರಾಗಿದ್ದಾರೆ.

ಇಂಥಃ ಶುಭ ಪ್ರಸಂಗದಲ್ಲಿ ವರ್ತಮಾನಶ್ರೀಗಳು ನಮಗೆ ಈ ಕೃತಿಯ ಬಗ್ಗೆ ಸದಭಿಪ್ರಾಯವನ್ನು ಕೇಳಿದರು. ನಿಜಕ್ಕೂ ಇಂಥ ಪ್ರಭಾವಿ ಮತ್ತು ಪವಿತ್ರ ಜೀವಿಗಳ ಉದಾರ ಚರಿತ್ರಗಳ ಬಗ್ಗೆ ಸದಭಿಪ್ರಾಯವೇ ಹೊರತು ಬೇರೆಯಿಲ್ಲ.

ಶ್ರೀಗಳ ಉತ್ತರಾಧಿಕಾರಿಗಳಾದ ವರ್ತಮಾನ ಶ್ರೀಗಳಾದ ಶ್ರೀ ಷ|| ಬ್ರ|| ವಿಶ್ವಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಅವರ ಪವಿತ್ರವಾದ ಕಾರ್ಯಗಳನ್ನು ಮಾಡುತ್ತಾ ಅವರದೇ ಆದ ಮಾರ್ಗವನ್ನನುಸರಿಸು ತ್ತಿರುವದು ನಿಜಕ್ಕೂ ಆನಂದದ ಸಂಗತಿಯಾಗಿದೆ. "ಮಹಾಜನೋ ಯೇನಗತಃ ಸಃ ಪಂಥಾ" ಎಂಬ ಉಕ್ತಿಗೆ ಪುಷ್ಟಿಯನ್ನಿತ್ತು ಪೂರ್ವಾಚಾರ್ಯರ ಪಾದಕಮಲದಲ್ಲಿ

ಬೆಳೆದ ಎಳೆವಯಸ್ಸಿನ ಶ್ರೀಗಳು ಅವರ ಆದರ್ಶಗಳನ್ನು ತಮ್ಮ ಮುಂದಲ್ಲದೆ ಅನ್ಯರ ಮುಂದೆಯೂ ಇಟ್ಟು ಮಹದುಪಕಾರ ಮಾಡಲು ಅಣಿಯಾದ ಮಾತು ನಿಜ ವಾಗಿಯೂ ಎಲ್ಲರನ್ನೂ ಜಾಗ್ರತಗೊಳಿಸುವಂತಾಗಿದೆ. ಇಂಥ ಸಂದರ್ಭದಲ್ಲಿ ನಮಗೆ ಪ್ರಸ್ತುತ ಶ್ರೀಗಳ ಸಮರ್ಥವಾದ ಸದಭಿಪ್ರಾಯ ಬರೆಯಲು ಕೇಳಿ ಕೊಂಡಾಗ ಈ ಮಾತು ನಡಿಸದೇ ಹೋದಲ್ಲಿ ನಮ್ಮ ಕರ್ತವ್ಯಕ್ಕೆ ಚ್ಯುತಿಯಾಗ ಬಹುದೆಂದು ನಾವು ಭಾವಿಸುತ್ತೇವೆ.

"ಉದಾರ ಚರಿತಾನಾಂತೇವಸುಧೈವ ಕುಟುಂಬಕಂ" ಎಂಬುಕ್ತಿಯಂತೆ ಅವರು ವಿಶ್ವಕುಟುಂಬಗಳು ಅವರ ಹೃದಯದಲ್ಲಿಯೇ ನಾವಡಗಿ ಸಹೃದಯಿಗಳಾದ ಮೇಲೆ ಅವರ ಬಗ್ಗೆ ಅಭಿಪ್ರಾಯಗಳನ್ನೂ ಸೂಚಿಸಲು ನಮಗಾವ ಬಡತನ ! ಅವರ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನಾತ್ಮಕ ಕೃತಿಗಳು ಬೆಳಕಿಗೆ ಬಂದು ಅವರ ಆದರ್ಶ ಜೀವನದ ಪಾಠ ಪ್ರತಿವ್ಯಕ್ತಿಗೆ ಮುಟ್ಟಿಪಾವನಗೊಳಿಸಲೀ ಎಂದು ಈ ಗುರು ಪೀಠದ ಗುರುಗಳಲ್ಲಿಯೂ ಮತ್ತು ಜಗದ್ಗುರು ಪಂಚಾಚಾರ್ಯರಲ್ಲಿಯೂ ಅನನ್ಯ ಭಕ್ತಿಯಿಂದ ಬೇಡುತ್ತ ಈ ಸದಭಿಪ್ರಾಯದ ಮಾತು ಮುಗಿಸುತ್ತೇವೆ.

ಮಿತಿಕಾರ್ತಿಕ ಬಹುಳ
ಪಂಚಮಿಶಕೆ ೧೯೦೭ ಸಹಿ

|| ಶ್ರೀ ಜ. ಪಂಚಾಚಾರ್ಯಾಃ ಪ್ರಸೀದಂತು ||

# ಶ್ರೀ ಷ|| ಬ್ರ|| ಗುರುಸಿದ್ಧ ಶಿವಾಚಾರ್ಯ ದಹಿವಡಕರ ಮಹಾರಾಜ

ಎಮ್. ಎ. ವೇದಾಂತಾಚಾರ್ಯ

ಮು|| ಬಾರ್ಶಿ ಜಿ. ಸೊಲ್ಲಾಪೂರ

## ಅಭಿಪ್ರಾಯ

ನಮ್ಮ ಭಾರತಭೂಮಿ ಅನೇಕ ವಿಭೂತಿ ಪುರುಷರ ನೆಲೆಬೀಡಾಗಿದೆ. ಮಾನವ ಜನಾಂಗದ ಶ್ರೇಯಸ್ಸಿಗೆ ಅನೇಕ ವಿಭೂತಿ ಪುರುಷರ ಪುಣ್ಯ ಸ್ಮರಣೆ ಅವರ ಜೀವನಾದರ್ಶಗಳ ಅನುಸರಣೆಗೆ ಚೇತನದಾಯಕ ಇದರಲ್ಲಿ ಕರ್ನಾಟಕದ ಕೊಡುಗೆ ಕಡಿಮೆಯಲ್ಲ.

ಸರ್ವ ಧರ್ಮಗಳ ಸಮನ್ವಯದ ತೂಗುತೊಟ್ಟಿಲಾಗಿ ಕರ್ನಾಟಕದ ನೆಲ, ಶಾಂತಿ, ಸದ್ಧರ್ಮಗಳನ್ನು ರಕ್ಷಿಸಿಕೊಂಡು ಬಂದಿದೆ. ಇದಕ್ಕೆ ಕಾರಣ ಆಗಿ ಹೋದ ಅನೇಕ ಮಹಾವಿಭೂತಿ ಪುರುಷರ ತಪಸ್ಸಿನ ಪ್ರಭಾವವೇ ರಕ್ಷಾ-ಕವಚವೆಂದು ನಾನು ಭಾವಿಸಿದ್ದೇನೆ.

ಉತ್ತರ ಕರ್ನಾಟಕದ ಗುಲಬುರ್ಗಾ ಜಿಲ್ಲೆಯ ಪುಣ್ಯಕ್ಷೇತ್ರಗಳೊಂದಾದ ಮಾಗಣಗೇರಿ ಪುಣ್ಯಕ್ಷೇತ್ರದಲ್ಲಿ ವಿರಾಜಮಾನರಾದ ಬೃಹನ್ಮಠದ ಪಟ್ಟಾಧ್ಯಕ್ಷರಾದ ಲಿಂ. ಷ|| ಬ್ರ|| ಚನ್ನವೃಷಭೇಂದ್ರ ಶಿವಾಚಾರ್ಯರು ಇತ್ತೀಚಿನವರು. ಇವರ ಕೀರ್ತಿ ಚತುರ್ದಿಶಗಳಲ್ಲಿ ವ್ಯಾಪಕವಾಗಿದೆ. ಈ ವಿಭೂತಿ ಪುರುಷರನ್ನು ಪೂಜಿಸಿ, ಅರ್ಪಿಸಿ, ಅನುಭವಿಸಿದ ಅನೇಕ ಗಣ್ಯರು ಈಗಲೂ ಇದ್ದಾರೆ. ಇಂತಹ

ಮಹಾ ವಿಭೂತಿ ಪುರುಷರ ಜೀವನ ಚರಿತ್ರೆಯನ್ನು ವೇ. ಮುರಡಿಯ ಸಿದ್ರಾಮಯ್ಯನವರು ಕಸ್ತೂರಿ ಕನ್ನಡ ಭಾಷೆಯಲ್ಲಿ ರಚಿಸಿದ್ದಾರೆ. ಇವರ ಸತ್ಕೃತಿಯು ಮಾನವ ಜನಾಂಗಕ್ಕೆ ಹೊಸಚೇತನವುಂಟು ಮಾಡಿದೆ.

ಬದುಕಿನ ನೆಮ್ಮದಿಗೆ ಪಾರಮಾರ್ಥಿಕ ಅನುಭವವು ಅತ್ಯಗತ್ಯವು ಅಂತಹ ಸೌಭಾಗ್ಯವು ಶ್ರೀ ಮಾಗಣಗೇರಿ ಶಿವಯೋಗಿಗಳ ಪುಣ್ಯಜೀವನ ಚರಿತ್ರೆಯಿಂದ ಲಭ್ಯವಾಗಲಿ. ಅವರ ದಿವ್ಯ ಸಂದೇಶವು ಜಗದ ಮಾನವರೆಲ್ಲರಿಗೂ ದಾರಿದೀಪ ವಾಗಲಿ.

ಬಾರ್ಶಿ                                        ಸಹಿ.

೪-೧೦-೧೯೮೪

|| ಶ್ರೀಗುರು ಸಿದ್ಧಲಿಂಗಾಯ ನಮಃ ||

# ಶ್ರೀ ವೇ|| ಪಂ|| ಡಾ|| ಪುಟ್ಟರಾಜ ಕವಿ ಗವಾಯಿಗಳವರು

## ಶ್ರೀ ವೀರೇಶ್ವರ ಪುಣ್ಯಾಶ್ರಮ, ಪಂಚಾಕ್ಷರ ನಗರ, ಗದಗ್-ಯಿವರ

## ಸಂದೇಶ

ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭೂತಲೇ ।
ತದಾ ತದಾವತಾರೋಽಯಂ ಗಣೇಶಾನಾಂ ಪಾವನೇ ॥

ಇದು ಆಗಮೋಕ್ತಿಯು, ಪಾರಮೇಶ್ವರಾಗಮದಲ್ಲಿ ಪಾರ್ವತಿ ದೇವಿಗೆ ಪರಮೇಶ್ವರನು ಈ ಸಂದೇಶವನ್ನು ಕೊಟ್ಟಿದ್ದಾನೆ. ಅದೇನೆಂದರೆ, ಯಾವ ಯಾವ ಕಾಲದಲ್ಲಿ ಧರ್ಮದ ಅವನತಿಯಾಗುವುದೋ ಆವಾವ ಕಾಲದಲ್ಲಿ ಪ್ರಮಥರ ಅವತಾರವಾಗುವುದು.

ಕಾಲಕಾಲಕ್ಕೆ ಈ ಆಗಮೋಕ್ತಿಯು ಸತ್ಯವಾಗುತ್ತಾ ಬಂದಿದೆ. ಯಾರಿಂದ ಧರ್ಮೋದ್ಧಾರ ಕಾರ್ಯವಾಗಿರುವದೊ ಅವರೆಲ್ಲರನ್ನು ಪ್ರಮಥರೆಂದೇ ನಾವು ತಿಳಿಯಬೇಕು. ಈ ಚರಿತ್ರನಾಯಕರಾದ ಶ್ರೀ ಮ. ಘ. ಚ. ಷ. ಬ್ರ. ಚನ್ನವೃಷಭೇಂದ್ರ ಶಿವಾಚಾರ್ಯಸ್ವಾಮಿಗಳೂ ಕೂಡಾ ಪ್ರಮಥ ಶ್ರೇಷ್ಟರೇ ಸತ್ಯವು. ಇವರು ಧರ್ಮೋದ್ಧಾರ ಕಾರ್ಯವನ್ನೇ ಜೀವನದ ತುಂಬಾ ನೆರವೇರಿಸಿದ್ದಾರೆ. ಇವರ ಚರಿತ್ರವನ್ನು ನೋಡಿದರೆ ಅದು ವ್ಯಕ್ತವಾಗಿ ತೋರುತ್ತದೆ.

ಇವರು ಅವತಾರಿಗಳೆಂಬುವದಕ್ಕೆ ಇವರಲ್ಲಿರುವ ಭಕ್ತಿ ಜ್ಞಾನ ವೈರಾಗ್ಯಗಳೇ ಸಾಕ್ಷಿಯಾಗಿವೆ. ಈ ಶ್ರೀಗಳು ಬಾಲಕರಿದ್ದಾಗ ತೋರಿದ ಆಟಗಳೆಲ್ಲವೂ ಲೀಲೆಗಳಾಗಿ ಪರಿಣಮಿಸಿವೆ. ಅವು ಜನರಲ್ಲಿ ಭಕ್ತಿಯನ್ನು ಬೆಳೆಸತಕ್ಕವಗಳಾಗಿವೆ. ಅದರಂತೆಯೇ ಯೌವ್ವನದಲ್ಲಿ ತೋರುವ ಶ್ರೀಗಳ ಚರಿತ್ರಾಂಶವೆಲ್ಲವೂ

ಜನರಲ್ಲಿ ಜ್ಞಾನವೈರಾಗ್ಯಗಳನ್ನು ಬೆಳೆಸತಕ್ಕವುಗಳಾಗಿವೆ. ಇವರ ಯೋಗ ಸಮಾಧಿಯ ದರ್ಶನವನ್ನು ಪಡೆದವರು ಪೂರ್ಣಕಾಮರಾಗಿ, ಭಯಭಕ್ತಿಯುಕ್ತರಾಗುತ್ತಲಿದ್ದಾರೆ. ಆದ್ದರಿಂದ ಇವರು ಲೋಕಕ್ಕೆ ಆದರ್ಶಪುರುಷರಾಗಿದ್ದಾರೆ.

ಈ ಗ್ರಂಥವು ವಾಚಕರ ಮನೋಬುದ್ಧಿಗಳನ್ನು ಪವಿತ್ರಗೊಳಿಸುವಂಥಹುದಾಗಿದೆ. ಎಲ್ಲರೂ ಇದನ್ನು ಓದಿ ತಮ್ಮ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು. ಈ ಲೇಖನ ಬರೆಯಲು ಸಂದರ್ಭ, ಸದಾವಕಾಶ ನಮ್ಮವರಾದ ಗುರುಸ್ವಾಮಿ ಕಲಿಕೇರಿಯವರು ಮಾಗಣಗೇರಿಯ ಈಗಿನ ಶ್ರೀಗಳನ್ನು ಕರೆದುಕೊಂಡು ಬಂದು ದರ್ಶನ ಮಾಡಿಸಿ, ಪರಿಚಯ ಮಾಡಿಸಿದ ಸಮಯದಲ್ಲಿ ಈ ಸಂದೇಶ ಲೇಖನವನ್ನು ಶ್ರೀಗಳು ಅಪೇಕ್ಷಿಸಿದರು. ಅದನ್ನು ನೆರವೇರಿಸಲಾಗಿದೆ.

ಸತ್ಯಂ ಶಿವಂ ಸುಂದರಂ

# ಮುನ್ನುಡಿ

'ತನ್ನ ತಾನರಿದರೆ ತನ್ನರಿವೇ ಗುರು: ಎಂಬುದಾದರೂ ಸುಪ್ತವಾಗಿರುವ ಅರಿವನ್ನು ಜಾಗ್ರತಗೊಳಿಸುವ ಶಿವಕಲೆಯುಳ್ಳ ಒಬ್ಬ ಗುರುವು ಬೇಕೇ ಬೇಕು. ಗುರುವು ಎಲ್ಲ ಕಡೆಗೂ ನಿತ್ಯ ಶಾಶ್ವತ್ ಸತ್ಯನಾಗಿ ಇದ್ದೇ ಇರುತ್ತಾನೆ. ಆತನಿಗೆ ಧರ್ಮಗ್ಲಾನಿಯ ಅವಶರವಿಲ್ಲ. ಗ್ಲಾನಿಯಾದಾಗಲೇ ನಾನು ಬರುತ್ತೇನೆಂಬ ಅವತಾರದ ಅವತರಣಿಕೆಗಳಿಲ್ಲ. ಎಲ್ಲರ ಉಸಿರು ನಿಂತಾಗಲೇ ನಾನು ಬೀಸುವೆನೆಂದು ವಾಯು ನುಡಿದರೆ ಹಾಸ್ಯಾಸ್ಪದವಾದೀತು. ಕಿಡಿಕಿ ಬಾಗಿಲುಗಳನ್ನು ತೆರೆದಿಟ್ಟುಕೊಂಡವರಿಗೆ ಗಾಳಿಯ ಸುಗಂಧ ತಿಳಿದೀತು. ಹಾಗೆಯೇ ನಮ್ಮ ಬಾಳಿನ ಬಾಗಿಲನ್ನು ತೆರೆದಿಟ್ಟುಕೊಂಡವರಿಗೆ ಗುರುದರ್ಶನವಾಗುವದು. ಆ ಮಹಾ ಬೆಳಕಿನಲ್ಲಿ ನಮ್ಮ ಅಸ್ತಿತ್ವವನ್ನು ಕಾಣಬಹುದು. ಸೂರ್ಯತಾಪವು ಎಲ್ಲ ಕಡೆಗೂ ಒಂದೇ ರೀತಿಯಾಗಿದ್ದರೂ, ಸೂರ್ಯಕಾಂತಿ ಹರಳಿನ ಕೇಂದ್ರೀಕರಣ ಶಕ್ತಿಯಿಂದ ಅಗ್ನಿಯನ್ನು ಕಾಣುವಂತೆ ಶಾಸ್ತ್ರಗಳ ಸಾರವನ್ನೂ ಭಕ್ತೋದ್ಧಾರಕ ಕ್ರಿಯೆಗಳನ್ನೂ ತನ್ನ ಅನುಷ್ಠಾನ ಬಲದಿಂದ ಅರಿತು ಅರಗಿಸಿಕೊಂಡ ಒಬ್ಬ ಮಹಾನ್ ವ್ಯಕ್ತಿಯನ್ನು ಕಾಣುತ್ತೇವೆ. ಆತನೇ ಗುರುವು. ಈ ಗುರುವಿಗೆ ಜಾತಿ-ಭೇದಗಳಿಲ್ಲ. ಅದೊಂದು ಸಂಪ್ರದಾಯವಷ್ಟೇ. ಎಲ್ಲ ಮತಧರ್ಮದವರಿಗೂ ಅವರವರ ಗುರುಗಳಿದ್ದಾರೆ. ಪ್ರಕ್ರಿಯಾ ಭೇದದಿಂದ ಭಿನ್ನರಾಗಿದ್ದರೂ ಆತ್ಮಾನುಸಂಧಾನ ರೀತಿಯಿಂದ, ಕಂಡ, ಕಾಣುವ ಆ ದಿವ್ಯಜ್ಯೋತಿ ಪ್ರಕಾಶವು ಒಂದೇ ನೆಲಸಿ ಗುರುವಾಗುತ್ತಾನೆ. ಚಲಿಸಿ ಜಂಗಮನಾಗುತ್ತಾನೆ. ಸಲಿಸಿಕೊಂಡು ಲಿಂಗವಾಗುತ್ತಾನೆ. ಸ್ವಯ ಚರಪರವೆಂಬುದರ ತಾತ್ಪರ್ಯವೂ ಇಷ್ಟೇ. ರೂಪು ರಸ ಗಂಧಗಳು ಒಂದು ಫಲದಲ್ಲಿರುವಂತೆ ಶರಣನಲ್ಲಿ ಅರಿವು ಅನುಭವ ಆನಂದಗಳು ಸಮಾನವಾಗಿರುತ್ತವೆ. ಈ ಮೂರರ ಮುಪ್ಪುರಿಯೇ ಶರಣ. ಶರಣನ ಅರಿವೇ ಶಿವಪ್ರಪಂಚ ಮರವೆಯೇ ಮಾನವನ ಭವ ಪ್ರಪಂಚ. ಅರಿದಡೆ ಶರಣ ಮರೆದಡೆ ಮಾನವ !

ತನ್ನ ತಾನರಿದ ಮೇಲೆ ಇನ್ನೇನನ್ನು ಅರಿದಡೆಯೂ ಫಲವಿಲ್ಲ. ತನ್ನ ತಾನರಿಯದೇ ಇನ್ನೇನನ್ನು ಅರಿದಡೆಯೂ ಫಲವಿಲ್ಲ. ಈ ತನ್ನತನವನ್ನು ತೋರಿಸಿ ಕೊಡುವವನೇ ಗುರುವು. ಇತರರಿಗೆ ಬುದ್ಧಿ ಹೇಳುವದು ಎಷ್ಟು ಸುಲಭವೋ ತನ್ನನ್ನು ತಾನು ಅರಿಯುವದು ಅಷ್ಟೇ ಕಠಿಣವು. ಅರಿತು ಆಚರಿಸಿ ಬುದ್ಧಿಹೇಳುವ ಕೆಚ್ಚು ಗುರುವಿನದು. ಕಳ್ಳತನಕ್ಕೆ ಶಿಕ್ಷೆ ಇರುವದಾದರೂ ವೈಗಳ್ಳತನಕ್ಕೆ ಶಿಕ್ಷೆ ಇರುವದಿಲ್ಲಾ. ಆ ಶಿಕ್ಷೆಯನ್ನು ದೇವರೇ ಕೊಡುತ್ತಾನೆ. ಅದಕ್ಕೆ ಅವಧಿಯಿಲ್ಲಾ. ಅಜ್ಞಾನ ಜಾಲದಲ್ಲಿ ಬಿದ್ದು ಹೊರಳಾಡುತ್ತಿರುತ್ತಾನೆ. ಈ ವೈಗಳ್ಳತನವು ಬಹು ಸುಲಭವಾಗಿ ಆಚರಿಸಿ ತನ್ನತನದ ಅರಿವನ್ನೇ ಮರೆಮಾಡಿಸುತ್ತದೆ. ಇದಕ್ಕೆ ಬಾಹ್ಯ ಸತತೋದ್ಯೋಗದಂತೆ ಅಂತರಿಕ ತತ್ತ್ವಜ್ಞಾನ ಪ್ರಜ್ಞೆಯು ಬೇಕು. ಶ್ರೀಮನ್ನಿಜಗುಣರು 'ಅರುನಾನೆಂದು ವಿಚಾರಿಸು' ಎಂದೂ, ಶ್ರೀ ಸರ್ಪಭೂಷಣರು 'ತನ್ನ ತಾನರಿದಡೆ ಮುಕ್ತ, ತನ್ನ ತಾನರಿಯದೊಡೆ ಹೇಗೆ ವಿರಕ್ತ ? ಎಂದು ಹಾಡಿದುವರು. ಈ ತನ್ನ ತನದರಿವನ್ನು ಮಾಡಿಸಿ ಕೊಡುವ ಸಾಧನವೇ ಲಿಂಗಾಂಗ ಸಾಮರಸ್ಯಜ್ಞಾನ, ಇದನ್ನು ಕ್ರಮವಾಗಿ ತೋರಿಸಿ ಕೊಡುವಾತನೇ ಸದ್ಗುರುವು. ಸಾಧನೆಗೆ ಕಷ್ಟವೂ, ಸಿದ್ಧಿಗೆ ಸಂಶಯವೂ ಆಗಿ, ಕೇವಲ ಭಾವ ಕಲ್ಪನೆಯಲ್ಲಿ ಮಾಡಿ ಮರೆಯಾಗುವ ಜೀವಾತ್ಮ-ಪರಮಾತ್ಮ ಸಂಯೋಗಕ್ಕಿಂತಲೂ, ಕಣ್ಣಿಗೆ ಕಾಣಿಸುವ ಲಿಂಗ ಮತ್ತು ಅಂಗವೆರಡರ ಸತ್ಯ ಸಂಯೋಗದಿಂದ ಸತ್ಯದ ಜ್ಞಾನವೇ ಬಾಹ್ಯಾಂತರ ಜ್ಯೋತಿಯಾಗಿ ಪ್ರಕಾಶಮಾನವಾಗುವನು. ಇದು ಲಿಂಗಯೋಗೀ ಶರಣರ ಪ್ರತ್ಯಕ್ಷ ದರ್ಶನವು. ಇದೇ ಶಾಶ್ವತ ಸಮರಸವು. ಈ ಸಮರಸದ ಮೂಲ ಕರ್ತೃವೇ ಗುರುವು.

ವೀರಶೈವರ ಅಷ್ಟಾವರಣಗಳಲ್ಲಿ ಮೊದಲಿನ ಸ್ಥಾನವೇ ಗುರು. ಗುರುವಿನ ಹೊಣೆಯು ಸಮಾಜದಲ್ಲಿ ಬಹಳ ಇದೆ. ರುಚಿ ತೃಪ್ತಿಗೆ ಆಧಾರವಾಗಿರುವದೇ ರೂಪು. ಅನುಭವ ಆನಂದಗಳ ಮೂಲವೇ ಅರಿವು. ಲಿಂಗ ಜಂಗಮಕ್ಕೆ ಆಶ್ರಯವೇ ಗುರುವು.

"ಗುರುವಿನ ಕರುಣದಿಂದ ಲಿಂಗ ಜಂಗಮ
ಪಾದೋದಕ ಪ್ರಸಾದ ಸಜ್ಜನ ಸದ್ಭಕ್ತರ ಗೋಷ್ಠಿಯ

ಕಂಡೆ. ನಾ ಹುಟ್ಟಲೊಡನೆ ವಿಭೂತಿ ಪಟ್ಟವಕಟ್ಟಿ
ಸದ್ಗುರು ಸ್ವಾಮಿ ಲಿಂಗ ಸ್ವಾಯತಸ ಮಾಡಿದ"

ಎಂದು ಶ್ರೀ ಅಕ್ಕಗಳ ನಿರ್ವಚನ.

ಗುರುವು ಸಮಾಜದ ಸರ್ವ ಹಿತಕಾರ್ಯಕ್ಕೆ ಅತೀ ಸಮೀಪವಾಗಿದ್ದು ಲಿಂಗ ಧಾರಣ ಕ್ರಿಯೆಯಿಂದ ಲಿಂಗೈಕ್ಯದವರೆಗೂ ನಡೆಯುವ ಸರ್ವ ಮಂಗಲ ಕಾರ್ಯಗಳಿಗೂ ಭಕ್ತರ ಯೋಗಕ್ಷೇಮಕ್ಕೂ ಹೊಣೆಯಾಗಿ ಪೂಜ್ಯನಾಗಿದ್ದಾನೆ. ಭಕ್ತನ ಅಂಗ ಗುಣಗಳನ್ನು ಕಳೆದು ಲಿಂಗ ಗುಣಗಳನ್ನು ಕರುಣಿಸುವ ಶಕ್ತಿ ಗುರುವಿಗೇ ಇರುವದರಿಂದ ಗುರುವು ಸಾಕಾರ ಚಿದ್ರೂಪನೆನಿಸುವನು.

ಜಗವಗಲ ಮುಗಿಲಗಲ ಶಿವನಿಂದ ನಮಗೇನಾಗಬೇಕಾಗಿದೆ ಅವನ ಅಗಲಕ್ಕೆ ನಾವು ಹಿಗ್ಗುವದಂತೂ ಅಸಾಧ್ಯವಾದ ಮಾತು. ಕಾರಣ ಆ ಅಗಲವನ್ನು ಮೊದಲು ನಮ್ಮ ಅಗಲಕ್ಕೆ ಹೊಂದಿಕೊಳ್ಳುವಂತೆ ಹಿಡಿದಿಡುವ ಶಕ್ತಿ ಕೇವಲ ಗುರುವಿನೊಬ್ಬನಿಗೆ ಸಾಧ್ಯ. ಈ ರೀತಿಯಾದ ಒಂದು ಅತ್ಯದ್ಭುತ ಶಕ್ತಿಯನ್ನು ಹುಟ್ಟಿನಿಂದಲೇ ಪಡೆದುಕೊಂಡು ಬಂದವರು ಸಗರನಾಡಿನ ಮಾಗಣಗೇರಿ ಶ್ರೀ ಷ॥ ಬ್ರ॥ ಚನ್ನವೃಷಭೇಂದ್ರ ಮಹಾಸ್ವಾಮಿಗಳವರು. ಶರಣ ದಂಪತಿಗಳಾದ ಗುರುಬಸವಾರ್ಯ–ಹಂಪಮ್ಮನವರ ಉದರದಲ್ಲಿ ಜನಿಸಿ ಬಾಲ್ಯದಿಂದಲೇ ಲೀಲಾಮಯರಾಗಿ ಶ್ರೀ ಎಡೆಯೂರ ಸಿದ್ಧಲಿಂಗರಂತೆ ಬೆಳೆದರು. ಆಗರ್ಭ ಶಿವಯೋಗಿಗಳಾದ ಶ್ರೀ ಗುರು ಚನ್ನವೃಷಭೇಂದ್ರ ಮಹಾಸ್ವಾಮಿಗಳಿಗೆ ಲೋಕದ ಪರಿಮಿತಿಯ ವಿದ್ಯಾಭ್ಯಾಸವು ರುಚಿಸುವದೆಂತು ? ಪವಾಡ ಪುರುಷನಿಗೆ ಕ್ಷುದ್ರ ಜಡನಿದ್ರಾ ಪವಡಿಕೆಯೆ ? ನಿತ್ಯ ಜಾಗ್ರತರಾಗಿ ನಿತ್ಯ ಲಿಂಗಾರ್ಚನಾರತರಾಗಿ, ಲಿಂಗಭೋಗೋಪಭೋಗಿಗಳಾಗಿ ಲಿಂಗವಾಗಿದ್ದು ಲಿಂಗನೊಳಗಿದ್ದು ಲಿಂಗೈಕ್ಯರಾದವರು ಅವಧೂತ ಸಿದ್ಧರಂತೆ ಅದ್ವೈತದ ಗುಂಗಿನಲ್ಲಿರುವವರನ್ನು ಶಿವದೀಕ್ಷೆಯಿಂದ ಎಚ್ಚರಗೊಳಿಸಿ ಸರ್ವಾಂಗ ಲಿಂಗವ-ಯತ್ವವನ್ನು ಕರುಣಿಸಿದ ಮಹಾಂತರು ಶ್ರೀ ಬಸವಾದಿ ಪ್ರಮಥರ ಸನ್ಮಾರ್ಗ ಪ್ರದೀಪವನ್ನು ಸಗರ ನಾಡಿನಲ್ಲೆಲ್ಲ ಸಾಗರದಂತೆ ತುಂಬ ವಿಸ್ತಾರವಾಗಿ ಹಬ್ಬಿಸಿದವರು ಪಂಚಾಚಾರಗಳ ಚಾರುವರ್ತನೆಯಿಂದ ನಿತ್ಯ ಷಟ್ ಸ್ಥಲಗಳನ್ನು ಆಚರಿಸಿ ಮುಟ್ಟಿ ಮುಟ್ಟಿ ತೋರಿಸಿದವರು ಅಷ್ಟಾವರಣ ಸಂಪನ್ನರು.

ಇಂಥ ಮಹಿಮರ ಚರಿತ್ರೆಯನ್ನು ಶ್ರೀ ಸಿದ್ಧರಾಮಯ್ಯನವರು ಹಿರೇಮಠ ಸಾ॥ ಮುರಡಿ ತಾ॥ ಸಿಂದಗಿ ಅವರು ಬಹಳ ಚನ್ನಾಗಿ ಗ್ರಹಿಸಿ ಅವರ ಲಿಂಗ ಯೋಗದ ಜೀವನವನ್ನು ಅರಗಿಸಿಕೊಂಡು ಬಹು. ಸಮರ್ಥ ರೀತಿಯಿಂದ ಕಾವ್ಯ ಮಯವಾಗಿ ರಚಿಸಿದ್ದಾರೆ.. ಶಿವಕವಿಗಳಿಗೆ ಪುರಾಣ ರಚಿಸಲು ಅನುಕೂಲವಾಗು ವಷ್ಟು ವಿಸ್ತಾರದಿಂದ ಸುಲಭವಾದ ಶೈಲಿಯಿಂದ ಬಣ್ಣಿಸಿದ್ದಾರೆ. ಸಮುದ್ರ ಪರ್ವತ ನದಿ ಅಡವಿ ಸಂಪತ್ತು ಋತುಮಾನಾದಿ ಅರ್ವಾಚೀನ ಸಾಹಿತ್ಯ ಪರಂಪರೆಯನು ಬಿಡದೇ ಆಧುನಿಕ ಸುಲಭ ಶಬ್ದ ಪ್ರಯೋಗಗಳಿಂದಲೂ ಕಥೆಯು ಕುತೂಹಲ ವಾಗುವಂತೆ ಬೆಳೆಸಿಕೊಂಡು ಹೋಗಿದ್ದಾರೆ. ಕಾಣದ ಕೈಲಾಸ ವರ್ಣನೆಯನ್ನು ಮೊದಲು ಮಾಡಿದ್ದರೂ ನಂತರ ಮರ್ತ್ಯವನ್ನೇ ಮಹಾ ಮನೆಯನ್ನಾಗಿಸಿದ ಶರಣ ತತ್ವಗಳನ್ನು ಶ್ರೀ ಗುರುಗಳವರ ನಡೆ ನುಡಿಯಿಂದಲೇ ತಿಳಿಸುತ್ತಾ ಶಿವಾನುಭವ ನಿಷ್ಠೆಯನ್ನೂ, ಶಿವಾನುಭಾವದ ಐಕ್ಯ, ಸಮಾಧಿ ಪರಮಪದ ವಿಶ್ರಾಂತ ಸ್ಥಿತಿ ಯನ್ನೂ ಹಂತ ಹಂತವಾಗಿ ತೋರಿಸುವಲ್ಲಿ ಶ್ರೀ ಸಿದ್ಧರಾಮಯ್ಯನವರು ಸಹ ಲಿಂಗಾನುಭವದಲ್ಲಿ ತಾವು ಎಂಥ ಬಲ್ಲಿದರೆಂಬುದನ್ನು ಮನಗಾಣಿಸಿದ್ದಾರೆ. ಮೌನದ ಹೆಜ್ಜೆಯನ್ನು ಮೌನೇ ಅರಿಯುವಂತೆ ಶ್ರೀಗುರು ಚನ್ನವೃಷಭೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ಸರ್ವಾಂಗ ಲಿಂಗ ಸುಖವನ್ನು ಕಥಾ ಕರ್ತೃಗಳು ಸಹ ಆ ಲಿಂಗಸುಖವನ್ನು ಅನುಭವಿಸಿಯೇ ಬರೆದಿದ್ದಾರೆ. ವಿಶೇಷವಾಗಿ ಶ್ರೀಗಳ ಒಡ ನಾಡಿಗಳೂ ಇದ್ದ ಮೂಲಕ ಅವರ ಶಾಂತಕರುಣ ಸ್ಥಿತಿಯನ್ನೂ, ವೀರರೌದ್ರಾದಿ ಭಯಂಕರ ಕೋಪ ಪ್ರಸಂಗಗಳನ್ನು ಭಯ ಭಕ್ತಿ ಹುಟ್ಟುವಂತೆ ಚಿತ್ರಿಸಿದ್ದಾರೆ. ಶ್ರೀಗಳನ್ನು ಪ್ರತ್ಯಕ್ಷ ಪರವಸ್ತುವಾಗಿ ಕಾಣುವ ಶ್ರೀ ಮುರಡಿ ಸಿದ್ಧರಾಮಯ್ಯ ನವರಿಗೆ ವೀರಶೈವರ ಷಡ್ವಿಧ ಭಕ್ತಿಗಳು ಅಲ್ಲಲ್ಲಿ ಸ್ಪಷ್ಟವಾಗಿ ಮೂಡಿಬಂದಿವೆ. ಇದು ಭಕ್ತಿಯ ಶೈಲಿ. ಶಬ್ದಾಡಂಬರದ ವಾಗ್ಯುದ್ಧವಲ್ಲ.

ಇಂಥ ಒಂದು ಪವಿತ್ರ ಗ್ರಂಥಕ್ಕೆ ಮುನ್ನುಡಿ ಬರೆಯಲು ಪ್ರೇರೇಪಿಸಿದ ಶ್ರೀ ಷ ॥ ಬ್ರ ॥ ಚನ್ನವೃಷಭೇಂದ್ರ ಶಿವಾಚಾರ್ಯ ಶಿವಯೋಗಿಗಳವರ ಕೃಪೆಯಿಂದಲೇ ಕೇವಲ ಕೆಲ ಅಲ್ಪ ಪ್ರಮಾಣ ಶಬ್ದ ಪುಷ್ಪಗಳನ್ನು ಅವರ ಅಡಿಗಳಿಗೆ ಅರ್ಪಿಸಿ ದ್ದೇನೆ. ಅವರು ಲಿಂಗೈಕ್ಯರಾಗಿದ್ದರೂ ಅವರನ್ನು ಸ್ಮರಿಸುವವರ ಹೃದಯದಲ್ಲಿ

ಸದಾ ಜಾಗ್ರತರಾಗಿ ಪ್ರಕಾಶಮಾನರಾಗಿ ತಮಗಿಷ್ಟದವರಿಂದ ಸೇವೆಕೊಳ್ಳುತ್ತಿದ್ದು ಈಗ ನನಗೆ ಆ ಭಾಗ್ಯ ದೊರೆತದ್ದು ಪುಣ್ಯ ವಿಶೇಷವು.

'ಧನಹೀನರೂ ಗುಣಹೀನರೂ ಪಾಪಿಗಳೆಂದು' ರೂಢಿಯಲ್ಲಿದ್ದ ನುಡಿಯನ್ನು ಅಲ್ಲಗಳೆದು ಶ್ರೀ ವೇದವ್ಯಾಸರು ಪುಣ್ಯಾತ್ಮರ ಸ್ಮರಣೆಯನ್ನು ಮಾಡದವರು ಪಾಪಿಗಳೆಂದು ನಿರೂಪಿಸಿದಂತೆ, ಇಂಥ ಪುಣ್ಯಾತ್ಮರ ಸ್ಮರಣೆಯಿಂದ ನಮ್ಮ ಜೀವನವನ್ನು ಪವಿತ್ರಮಯವಾಗಿ ಮಾಡಿಕೊಳ್ಳುವದೇ ಸಾರ್ಥಕ ಕ್ರಮವು.

ಬಸವೇಶ್ವರ ಶಿವಪ್ಪ ತುಪ್ಪದ
ಭಕ್ತಿಭಂಡಾರಿ ಶಿವಕವಿ ಕುಲತಿಲಕ, ಶಿವ
ಸಾಹಿತ್ಯ ವಿಶಾರದ, ಶಿವಕವಿರತ್ನ
ಗದಗ

# ಹಾರೈಕೆ

ಕರ್ಮ ಭೂಮಿಗೆ ಬೆಲೆ ಬಂದುದು ಧರ್ಮದಿಂದ. ವುಳಿದು ಬಾಳಿದುದು ಧರ್ಮಾತ್ಮರಿಂದ. ಮರ್ತ್ಯ ಮಹಾಮನೆಯಾಗಿಸಿದ ಮಣಿಹ ನಡೆಸಿದರು., ಶಿವ ಶರಣರೆಂದು ಹೆಮ್ಮೆಯಿಂದ ಹೇಳಬೇಕು. ಜೊತೆಗೆ ಈ ಹೆಮ್ಮೆಯ ಹಿನ್ನೆಲೆಯೂ ಅಷ್ಟೇ ಮಹತ್ವಪೂರಿತವೆಂದು ತಾಳ್ಮೆಯಿಂದ ತಲೆ ತುರಿಸಿ ಹೇಳಬೇಕು. ಸತ್ಪು-ತ್ರನ ಜನನದ ಹಿನ್ನೆಲೆಗೆ ತಂದೆ–ತಾಯಿಗಳು ಕಾರಣರಾದಂತೆ, ಶರಣರ ಧರ್ಮ ಕ್ರಾಂತಿಯ ಹಿನ್ನೆಲೆಗೆ ಪುರಾತನರು ಹಾಗೂ ಪೂರ್ವಾಚಾರ್ಯರು ಕಾರಣರಾಗಿದ್ದಾರೆ ! ಎಂದು ವೈಚಾರಿಕರು ಒಪ್ಪಿಕೊಳ್ಳುತ್ತಾರೆ.

ವೀರಶೈವ ಧರ್ಮವನ್ನು ಸ್ಥಾಪಿಸಿ, ಅದರ ಸ್ಥಿರತೆ ಆಚಾರ್ಯರು ಏನು ಮಾಡಿದರೆಂಬುದನ್ನು ತಿಳಿದುಕೊಳ್ಳುವದು ಅಗತ್ಯ. ಪರಶಿವನ ಸಂಕಲ್ಪದಲ್ಲಿ ಪಂಚಾಚಾರ್ಯರು ಉದಿಸಿ ವೀರಶೈವ ಸಿದ್ಧಾಂತ ಸ್ಥಿರಗೊಳಿಸಲು ಪಂಚಪೀಠ-ಗಳನ್ನು ಸ್ಥಾಪಿಸಿದರು. ನಂತರ ಭಾರತದ ತುಂಬ ವೀರಶೈವ ವಿಜೃಂಸಲೆಂದು ಪಂಚರಂಗಮಠ, ಸಹರಂಗಮಠ, ಗುರು ಮಠ, ಚರ ಮಠ, ಗಣಮಠಗಳನ್ನು ಸ್ಥಾಪಿಸಿದರು. ಅವೇ ಹಿರಿಯ ಮಠ, ಚಿಕ್ಕ ಮಠ, ಚಿರಂತಿ ಮಠ ಮುಂತಾದ ಹೆಸರಿನಲ್ಲಿ ವಿಕಸಿತಗೊಂಡವು. ನಾಡಿನ ಮೂಲೆ ಮೂಲೆಯಲ್ಲಿ ಧರ್ಮ ತತ್ವ ಪ್ರಸಾರಕ್ಕೆ ಅನುಕೂಲವಾಗಲೆಂದು ಊರಿಗೊಂದು ಕೇರಿಗೊಂದು ಮಠಗಳನ್ನು ಸ್ಥಾಪಿಸಿದ ಆಚಾರ್ಯರ ಪರಂಪರೆ ಧರ್ಮದ ಉಳುವಿಗೆ ವೃದ್ಧಿಗೆ ಕಾರಣವಾಗಿದೆ. ಧರ್ಮ ಪೀಠಾಧಿಪರಾಗಿ ಧರ್ಮ ಕ್ರಾಂತಿಯನ್ನು ಅಖಂಡ ಭಾರತದಾದ್ಯಂತಗೈದ ಆಚಾರ್ಯರ ಪ್ರಭೆ ಪರಂಪರೆ ಚಿರಂತನವಾಗಿದೆ. ಈ ಪವಿತ್ರ ಪರಂಪರೆಯ ಮಠಗಳಲ್ಲಿ ಒಂದಾಗಿದೆ ಮಾಗಣಗೇರಿ ಹಿರಿಯ ಮಠ. ಈ ಮಠಾಧ್ಯಕ್ಷರಾದ ಲಿಂ. ಶ್ರೀ. ಷ. ಬ್ರ. ಚನ್ನವೃಷಭೇಂದ್ರ ಶಿವಾಚಾರ್ಯ ಸ್ವಾಮಿಗಳು ಧರ್ಮೋದ್ಧಾರ ಕಾರ್ಯಗಳಿಂದ ಬಾಳಿ ಬೆಳಗಿ ಅಮರಾತ್ಮರಾದವರು. ಇವರ ಪಾವನ ಚರಿತ್ರದ ಗ್ರಂಥವಿದು. ಇದಕ್ಕೆ ಲೇಖ ಬರೆದು ಕೊಡಿ ಎಂದು ಈಗಿನ ಮಾಗಣಗೇರಿ ಮಠಾಧಿಪತಿಗಳಾದ ಶ್ರೀ. ಷ. ಬ್ರ. ವಿಶ್ವಾರಾಧ್ಯ ಶಿವಾಚಾರ್ಯ ಸ್ವಾಮಿಗಳ ಅಪೇಕ್ಷೆ ನೆರವೇರಿಸುತ್ತಿದ್ದೇನೆ.

ತಂದೆ ಎಷ್ಟೇ ದೊಡ್ಡವನಾಗಿರಲಿ, ಅವನ ಹೆಸರನ್ನುಳಿಸಿ ಬೆಳಗಿಸುವ ಮಗನಿದ್ದರೆ ಮಾತ್ರ ತಂದೆಯ ಹಾಗೂ ಮನೆಯ ಕೀರ್ತಿ ಹೆಸರು ಅಮರವಾಗುತ್ತದೆ. ಹೇಗೋ ಹಾಗೆ ಗುರುವಿನ ಘನತೆಯನ್ನು ಭಿತ್ತರಿಸುವ ಧ್ಯೇಯವಾದಿಯಾಗಿ ಶಿಷ್ಯ ಬಂದರೇನೇ ಗುರುವಿನ ಹಾಗೂ ಗುರು ಮಠದ ಹೆಸರು ನಾಲ್ದೆಸೆಗೆ ಪ್ರಕಾಶವಾಗುತ್ತದೆ. ಈ ಆದರ್ಶದಲ್ಲಿ ಈಗಿನ ಮಾಗಣಗೇರಿ ಶ್ರೀ ಪಟ್ಟಾಧ್ಯಕ್ಷರು ತಮ್ಮ ಗುರು ಚನ್ನವೃಷಭೇಂದ್ರರ ಚರಿತ್ರವನ್ನು ಬರೆಯಿಸಿ ಭಕ್ತರ ಕೈಗೆ ನೀಡುತ್ತಿರುವದು ಸ್ತುತ್ಯ, ಅನುಕರಣೀಯವಾಗಿದೆ. ಈ ಚರಿತ್ರೆಯನ್ನು ಬರೆದ ಶ್ರೀ ಮುರಡಿಯ ಸಿದ್ಧರಾಮಯ್ಯನವರ ಬಾಳು ಸಾರ್ಥಕ. ಇದನ್ನು ಓದಲು ಪ್ರಾರಂಭಿಸಿದರೆ ಪೂರ್ಣ ಮುಗಿಯುವವರೆಗೆ ಬಿಡಲು ಮನಸ್ಸಾಗುವದಿಲ್ಲ. ಆ ರೀತಿ ಸೊಗಸಾದ ಶೈಲಿಯಲ್ಲಿ ಪೂಜ್ಯರ ಚಾರಿತ್ರವನ್ನು ಲೀಲಾ ಜಾಲವಾಗಿ ಬರೆದಿರುವ ಲೇಖಕರ ಗುರು ಭಕ್ತಿ ಹಾಗೂ ಲೇಖನ ಶಕ್ತಿ ವರ್ಣನಾರ್ಹವಾಗಿದೆ. ಲಿಂಗ ಪೂಜಾಲೋಲರಾಗಿ ಭಕ್ತರನ್ನುದ್ಧರಿಸುವಲ್ಲಿ ಅನಂತ ಲೀಲೆಗಳನ್ನು ಮಾಡಿದ ಪವಾಡ ಪುರುಷರು ಚನ್ನವೃಷಭೇಂದ್ರ ಶಿವಾಚಾರ್ಯರು. ಸಕಲ ಜೀವರಿಗೆ ಲೇಸನೆ ಬಯಸುತ್ತ ಕುಲಜರಾಗಿ ಬಾಂದ ಬೆಲೆಯುಳ್ಳ ಬಾಳಿಗರು ಇವರು. ಪೂಜ್ಯರ ಬದುಕು ಜೀವರಿಗೆ ದಾರಿದೀಪ ! ಕಾರಣ ಈ ಹೊತ್ತಗೆಯನ್ನು ಕೊಂಡೋದಲು ಕಣ್ಮನ ಭಾವನೆಗಳು ಪವಿತ್ರವಾಗುತ್ತವೆ. ಪೂಜ್ಯರ ಬಾಳ್ನುಡಿ ನಡೆಗೆ ರೂಢಿಸಿಕೊಂಡರೆ ಜೀವನವೇ ಪಾವನವಾಗುತ್ತದೆ. ಚರಿತ್ರ ನಾಯಕರಿಂದ ಮಾಗಣಗೇರಿ ಸುಕ್ಷೇತ್ರವಾಗಿದೆ. ಈ ಕ್ಷೇತ್ರ ವೃದ್ಧಿಗೆ ಟೊಂಕ ಕಟ್ಟಿ ನಿಂತಿದ್ದಾರೆ ವಿಶ್ವಾರಾಧ್ಯ ಶ್ರೀಗಳು ಗುರು ಚನ್ನ ವೃಷಭೇಂದ್ರರ ಗದ್ದಿಗೆ ಗುಡಿ ಕಟ್ಟಿಸಿದ್ದಾರೆ. ಅವರಿಗೆ ತನ್ನ ಶಿಷ್ಯ ತಾವೆಂಬ ಘನತೆ ತೋರ್ಪಡಿಸಿದ್ದಾರೆ, ಗುರು ತಾಣ ಮಾತಾಣವಾಗಿಸುವ ಸಂಕಲ್ಪ ತೊಟ್ಟಿದ್ದಾರೆ. ಇವರ ಮುಮ್ಮಣಿಹವನ್ನು ನೆನೆದರೆ ಹೀಗಿರಬೇಕಪ್ಪ ಪಟ್ಟಾಧ್ಯಕ್ಷರಾದವರು ! ಎಂದು ಉದ್ಗಾರ ತೆಗೆಯುತ್ತಿದೆ ಎನ್ನ ಮನಸ್ಸು

ಗ್ರಾಮವೆ ನನ್ನ ನೆಲೆ, ನಾಡೆ ನನ್ನ ಮನ, ಸಮಾಜವೆಲ್ಲರು ನನ್ನ ಧರ್ಮ ಸಂತಾನವೆಂದು ತಿಳಿದು ವಿಶ್ವ ಕುಟುಂಬಿಯಾಗಿ ಬಾಳಬೇಕು ಪಟ್ಟಾಧ್ಯಕ್ಷರು. ಹೊರತಾಗಿ ಸಹ ಕುಟುಂಬಿಯಾಗಿ ಪ್ರಾಪಂಚಿಕರಂತೆ ಬಾಳುತ್ತ, ಮುಗ್ಧ ಭಕ್ತರನ್ನು ಉದ್ಧರಿಸದೆ ಸಮಾಜವನ್ನು ಛಿದ್ರಗೊಳಿಸ ಸ್ವಾರ್ಥ ಸಾಧಕರಾದ ಪಟ್ಟಾಧ್

ಕ್ಷರೆ ಬಹಳಿದ್ದ ಶೋಚನೀಯ ಈ ಪರಿಸ್ಥಿತಿಯಲ್ಲಿ ಈ ಮಾಗಣಗೇರಿ ಶ್ರೀಗಳು ಭಕ್ತರುದ್ಧಾರದ ಭರವಸೆಯಲ್ಲಿ ಸಾಗಿದ್ದು ನೆನೆಯುವಂತಿದೆ. "ಭಕ್ತರುದ್ಧಾರಕ ರಾದ ಗುರು ಸ್ಥಲದ ಅಯ್ಯನವರು ಸುಧಾರಿಸಬೇಕು. ಹೆಚ್ಚು ಕಡಿಮೆ ಎಂಬ ಕಚ್ಚಾಟವನ್ನು ಇನ್ನಾದರೂ ಬಿಟ್ಟು ಅಯ್ಯನವರು ನಾವೆಲ್ಲ ಒಂದೇ ಎಂಬ ನಿಜ ವನ್ನರಿತು ಸಾಗಿದಾಗ ಮಾತ್ರ ನಮ್ಮ ಆಚಾರ್ಯರು ಕಂಡ ಸರ್ವತೋಮುಖ ಗ್ರಾಮ-ನಾಡ-ದೇಶ ಸುಧಾರಣೆ ಸಾಧ್ಯ ! ಎಂದು ಹೇಳುತ್ತಿರುವ ಇವರ ಹೃದಯ ಶ್ರೀಮಂತಿಕೆ ಎಲ್ಲ ಪಟ್ಟದಪ್ಪಗಳಿಗೆ ಬರಬೇಕಾಗಿದೆ.

M. A. ಪದವೀಧರರು, ವಿಚಾರ ವಿವೇಕ ಶೀಲರು, ಆಚಾರವಂತರು, ಧರ್ಮ ಕಾರ್ಯ ನಿರತರು ಆದ ಈ ಶ್ರೀಗಳನ್ನು ಪಡೆದ ಮಾಗಣಗೇರಿ ಮಠ ದ್ದೊಂದು ಸುಪ್ರಕಾಶದ ಶುಭೋದಯವೆಂದು ನಮ್ಮ ಅನಿಸಿಕೆ. ಸದಾ ಸಂಚಾರ ಮೂರ್ತಿಗಳಾಗಿ ಧರ್ಮ ಕಾರ್ಯದಲ್ಲಿ ಭಾಗಿಗಳಾಗುತ್ತಾರೆ. ನಮ್ಮ ಕಲಕೇರಿ ಮಠದಲ್ಲಿ ನಾವು ನಡೆಸುವ ಧರ್ಮ ಪ್ರಸಾರ ಕಾರ್ಯಕ್ರಮಕ್ಕೆ ಆಗಮಿಸಿ ಶೋಭೆ ನೀಡುತ್ತಾರೆ. ಸಭೆ ಸಮ್ಮೇಲನಗಳಲ್ಲಿ ಭಾಗವಹಿಸುತ್ತ ಆಚಾರ್ಯರ ಸಂದೇಶವನ್ನು ಸಾರುತ್ತಾರೆ. ಸಮಾಜ ಸಂಘಟನೆಗೆ ಶ್ರಮಿಸುತ್ತಾರೆ. ಇವರ ಮಾರ್ಗದರ್ಶಿತ್ವದಲ್ಲಿ ಮಾಗಣಗೇರಿ ಭಾಗ ಉದ್ಧಾರವಾಗಬೇಕಾಗಿದೆ. ಆಗಲಿ ! ಎಂದು ಹಾರೈಸಿ ಈ ಲೇಖನ ಸೇವೆಯನ್ನು ಶ್ರೀ ಚನ್ನವೃಷಭೇಂದ್ರರ ಜಾಗ್ರತ ಸನ್ನಿಧಿಗೆ ಅರ್ಪಿಸುವೆ.

|| ಇತಿ ಶಿವಂ ||

ಗದಗ                ಸಂಗೀತ ರತ್ನಾಕರ

25-10-84        ಶ್ರೀ ಗುರು ಸ್ವಾಮಿ ಕಲಕೇರಿ ಗವಾಯಿಗಳು

# ಲೇಖಕನ ನುಡಿ



ನನ್ನ ಬಯಕೆಯ ಬಳ್ಳಿಗೆ ನೀರೆರೆದು ಪೋಸಿಸಿ ಫಲ ಬಿಡುವವರೆಗೂ ಆಶ್ರಯದಾತಳಾಗಿದ್ದ ನನ್ನ ಧರ್ಮಪತ್ನಿ ದಿ|| ಸೌ|| ಸುವರ್ಣಲತಾ ಫಲವನ್ನು ಸ್ವೀಕರಿಸಲಾರದೇ ಹೊರಟು ಹೋದಳು. ಅಳಿದ ಮೇಲೆ ಅವಳನ್ನು ಇಂದು ನಾನು ಮಾತಾಡಿಸಲಾರೆನಾದರೂ ಅವಳ ಅದೃಶ್ಯ ಜೀವ ನನ್ನನ್ನು ಮಾತನಾಡಿಸುತ್ತಲೇ ಇದೆ. ಹೃದಯೇಶ್ವರಿಗೆ ಸ. ಹೃದಯದಿಂದ ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸಿ ಲೇಖಕನ ನುಡಿ ಬರೆಯುತ್ತೇನೆ.

ಚರಿತ್ರೆಯನ್ನೇನೋ ಬರೆದಿದ್ದೇನೆ. ಆದರೆ ಲೇಖಕನ ನುಡಿ ಬರೆಯುವುದೇ ಉದಾಸೀನವಾಗಿದೆ. ಚರಿತ್ರೆ ಓದಿದಾಗ ಬರೆದ ಉದ್ದೇಶ ಹಾಗೂ ಅದರ ಮಹತ್ವ ಸ್ಪಷ್ಟಪಡಿಸುತ್ತದೆ. ಅದರ ಬಗ್ಗೆ ತಮಗೇನೂ ಹೇಳುವ ಕಾರಣವಿಲ್ಲ. ಮನುಷ್ಯ ಅಳಿದ ಮೇಲೆ ಅವನ ಬಾಳಿನಲ್ಲಿ ಏನು ಉಳಿಯುತ್ತದೆ ಎಂಬುದನ್ನು ನಾವೆಲ್ಲ ಹುಡುಕಿ ನೋಡಿದಾಗ ಕಣ್ಣಿಗೆ ಕಾಣುವುದು ಚಾರಿತ್ರ್ಯ ಮನುಷ್ಯ ಚಾರಿತ್ರ್ಯವಂತನಾಗಿ ಬಾಳಿ ಬದುಕಬೇಕಾದರೆ ಅವನು ಮುಖ್ಯವಾಗಿ ಭಕ್ತಿ ಮಾರ್ಗವನ್ನೇ ಅನುಸರಿಸಬೇಕಾಗುತ್ತದೆ. ನಿತ್ಯಾನಂದವಾಗಿ ಸಂತೋಷದಿಂದ ಇರಲು ಪ್ರಯತ್ನಿಸುವ ಪ್ರತಿಯೊಬ್ಬ ಮಾನವನೂ ಆತ್ಮಜ್ಞಾನವನ್ನು ಅರಿಯಲೇಬೇಕು. "ಅರಿವೇ

ಗುರು" ಎಂಬ ಹಿರಿಯರೋಕ್ತಿಯಂತೆ, ನಾವು ಯಾರು ? ಏನಾಗಿದ್ದೇವೆ ? ಏನಾಗಬೇಕಾಗಿದೆ ಎಂಬುದನ್ನರಿತು ನಡೆಯಬೇಕು, ನುಡಿಯಬೇಕು.

ಇಲ್ಲಿ ನಿರೂಪಿಸಿದ ಯಾವ ಘಟನೆಗಳೂ ಕಲ್ಪಿತವಲ್ಲ. ಪವಾಡ ಪುರುಷೋತ್ತಮರ ಪವಾಡಗಳನ್ನು ಅರ್ಥವತ್ತಾಗಿ ಮನದಟ್ಟಾಗುವಂತೆ ಬಣ್ಣಿಸಿದ್ದೇನೆ. ಬದುಕು ಕಲಾತ್ಮಕವಾಗಿ ರೂಪುಗೊಳ್ಳಲು ಎಷ್ಟು ಅವಶ್ಯವೋ ಅಷ್ಟನ್ನು ಇಲ್ಲಿ ಬಣ್ಣಿಸಲಾಗಿದೆ.

ಈ ಪುಸ್ತಕ ಬರೆಯಲು ಮೂಲ ಪ್ರೇರಣೆಯಾದವರು ಗುರುಗಳೇ ಎಂದು ಹೇಳಲು ಹೆಚ್ಚಿನ ಸಂತೋಷವಾಗುತ್ತದೆ. ನನಗೆ ಅದೇಕೊ ಯಾರಾದರೊಬ್ಬರು ಮಹಾಸ್ವಾಮಿಗಳ ಕಥೆ ಬರೆಯಬೇಕೆಂಬ ಬಯಕೆವುಂಟಾಯಿತು. ಅಲ್ಲದೆ ಮುಂದಿನ ಯಾವದೇ ಬರವಣಿಗೆಗೂ ನಾಂದಿಯಾಗಿ ಒಂದು ಒಳ್ಳೇ ಮಹತ್ವವಾದ ನಿಜವಾದ ಪವಾಡ ಪುರುಷನ ನಿಜಜೀವನದ ಕಥೆಯನ್ನು ಬರೆಯಬೇಕೆಂದು ಇಚ್ಛೆಯುಳ್ಳವನಾಗುವದಕ್ಕೂ ಮಾಗಣಗೇರಿಯ ಶ್ರೀ ಶಿವರಾಯಗೌಡ ಪಾಟೀಲರ ದರ್ಶನವಾಗುವದಕ್ಕೂ ಬೀಜಾಂಕುರವಾಗಲು ನಾಂದಿಯಾಯಿತು. ನನ್ನ ಬಾಲ್ಯ ಮಿತ್ರರಾದ ಶಿವರಾಯಗೌಡ ಗುರುವರ್ಯರ ಮೂರು ನಾಲ್ಕು ಮಹತ್ವದ ಪವಾಡಗಳನ್ನು ಅರ್ಥವತ್ತಾಗಿ ವರ್ಣಿಸಿ ಹೇಳಿದರು. ಇದು ನನ್ನ ಇಚ್ಛಾಮನಸ್ಸಿನ ಮೇಲೆ ಮತ್ತಷ್ಟು ಪರಿಣಾಮ ಬೀರಿತು. ಈ ವಿಷಯವನ್ನು ಮನೆಗೆ ಬಂದು ನನ್ನ ಹೃದಯೇಶ್ವರಿಗೆ ತಿಳಿಸಿದಾಗ ಅವಳಿಂದ ದೊರೆತ ಪ್ರೋತ್ಸಾಹ ಬಣ್ಣಿಸಲಸದಳ. ಇದೇ ವಿಚಾರ ಹೊತ್ತ ನಾನು ಈಗಿನ ಗುರುಗಳಾದ ಷ|| ಬ್ರ|| ವೇದಾಂತಾಚಾರ್ಯ ಶ್ರೀ ಶ್ರೀ ವಿಶ್ವಾರಾಧ್ಯ ಮಹಾಸ್ವಾಮಿಗಳಲ್ಲಿ ಬಂದು ನಿವೇದಿಸಿಕೊಂಡಾಗ ಅವರೂ ಅದೇ ವಿಚಾರವಾಗಿ ವಿಷಯ ನಿರೂಪಣೆ ಹಾಗೂ ಘಟನೆಗಳ ಸಂಗ್ರಹ ಕಾರ್ಯಗಳಲ್ಲಿ ತೊಡಗಿರುವ್ರದಾಗಿ ತಿಳಿಸಿದ್ದೂ ಅಲ್ಲದೆ ಕೆಲವು ಮಹತ್ವದ ಪವಾಡಗಳನ್ನು ಹೇಳಿದರು. ಮತ್ತು ಬೇರೆ ಬೇರೆ ಕಡಿಂದ ತರಿಸಿದ ಪವಾಡಗಳ ಯಾದಿಯನ್ನೇ ನನ್ನ ಕೈಯಲ್ಲಿ ಕೊಟ್ಟರು. ಅಲ್ಲದೆ ಚರಿತ್ರೆಯ ನಿರ್ಮಾಣದ್ದ ಬಗ್ಗೆ ಒಳ್ಳೇ ಸೂಕ್ತವಾದ ಮಾರ್ಗದರ್ಶನವಿತ್ತು ಆಶೀರ್ವದಿಸಿ ಕಳಿಸಿಕೊಟ್ಟರು. ಗುರುಗಳ ಶಿಷ್ಯರಾದ ಶಹಾಪೂರದ ಸಾಹುಕಾರ ಚನ್ನಬಸವಪ್ಪ ಗಟ್ಟೀನ ಅವರ ದರ್ಶ-

ನಕ್ಕೆ ಹೋದಾಗ ಅತೀ ಆದರದಿಂದ ಬರಮಾಡಿಕೊಂಡು ಸತ್ಕರಿಸಿ ಮಹಾಸ್ವಾಮಿಗಳ ಎಲ್ಲ ಚರಿತ್ರೆಯನ್ನೂ ವಿವರಿಸಿದರು. ನನ್ನನ್ನು ಒಂದೆರಡು ದಿನ ಇರಿಸಿಕೊಂಡು ಗುರುಗಳ ಜೊತೆಗೆ ಕೈಕೊಂಡ ಪ್ರವಾಸದ ವರ್ಣನೆಯನ್ನು ಕೂಲಂಕುಷವಾಗಿ ಬಣ್ಣಿಸಿದರು. ಇದು ಅಲ್ಲದೆ ಬಾಲಪ್ಪಗೌಡ ಚಬನೂರ, ಗೊಲ್ಲಾಳಪ್ಪಗೌಡ ಮಾಗಣಗೇರಿ, ಮಹಾದೇವಪ್ಪ ಘೂಸಿ ಬಳಗಾನೂರ ಪುರವಂತ ಇವರೂ ಕೂಡಾ ತಮಗೆ ಗೊತ್ತಿದ್ದ ಮಹತ್ವದ ವಿಷಯಗಳನ್ನು ಹೇಳಿದರು. ಈ ಎಲ್ಲ ಸಹೃದಯರಿಗೂ ತುಂಬ ಕೃತಜ್ಞನಾಗಿದ್ದೇನೆ

ಈ ಪುಸ್ತಕದ ಹಸ್ತಪ್ರತಿಯನ್ನು ಅವಲೋಕಿಸಿ ತಪ್ಪು ತಡಿಗಳನ್ನು ತಿದ್ದಿ ಮುನ್ನುಡಿ ಬರೆದುಕೊಟ್ಟ ಶಿವಕವಿ ಬಸವರಾಜ ತುಪ್ಪದ ಅವರಿಗೂ ಎಲ್ಲ ಮಿತ್ರವರ್ಗಕ್ಕೂ ವಂದನೆಗಳನ್ನೂ ಸಲ್ಲಿಸುತ್ತೇನೆ. ಶಿವಕವಿಗಳನ್ನು ಪರಿಚಯಿಸಿದ ಬಂಧು ಚಂದ್ರಶೇಖರ ವಸ್ತ್ರದ ಸಿಂದಗಿ ಅವರ ಸ್ಮರಣೆ ನನ್ನ ಚಿತ್ತ ಪಟಲದ ಮೇಲೆ ಸ್ಥಿರವಾಗಿರಲೆಂದು ಹಾರೈಸಿ ಗುರುವರ್ಯರು ನಮ್ಮೆಲ್ಲರಿಗೂ ಮಂಗಳವನ್ನುಂಟು ಮಾಡಲಿ ಎಂದು ಬೇಡಿಕೊಳ್ಳುತ್ತೇನೆ.

ಸಿದ್ರಾಮಯ್ಯ ಸ್ವಾಮಿಮಠ B A.
ಮುರಡಿ

# ಪ್ರಕಾಶಕರ ನುಡಿ

ಪ್ರಥಮದಲ್ಲಿ ಶ್ರೀ ವೀರಶೈವ ಮತ ಸ್ಥಾಪನಾಚಾರ್ಯ ಶ್ರೀ ವಿಶ್ವಾರಾಧ್ಯ ಜ್ಞಾನ ಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾ ಸ್ವಾಮಿಗಳು ಜಂಗಮವಾಡಿ ಮಠ ಶ್ರೀ ಕ್ಷೇತ್ರ ಕಾಶೀ ಭಗವತ್ಪಾದರು ಈ ಪುಣ್ಯ ಚರಿತ್ರೆಗೆ ಶುಭಾಶೀರ್ವಾದ ದಯಪಾಲಿಸಿರುವದರಿಂದ ಮಹಾ ಸನ್ನಿಧಿಯವರ ಪಾದಪದ್ಮಂಗಳಿಗೆ ಅನಂತ ಶ||ಡೀ|| ನಮಸ್ಕಾರಗಳನ್ನರ್ಪಿಸಿ ಪ್ರಕಾಶಕರ ನುಡಿ ಪ್ರಾರಂಭಿಸುವೆ.

ಮಾನವನು ಎಷ್ಟೇ ವಿದ್ಯಾವಂತನಾಗಿರಲಿ, ಬುದ್ಧಿವಂತನಾಗಿರಲಿ, ಹಣಗಾರನಾಗಿರಲಿ, ಸದ್ವಂಶೀಯನಾಗಿರಲಿ, ಬಡವನಾಗಿರಲಿ, ಅವನಿಗೆ ಸಾಗರವನ್ನು ದಾಟಲಿಕ್ಕೆ ನಾವಿಕನ ಸಹಾಯವು ಅವಶ್ಯವಿರುವಂತೆ ಘೋರವಾದ ಸಂಸಾರ ಸಾಗರದಿಂದ ದಾಟಿಸಿ ಪರಮ ಮೋಕ್ಷ ತತ್ವವನ್ನು ಭೋಧಿಸತಕ್ಕವನೂ ಜಗದುದ್ಧಾರಕನೂ, ಅನುಭವಿಯೂ ಆದ ಸದ್ಗುರುವಿನ ಅವಶ್ಯಕತೆಯು ಬೇಕೇ ಬೇಕಾಗುವದು. ಈ ಸಂಸಾರದಲ್ಲಿ ಕಾಮಿನೀ ಕಾಂಚನಗಳಿಂದಲೇ ನಮಗೆ ಸುಖ ವುಂಟಾಗುವದು. ಮತ್ತಾವ ಭಯವೂ ಇಲ್ಲವೆಂದು ತಿಳಿದುಕೊಂಡವರಾಗಿಯೂ ಅದರಿಂದಲೇ ಮೃತ್ಯು ದೇವತೆಗೆ ತುತ್ತಾಗತಕ್ಕವರಾಗಿಯೂ ಇರುವ ಬದ್ಧ ಜೀವಾತ್ಮರನ್ನು ಕರುಣಾಮಯಿ ಶ್ರೀ ಗುರುವು ಪರಶಿವನ ಸಾನಿಧ್ಯವನ್ನು ಸೇರಿಸತಕ್ಕವನಾಗುತ್ತಾನೆ. ಅಲ್ಲದೇ ಅನೇಕ ರೋಗಗಳಿಂದ ನರಳುತ್ತಿರುವ ರೋಗಿಗೆ ತಕ್ಕ ಚಿಕಿತ್ಸೆಯನ್ನು ಮಾಡಿ ಆರೋಗ್ಯ ಪಡಿಸುವ ಮಹಾ ವೈದ್ಯನಂತೆ ಭವ ರೋಗವನ್ನು ನಾಶಮಾಡುವನು. ಆದರೆ ಗುರುವು ಭವರೋಗ ಹಾಗೂ ಅಂತರಿಕ ರೋಗಗಳೆರಡೂ ನಿವಾರಣೆ ಮಾಡುವನು.

ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರುವೇ ನಮಃ ॥

ಅಜ್ಞಾನವೆಂಬ ಕತ್ತಲೆಯಿಂದ ಅಂಧ ನಾದವನ ನೇತ್ರವನ್ನು ಜ್ಞಾನವೆಂಬ ಅಂಜನದಿಂದ ನಿಚ್ಚಳ ಮಾಡತಕ್ಕವನಾಗಿರುವನು. ತನ್ನ ಕೃಪಾ ಕಟಾಕ್ಷವೆಂಬ

ಬಡಬಾಗ್ನಿಗೆ ಬ್ರಹ್ಮಾಂಡವೆಂಬ ಬುದ್ಬುದಗಳಿಂದೊಡಗೂಡಿದ ಅತಿ ವಿಸ್ತಾರವಾದ ಈ ಮಾಯಾ ಸಮುದ್ರವನ್ನು ನುಂಗಿಬಿಡುವ ಅದ್ಭುತ ಶಕ್ತಿಯುಳ್ಳವನಾಗಿರುವನು. ಮತ್ತು ತನ್ನ ಉಪದೇಶ ವಾಣಿಯಿಂದ ಸ್ವಚ್ಛವಾದ ಕನ್ನಡಿಯೊಳಗೆ ಪ್ರೋಕ್ಷಾಂಗನೆಯು ಆ ಲಿಂಗಸವಂ ಕೊಡುವಂತೆ ಮಾಪತಕ್ಕವನಾಗಿರುವನು. ನಗುರೋರಧಿಕಂ ! ನಗುರೋರಧಿಕಂ !! ನಗುರೋರಧಿಕಂ !!!

ಗುರುವು ಶಿಷ್ಯನ ಸ್ಥಿತಿಗತಿಗಳನ್ನೆಲ್ಲ ದೂರ ದೃಷ್ಟಿಯಿಂದ ವಿಮರ್ಶಿಸಿ ಅವನ ಇಹಪರ ಶ್ರೇಯಸ್ಸುಗಳಿಗೆ ಅವಶ್ಯವಾದುದನ್ನು ನಿಶ್ಚಯಿಸಿಕೊಂಡು ಅದನ್ನು ಶಿಷ್ಯನಿಗೆ ಸುಲಭವಾಗಿ ಬೋಧವಾಗುವಂತೆ ಕ್ರಮವಾಗಿ ಧರ್ಮಾಚಾರಕ್ಕೆ ಅನುಗುಣವಾಗಿ ಬೋಧಿಸಿ ಅವನಿಗೆ ಮುಕ್ತಿ ಮಾರ್ಗವನ್ನು ತೋರಿಸುತ್ತಾನೆ. ಇಂಥ ಗುರುಗಳವರ ಪುಣ್ಯ ಜೀವನ ಚರಿತ್ರೆಯು ಮುರಡಿಯ ಸಿದ್ರಾಮಯ್ಯ ಸ್ವಾಮಿಮಠ ಇವರು ಬರೆದಿರುವರು.

ಗುರುಗಳವರ ಜೀವನ ಚರಿತ್ರೆ ಸಂಗ್ರಹ ಮಾಡಬೇಕು. ಅದನ್ನು ಚರಿತ್ರೆ ರೂಪದಲ್ಲಿ ಬರೆಯಿಸಬೇಕು ಅಂತಾ ಬಹಳ ದಿನಗಳ ಆಸೆ ಇಂದು ನನಸಾಯಿತು. ಮುರಡಿಯ ಶ್ರೀ ಸಿದ್ರಾಮಯ್ಯನವರು ನಮ್ಮ ಮಠಕ್ಕೆ ಬಂದರು. ಅವರಿಗೆ ಸ್ವತಃ ಗುರುಗಳ ಪ್ರೇರಣೆಯಾಗಿರಬಹುದೆಂದು ನಮಗೆ ಅನಿಸುತ್ತದೆ. ಅವರು ಗುರುಗಳ ಮಹಿಮೆಯನ್ನು ಜನರ ಮುಖಾಂತರವಾಗಿ ತಿಳಿದು ಗುರುಗಳ ಚರಿತ್ರೆ ಬರೆಯಲು ಮುಂದಾದರು. ನಾವು ಕೂಡಾ ಸಂಗ್ರಹಿಸಿದ ಕೆಲವು ವಿಷಯ ಸಂಗ್ರಹಣೆ ಕೊಟ್ಟೆವು. ಅವರು ಭಯ ಭಕ್ತಿಯಿಂದ ಮೂರು ನಾಲ್ಕು ವರ್ಷಗಳವರೆಗೆ ಸತತ ಪ್ರಯತ್ನ ಮಾಡಿ ವಿಷಯ ಸಂಗ್ರಹಿಸಿ ಸರ್ವರಿಗೂ ತಿಳಿಯುವ ಹಾಗೆ ಯಥಾರ್ಥವಾಗಿ ಈ ಪುಣ್ಯ ಚರಿತ್ರೆ ಬರೆದು ಒಪ್ಪಿಸಿದರು. ಇವರಿಗೂ ಕೂಡಾ ಗುರು ಮಹಾರಾಜನು ಅನುಗ್ರಹಿಸಲೆಂದು ನಾವು ಪ್ರಾರ್ಥಿಸುತ್ತೇವೆ

ಕೆಲವು ದಿವಸಗಳು ಗತಿಸಿದವು. ಆಗ ಗುರುಗಳ ಪ್ರೇರಣೆಯಾಯಿತು. ಅಂದೇ ಗುರುಗಳ ಚರಿತ್ರೆ ಹೊರ ತರುವವರೆಗೆ ಯಾರಿಂದಲೂ ಕಾಣಿಕೆ ಸ್ವೀಕರಿಸಬಾರದೆಂದು ಸಂಕಲ್ಪ ಮಾಡಿದೆ. ಅಷ್ಟರಲ್ಲಿ ಚಬನೂರದ ಶಿಷ್ಯರು ಕರೆಯಲಿಕ್ಕೆ ಬಂದರು. ನಾವು ಅಲ್ಲಿಗೆ ಹೋಗಿ ಅವರ ಕಾರ್ಯ ಮುಗಿಸಿಕೊಂಡು ಬರುವಾಗ ಅವರು ಕಾಣಿಕೆ ಕೊಡಲಿಕ್ಕೆ ಬಂದರು. ಸ್ವೀಕರಿಸುವದಿಲ್ಲವೆಂದು ಅಂದಾಗ

ನಮ್ರತೆಯಿಂದ ಏಕೆ ತೆಗೆದುಕೊಳ್ಳುವದಿಲ್ಲವೆಂದು ಅನೇಕ ರೀತಿ ಪ್ರಶ್ನೆ ಮಾಡಿದರು. ಆಗ ನಾವು ಸಂಕಲ್ಪ ಮಾಡಿಕೊಂಡ ವಿಷಯ ತಿಳಿಸಿದೆವು. ಅದಕ್ಕೆ ಬಸನಗೌಡರು ಹಾಗೂ ಸೋಮನಗೌಡರು ಮುಂದಾಗಿ ಆ ಸಂಕಲ್ಪ ಈಡೇರಿಸುವದಾಗಿ ವಚನ ಕೊಟ್ಟರು. ಇದೆಲ್ಲಕ್ಕೂ ಮೂಲ ಕಾರಣ ಗುರುಗಳ ಪ್ರೇರಣೆ ಹೊರತು ನನ್ನದೇನಲ್ಲ. ಇವರಿಬ್ಬರೂ ಗ್ರಂಥ ಪ್ರಕಟನೆಗಾಗಿ ತನು, ಮನ, ಧನದಿಂದ ಹಾಗೂ ಬಂಧು ಮಿತ್ರರಿಂದಲೂ ಸಂಗ್ರಹಿಸಿ ಪುಣ್ಯ ಚರಿತ್ರೆಗೆ ಉದಾರ ದಾನಿಗಳಾಗಿದ್ದಾರೆ. ಈ ಗ್ರಂಥದ ಮುದ್ರಣಕ್ಕಾಗಿ ಧನ ಸಹಾಯ ಸಲ್ಲಿಸಿದ ಎಲ್ಲ ಸದ್ಭಕ್ತರಿಗೂ ಪುಣ್ಯ ಚರಿತ್ರೆಯ ನಾಯಕರಾದ ಶ್ರೀ ಲಿಂ|| ಷ|| ಬ್ರ|| ಚನ್ನ ವೃಷಭೇಂದ್ರ ಮಹಾಸ್ವಾಮಿಗಳವರು ಆಯುಷ್ಯ ಆರೋಗ್ಯ ಸುಖ ಸಂಪತ್ತು ಕೊಟ್ಟು ಕಾಪಾಡಲೆಂದು ಆ ಗುರು ಮಹಾರಾಜರಲ್ಲಿ ಪ್ರಾರ್ಥಿಸುತ್ತೇವೆ.

ಶಿವಪೂಜಾನಿಷ್ಠರೂ, ಭಕ್ತ ಪರಿಪಾಲಕರೂ, ಸಹೃದಯರೂ, ವಿದ್ವಾಂಸರಾದ ಶ್ರೀ ಷ|| ಬ್ರ|| ಪಂ|| ಸಿದ್ಧಲಿಂಗ ಶಿವಾಚಾಯ ಮಹಾಸ್ವಾಮಿಗಳು ಹಿರೇಮಠ ಮಳಲಿ ಇವರು ಆದರಾಭಿಮಾನದಿಂದ ಸದಭಿಪ್ರಾಯ ಕರುಣಿಸಿದ್ದಾರೆ. ಇವರಿಗೂ ಮತ್ತು ಸರಳ ಹೃದಯರೂ, ತಪೋನಿಷ್ಠರೂ. ಪ್ರವಚನಕಾರರಾದ ಶ್ರೀ ಷ|| ಬ್ರ|| ಪಂ|| ಗುರು ಸಿದ್ಧ ಶಿವಾಚಾರ್ಯ ಮಹಾರಾಜದಹಿವಡಕರ್ ಮಠ ಬಾರ್ಶಿ (ಯೊಳವಾರ) ಇವರೂ ಸಹ ಪ್ರೇಮದಿಂದ ಅಭಿಪ್ರಾಯ ಕರುಣಿಸಿದ್ದಾರೆ. ಇವರಿಗೂ ಒಂದನೆಗಳು.

ಈ ಗ್ರಂಥಕ್ಕೆ ಸಂದೇಶವನ್ನಿತ್ತ ತ್ರಿಭಾಷಾಕವಿಗಳು, ಉಭಯ ಗಾಯನಾಚಾರ್ಯರು ತಪಸ್ವೀ ಶ್ರೀ ವೇ|| ಪಂ|| ಡಾ|| ಪುಟ್ಟರಾಜ ಕವಿ ಗವಾಯಿಗಳು ವೀರೇಶ್ವರ ಪುಣ್ಯಾಶ್ರಮ ಗದಗ ಇವರಿಗೂ ಮತ್ತು ಹಾರೈಕೆಯನ್ನಿತ್ತ ಆಚಾರ್ಯ ತತ್ವ ಪ್ರಚಾರಕರಾದ ಸಂಗೀತ ರತ್ನಾಕರ ಶ್ರೀ ಪಂ|| ಗುರುಸ್ವಾಮಿ ಕಲಕೇರಿ ಗವಾಯಿಗಳು ಇವರಿಗೂ, ಹಾಗೂ ಸುಂದರವಾಗಿ ಮುನ್ನುಡಿ ಬರೆದುಕೊಟ್ಟ ಶರಣರೂ, ಶ್ರೀ ಬಸವೇಶ್ವರ ಶಿವಪ್ಪ ತುಪ್ಪದ ಗದಗ ಇವರಿಗೂ ಪರಮ ಪಿತ ಪರಮಾತ್ಮನು ಹಾಗೂ ಪಂಚಾಚಾರ್ಯರೂ ಅನುಗ್ರಹಿಸಲೆಂದು ಹಾರೈಸುತ್ತೇವೆ.

ಶ್ರೀ ಗುರುಗಳವರ ಜೀವನ ಚರಿತ್ರೆಯು ಸರ್ವರಿಗೂ ತಿಳಿಯುವಂತೆ ಭಯ ಭಕ್ತಿಯಿಂದ ಯಥಾರ್ಥವಾಗಿ ಮುರಡಿಯ ಶ್ರೀ ಸಿದ್ರಾಮಯ್ಯ ಸ್ವಾಮಿ ಮಠ

ಇವರು ಬರೆದು ಅರ್ಪಿಸಿದ್ದಾರೆ. ಅವರಿಗೂ ಗುರು ಮಹಾರಾಜರು ಆಯುರಾರೋಗ್ಯ ಸುಖ-ಸಂಪತ್ತು ಹಾಗೂ ಇನ್ನೂ ಹೆಚ್ಚಿನ ಲೇಖನ ಶಕ್ತಿ ಕೊಟ್ಟು ಕಾಪಾಡಲೆಂದು ಆಶಿಸುತ್ತೇವೆ.

ಮನ ಮೆಚ್ಚುವಂತೆ ಸಕಾಲದಲ್ಲಿ ಮುದ್ರಿಸಿದ ಶ್ರೀ ಗಜಾನನ ಪ್ರಿಂಟಿಂಗ ಪ್ರೆಸ್ಸಿನ ಮಾಲಕರಿಗೂ ಹಾಗೂ ಡಾ|| N. S. ಬಿರಾದಾರ (ಹಂದ್ರಾಳ) ಗದಗ ಇವರಿಗೂ ಯೋಗಿವರ್ಯರು ಅನುಗ್ರಹಿಸಲೆಂದು ಹಾರೈಸುವೆ.

ಈ ಗ್ರಂಥವನ್ನು ಭಕ್ತಿ ಭಾವದಿಂದ ಓದುವ ಶರಣ-ಶರಣೆಯರಿಗೂ ಗುರು ಮಹಾರಾಜನು ಇಹದಲ್ಲಿ ಕೀರ್ತಿ ಪರದಲ್ಲಿ ಮುಕ್ತಿ ದೊರಕಿಸಿ ಕೊಡುವದರಲ್ಲಿ ಯಾವ ಸಂದೇಹವಿಲ್ಲ. ಸರ್ವೇ ಜನಾಃ ಸುಖಿನೋಭವಂತು !

**ಸತ್ಯ.... ಶಿವಂ.... ಸುಂದರಂ....**

ಕ್ಯಾಂಪ ಮೂಗಣಗೇರಾ | ಪ್ರಕಾಶಕರು :
ತಾ|| 16-11-84 | ಮೂಗಣಗೇರಿಯ ಶ್ರೀಗಳು M. A

॥ ಓಂ ಶ್ರೀ ಚೆನ್ನವೃಷಭೇಂದ್ರಾಯ ನಮಃ ॥

## ಪೀಠಿಕೆ

ನಮಃ ಶ್ರೀಗುರು ಚನ್ನವೃಷಭೇಂದ್ರಾಯ ಸಚ್ಚಿದಾನಂದರೂಪಿಣೇ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥

ಶ್ರೀ ಗುರುವೆ !

ನಿಮ್ಮ ಮಹಿಮೆಯ ನಾಮಾಮೃತವನ್ನು ಪಾವನ ಮಾಡಿದ ಭವರೋಗಿಗಳು ಇಹದಲ್ಲಿ ಭೋಗಾದಿಗಳನ್ನೂ ಪರದಲ್ಲಿ ಸತ್ಯ ಸುಖವನ್ನೂ ಪಡೆದು ನಿಜಾನಂದ ಸಾಮ್ರಾಜ್ಯದಲ್ಲಿ ತೇಲಾಡುವರು. ನಿಮ್ಮ ಕೃಪಾ ಕಟಾಕ್ಷದಿಂದಲೇ ಸರ್ವ ಕಾರ್ಯಗಳೂ ನಿರ್ವಿಘ್ನವಾಗಿಯೂ, ಸುಗಮವಾಗಿಯೂ ಸಾಗುವವು. ನಿಮ್ಮೀ ಪುಣ್ಯ ಕಾವ್ಯಕ್ಕೆ ನೀವೇ ಆಧಾರವಾಗಿ ಈ ಪಾಮರನಿಂದ ರಚಿಸಿ ಕೊನೆಗಾಣಿಸುವಿರಿ. ನಿಮ್ಮ ಕೃಪಾವಲೋಕನದಿಂದ ಮೂರ್ಖನು ಪಂಡಿತನಾಗುವನು. ಪಾಮರನು ಪರಿಶುದ್ಧನಾಗುವನು. ಅಂಧನು ನೇತ್ರಜ್ಯೋತಿಯುಳ್ಳವನಾಗುವನು. ಹೆಳವನು ಭೂಪ್ರದಕ್ಷಿಣೆ ಹಾಕುವನು, ಅಜ್ಞಾನಿಯು ಅಂಧಃಕಾರವನ್ನು ಕಳೆದು ಶ್ರೇಷ್ಠವಾದ ಸತ್ಯ ಸ್ವರೂಪ ಜ್ಞಾನಾಮೃತವನ್ನು ಪಡೆಯುವನು. ಅಸದಳವೂ, ಅಪಾರವೂ ಆದ ತಮ್ಮೀ ಮಹಿಮೆಯನ್ನು ಬಣ್ಣಿಸಲು ಅಸಮರ್ಥನು, ನನ್ನ ಮತಿಯೆಂಬ ಬೆಣ್ಣೆಯನ್ನು ನಿಮ್ಮ ಕರುಣೆಯೆಂಬ ತಂಪೆಲರಿನಿಂದ ಶುದ್ಧಗೊಳಿಸಿ, ಬೆಣ್ಣೆಗೆ ಕಾವು ಕೊಟ್ಟು ಶುದ್ಧವಾದ ತುಪ್ಪವಾಗಿಸುವಂತೆ, ಮನದ ಮಲಿನತೆಯನ್ನು ಹೋಗಲಾಡಿಸಿ ಫಲದಾಯಕವಾಗುವಂತೆಸಗುವದು ನಿಮ್ಮ ಧರ್ಮ. ಸಕಲ ಚರಾಚರ ವಸ್ತುಗಳಲ್ಲಿಯೂ ಸರ್ವ ಜೀವಾಜೀವರುಗಳಲ್ಲಿಯೂ ಸಚ್ಚಿದಾನಂದ ನಿತ್ಯ ಪರಿಪೂರ್ಣನಾಗಿದ್ದು ಇಳೆಯಲ್ಲಿಯ ಹೇವರನ್ನು ನಿಮ್ಮ ಪ್ರೇಮ ಸೂತ್ರದಿಂದ ನೀವೇ ಕುಣಿಸುತ್ತೀರಿ.

"ಅಣೋರಣೀಯಾನ್ ಮಹತೋ ಮಹೀಯಾನ್"

ಅಂದರೆ ಪರಕ್ಕೆ ಪರವಾಗಿ ಅಣುವಿಗೆ ಅಣುವಾಗಿ ಘನಕ್ಕೆ ಘನವಾಗಿ ವಿನೋದದಿಂದ ಸತ್ವ-ರಜ ತಮೋ ಗುಣಗಳನ್ನುಂಟು ಮಾಡುತ್ತೀರಿ. ತ್ರಿಪುಂಡ್ರ

ಧಾರಿಯಾದ, ತ್ರಿಕಾಲ ಜ್ಞಾನಿಯಾದ, ತ್ರಿಗುಣಾತ್ಮಕನಾದ ನಿಮ್ಮನ್ನು ಯಾವನು ಪೂಜಿಸುವನೋ ಯಾವನು ಸ್ಮರಿಸುವನೋ ಯಾವನು ಆರಾಧ್ಯ ದೈವವೆಂದು ತಿಳಿಯುವನೋ ಯಾವನು ನಿತ್ಯಕಾಲದಲ್ಲಿ ಸ್ಮರಿಸುವನೋ ಅಂಥವನ ಸಕಲ ಜನ್ಮಗಳ ಪಾಪವು ಪರಿಹಾರವಾಗಿ ಅನಂತ ಪುಣ್ಯ ಲಭಿಸುವದು. ಅಗ್ನಿ ಮುಟ್ಟಿದ ಬಳಿಕ ಕಟ್ಟಿಗೆಯ ರಾಶಿ ಸುಡದಿದ್ದೀತೆ ? ನೀವು ದಯಾ ಸಮುದ್ರರು ಅಂತೆಯೇ ಚಿಂತಾ ಸಮುದ್ರದಲ್ಲಿ ಮುಳುಗಿದ್ದ ನನ್ನನ್ನು ಮೇಲೆತ್ತಲು ಸದ್ಗುರುವಾಗಿ ಬಂದಿದ್ದೀರಿ. ನಿಮ್ಮ ಘನವಾದ ಸುಂದರ ಚರಿತ್ರೆಯನ್ನು ಒಂದುಳಿಯದಂತೆ ಬಣ್ಣಿಸುವುದು ನನ್ನಂಥಹ ಮಂದಮತಿಯಿಂದ ಹೇಗಾದೀತು ? ನನ್ನ ಪಂಚ ಕ್ಲೇಶಗಳಲ್ಲಿ ಬೆರೆತು ಮಹತ್ವವಾದ ನಿಮ್ಮ ಚರಿತ್ರೆಯನ್ನು ನೀವೆ ಬರೆಯಿಸುತ್ತೀರಿ. ಗುರುವರ್ಯಾ ! ನನ್ನ ತ್ರಿಮಲಗಳನ್ನು ಹೋಗಲಾಡಿಸಿ ಅರಿಷಡ್ವರ್ಗಗಳನ್ನು ದೂರಮಾಡಿ ಕರುಣೆಯಿಂದ ನನ್ನನ್ನು ಕಾಪಾಡಿ ನಿಮ್ಮ ಚರಿತ್ರೆಯ ಸಂಗೀತವನ್ನು ಸುಮಧುರವಾಗಿ ನುಡಿಸು. ನಿಮ್ಮೊಡನಾಟದ ಆಟವನ್ನಾಡಿಸು. ನನ್ನ ತನು ಮನ-ಧನವು ನಿಮ್ಮ ಚರಣಾರವಿಂದಗಳಲ್ಲಿ ಅರ್ಪಿತವಾಗಲಿ. ಶಿವನಿಗಿಂತ ಶಿವ ಭಕ್ತರು, ಶಿವಶರಣರು ಅಧಿಕರು. ಅವರು ತಮ್ಮ ಅನನ್ಯ ಭಕ್ತಿ ಭಾವದಿಂದ ಶ್ರದ್ಧೆ, ವಿಶ್ವಾಸ, ಸದ್ಭಕ್ತಿ ಎಂಬ ಹಗ್ಗದಿಂದ ಶಿವನನ್ನು ಬಂದಿಸಿ ತಮ್ಮ ಸ್ವಾಧೀನ ಮಾಡಿ ಕೊಂಡಿರುವರು. ಅಂಥಹ ಶ್ರೇಷ್ಠತಮ ದೃಢಭಕ್ತಿ ನನ್ನಂಥಹ ಮೂಢನಲ್ಲಿ ಹೇಗೆ ಬಂದೀತು ? ನನ್ನ ಮೂಢತಮವೆಂಬ ಗಾಢತಮವು ಬಹುದೂರ ಓಡಬೇಕಾದರೆ ಸತ್ಯಂ-ಶಿವಂ-ಸುಂದರಂ ಶಿವಶರಣರ ಚರಣಾಂಘ್ರಿ ಕಿರಣಗಳು ನನ್ನ ಅರೆ ಅರಳಿದ ಅರವಿನೊಳು ಸೇರಬೇಕು. ಅವರ ಪಾದ ಕಮಲಗಳು ನನ್ನ ತಲೆಯ ಮೇಲಿರ ಬೇಕು. ಇಲ್ಲವಾದರೆ ನನ್ನೀ ಮನವು ಈಶ್ವರನ ಪಾದವನ್ನು ಸೇರಲಾರದು.

ಮನಸ್ಸು ಸಾಕ್ಷಾತ್ ಪರಬ್ರಹ್ಮನಾಗಿದ್ದರೂ ಅದು ಕಲ್ಪಿತ ಅಂಧಃಕಾರ ಕ್ಕೊಳಗಾಗಿ ಅಜ್ಞಾನದಿಂದ ತುಂಬಿಕೊಂಡು ನಾಶ ಹೊಂದುತ್ತದೆ. ಹೇಯವಾದ ಸಂಸಾರದ ಬಲೆಗೆ ಬಿದ್ದು ಚತುಃಕರಣ, ಪಂಚ ಕ್ಲೇಶಗಳ ಅರಿಷಡ್ವರ್ಗಗಳ ಅಧೀನ ವಾಗಿ ಮರಣಕ್ಕೆ ಶರಣಾಗತವಾಗುತ್ತದೆ. ಅಗೋಚರ ಅಗಮ್ಯವಾದ ಶಿವಪಾದ ಗಳನ್ನು ಸೇರಿ ಶಾಶ್ವತ ಪದವಿಯನ್ನು ಪಡೆಯಲು ಶಕ್ತವಾಗಿದೆ.

"ಇಂದ್ರಿಯಾಣಾಂ ಮನಶ್ಚಾಸ್ಮಿ"

ಅಂದರೆ ಇಂದ್ರಿಯಗಳಲ್ಲಿ ನಾನೇ ಮನಸ್ಸು ಈ ರೀತಿ ಒಪ್ಪಿಕೊಂಡರೂ

ಇದು ಪಂಚಕ್ಲೇಶಗಳ ಆಧೀನವಾಗಿ ನಾಶ ಹೊಂದುವನೇ ಖಂಡಿತ. ಪಂಚ ಕ್ಲೇಶಗಳಾವವೆಂದರೆ ಕಣ್ಣಿಗೆ ಕಾಣುವವೆಲ್ಲ ಬಯಸುವವೇ ಆಶೆಯೆಂಬ ಕ್ಲೇಶ ಮನದಲ್ಲಿ ಮೋಸ ಹುಟ್ಟಿಸುವದೇ ಎರಡನೆಯ ಕ್ಲೇಶವು.ತನ್ನ ದೈವಕ್ಕನುಗುಣವಾಗಿ ಆದದ್ದನ್ನು ನೆನೆಯದೇ ಎರಡನೆಯವರು ಕೆಡಿಸಿದರೆಂದು ಅವರೊಡನೆ ದ್ವೇಷ ಕಟ್ಟಿ ಕೊಳ್ಳುವುದೇ ಮೂರನೆಯದು. ರಕ್ತ ಮಾಂಸಗಳಿಂದಲೂ, ಪಂಚ ಮಹಾಭೂತಗ ಳಿಂದಲೂ ಕೂಡಿದ ಅಸ್ಥಿರವಾದ ಶರೀರಕ್ಕೆ ನನ್ನದೆಂಬಸಂಜಿಕೆಯೇ ನಾಲ್ಕನೆಯದು. ಕಡುಸುಂದರಿಯರ ಬೆಡಗಿನ ವಯ್ಯಾರಕ್ಕೆಮನಸೋತು ಮನದಲ್ಲಿಯೇ ಹಾಯೆಂದು ಕೊರಗಿ ಸಣ್ಣಾಗುವ ರತಿಯ ಅನುರಾಗ ಕ್ಲೇಶವೇ ಐದನೇಯದು. ಈ ಪಂಚ ಕ್ಲೇಶಗಳಿಗೆ ಮನಸ್ಸನ್ನು ಎಳೆಸಿ ಕಂಗೆಡುವದಕ್ಕೆ ಕಾರಣವೇನೆಂದರೆ ಕ್ರೂರವಾದ ಅಹಂಕಾರ, ಮಮಕಾರ, ಕಾಮ, ಕ್ರೋಧ, ಮದ, ಮತ್ಸರಾದಿ ಅರಿ ಷಡ್ವರ್ಗಗಳನ್ನು ನೆಚ್ಚಿ ಜನ್ಮ ಜನ್ಮಾಂತರಗಳಲ್ಲಿ ಹಿಂಬಾಲಿಸಿ ಬಂದ ನಾನು, ನನ್ನದು, ಅಧಿಕಾರ, ವಿದ್ಯೆ, ರೂಪು, ಧನ, ಭೂಮಿ, ಸ್ತ್ರೀ ಮೊದಲಾದ ಭೋಗ ಸಾಧನಗಳನ್ನು ಬಳಸಿಕೊಂಡು ಕೆಡುವ ಮನಸ್ಸೇ ದುರ್ಗುಣಗಳಿಂದೊಡಗೂಡಿದೆ. ಮೋಸದ ಮೋಹಕ ಸುಖವನ್ನೇ ಬಯಸುವೆಯಲ್ಲಾ! ಇವು ನಿನ್ನನ್ನು ಜಾರ ನನ್ನಾಗಿ, ವಂಚಕನನ್ನಾಗಿ, ಪರದ್ರವ್ಯಾಪಹಾರಕನನ್ನಾಗಿ ಮಾಡುತ್ತದೆ. ಇಷ್ಟೇ ಅಲ್ಲ ಕೊನೆಗೆ ಬಡತನಕ್ಕೆಡೆಯಾಗಿಸಿ ರೋಗಗಳ ಬೀಡಾಗಿಸಿ, ಪಾಪಿಗಳ ಗೂಡಾ ಗಿಸಿ ಎಲ್ಲರಿಗೂ ಬೇಡಾಗಿ ಸುಡುಗಾಡ ಸೇರುವಂತೆ ಮಾಡುವವು. ಕಾರಣ ಜಾಗ್ರ ವಾಗಿ ಈ ದುರ್ಗುಗಳನ್ನು ಬಿಡಲೇಬೇಕು. ಮಹಾನುಭಾವನಾದ ಶಿವಯೋಗ ಸಂಪನ್ನನಾದ ಸದ್ಗುರುವಿನ ದಯದಿಂದ ಯೋಗಿಗಳಿಗೂ ಕೂಡ ಜಯಿಸಲಸಾಧ್ಯ ವಾದ ಕಾಮಾದಿಗಳನ್ನು ಗೆಲ್ಲಬಹುದು. ಗುರು ಭಕ್ತರ ಕೃಪೆಗೆ ಪಾತ್ರನಾಗು. ಸಂತರ ಸಂಗವೇ ಗುರುದರ್ಶನ ಮಾರ್ಗವಾಗಿದೆ. ಶ್ರೀಗುರುಚನ್ನವೃಷಭೇಂದ್ರರ ಕೃಪಾ ದೃಷ್ಟಿ ಆಶೀರ್ವಾದ ಸದಾ ನನ್ನ ಮೇಲಿರಲೆಂದು ಅವರ ಚರಣಾರವಿಂದಗಳಿಗೆ ನಮಸ್ಕರಿಸಿ ಈ ಪುಣ್ಯ ಜೀವನ ಚರಿತ್ರೆಯನ್ನು ಬರೆಯಲು ಪ್ರಾರಂಭಿಸುವೆನು.

# ಕಥಾರಂಭವು

## ಕೈಲಾಸದ ವರ್ಣನೆ–

ಶ್ರೀ ಮಹಾಲಕ್ಷ್ಮೀ ಜನ್ಮಸ್ಥಾನವೆನಿಸಿ, ಸಕಲ ಭೂ-ಸಂಪತ್ತಿಗ ಆಶ್ರಯವಾಗಿ, ವರುಣನಿಗೆ ತವರು ಮನೆಯಾಗಿ, ನಾರಾಯಣನಿಗೆ ಮಲಗು ಮನೆಯಾಗಿ, ವಾರಿಜೋದ್ಭವನಿಗೆ ವಾಸಸ್ಥಾನವಾಗಿ, ಸೂರ್ಯನಿಗೆ ಮಜ್ಜನ ಕೊಳವಾಗಿ, ಇಂದ್ರಾದಿ ದೇವತೆಗಳಿಂದ ಬೆದರಿಬಂದ ವಜ್ರಪರ್ವತಗಳಿಗೆ ಅಜ್ಞಾ ನಿವಾಸವಾಗಿ ರತ್ನ ಮುತ್ತುಗಳಿಗೆ ಆಗರವಾಗಿ ಆಕಾಶಗಂಗೆಗೆ ಕನ್ನಡಿಯಂ ರಂಜಿಸುತ್ತಿರುವ ಮಹಾಸಮುದ್ರದ ಮಧ್ಯಭಾಗದಲ್ಲಿ ಕೋಟಿಬಾಲ ಸೂರ್ಯ ಪ್ರಕಾಶದಂದದಿ ಪ್ರಜ್ವಲಿಸುವ ಬೆಳ್ಳಿಯ ಬೆಟ್ಟವು ಪ್ರಕಾಶಮಾನವಾಗಿರುವ ವಾರಿಧಿಯಲ್ಲಿ ಬೆಳಗುತ್ತಿರುವ ಬೆಳ್ಳಿಯ ಪರ್ವತದಲ್ಲಿ ಕಲ್ಪವೃಕ್ಷಗಳ ತಾಣವೊಂದು ಆಕಾಶಗಂಗೆಯ ಕರೆತರುವಂತೆ ಗೋಚರವಾಗುತ್ತಿದೆ. ಈ ಕಲ್ಪವೃಕ್ಷಗಳ ಶಿರೋ ಭಾಗದಲ್ಲಿ ಅದಿಶೇಷನ ಸಿಂಹಾಸನ ಹೆಡೆಯೆತ್ತಿ ನಿಂತಿದೆ. ಸಿದ್ಧ ರಸ ಕೊಡು ಅಮೃತವನ್ನೇ ಕರೆವ ಹಸುಗಳು ಕಲ್ಪಲತೆಯೆಂಬ ಬಳ್ಳಿಯನ್ನು ಸೇವಿಸುತ್ತ ಮೆಲಕು ಹಾಕುತ್ತಿವೆ. ಯಾವ ವನ್ಯ ಮೃಗಗಳ ಸುಳಿವೂ ಹತ್ತದ ಮಹರ್ಷಿಗ ಸಮೂಹದಿಂದೊಡಗೂಡಿದ ಬೆಳ್ಳಿಯ ಬೆಟ್ಟವು ಶೋಭಾಯಮಾನವಾ ಕಂಗೊಳಿಸುತ್ತಿರಲಾಗಿ ಆ ಬೆಟ್ಟದ ತಪ್ಪಲಿನಲ್ಲಿರುವ ಕಲ್ಪವೃಕ್ಷಗಳ ನೆರಳಿನ ಮಲ್ಲಿಗೆ, ಇರುವಂತಿಗೆ, ಸಂಪಿಗೆ, ಜಾಜಿ, ಕಿನ್ನರ, ಕಿಂಪುರುಷರೆಲ್ಲ ಚಂದ್ರಕಾಂ ಶಿಲೆಗಳ ಮೇಲೆರಗಿ ಆನಂದದಿಂದ ವಿಹರಿಸುತ್ತಿರುವರು. ದೇವಾದಿ ದೇವತೆಗಳ ಹೂ ಮಳೆಗರೆಯುತ್ತ ಜಲಕ್ರೀಡೆಯಾಡುತ್ತಿರುವರು. ಆ ಬೆಟ್ಟದ ಯಾವ ಕಡೆ ಯಲ್ಲಿ ನೋಡಿದಾಗ್ಯೂ ತುಂಬಿಹರಿವ ನದಿಗಳಿಂದಲೂ, ಫಲಭರಿತ ತೋಟ ಗಳಿಂದಲೂ, ನಿರ್ಮಲವಾದ ಕೊಳಗಳಿಂದಲೂ, ಬಣ್ಣ ಬಣ್ಣದ ಹೂಗಳಿಂದೊ ಗೂಡಿದ ಲತಾಗೃಹಗಳಿಂದಲೂ, ವಜ್ರ ವೈಢೂರ್ಯಗಳಿಂದ ಕೆತ್ತಿದ ಮಹಾಮನೆ ಗಳಿಂದಲೂ ತುಂಬಿ ತುಳುಕುತ್ತಿದೆ. ಕಾಮಧೇನುಗಳು ಹರ್ಷದಿಂದ ಕ್ರೀಡಿಸುತ್ತಿವೆ ಇಂದ್ರನ ಐರಾವತ ಗಜೇಂದ್ರಗಳ ಸೀರಾಟ ತುಂತುರ ತಂಪೆಲರನ್ನೆರಚುತ್ತಿವೆ ಅಖಂಡ ತಪಸ್ಸನ್ನಾಚರಿಸುತ್ತಿರುವ ಋಷಿಗಳ ಸಮೂಹಗಳಿಂದಲೂ ಕಣ್ಣಿಗೊಪ್ಪ ಒಪ್ಪುತ್ತಿರುವ ಪರ್ವತದಲ್ಲಿ ಆಕಾಶವನ್ನು ಸೋಂಕಿಸುತ್ತಿರುವಂತೆ ರತ್ನದ ಕೋ

ಗಳಿಂದಲೂ, ರಂಜಿಸುವ ಚಿನ್ನದ ಉಪ್ಪರಿಗೆಗಳಿಂದಲೂ, ಮನಮನೋಹರವಾದ ರಾಜ ಸೌಧಗಳಿಂದಲೂ ಕಣ್ಮನಗಳನ್ನು ತಣಿಸುವ ಈಶ್ವರನ ರಾಜಧಾನಿಯಾದ ಕೈಲಾಸವು ಶೋಭಿಸುತ್ತಿರುವದು. ಸಕಲೈಶ್ವರ್ಯಕ್ಕೂ ನಿಧಿಯಾಗಿ ಲೋಕಕ್ಕೆಲ್ಲ ಉತ್ಕೃಷ್ಟವಾದ ಶೃಂಗಾರವನ್ನೊಳಗೊಂಡು ಅತ್ಯಂತ ಮಹತ್ವದಿಂದ ರಾರಾಜಿಸುತ್ತಿರುವ ಆ ಕೈಲಾಸ ಪರ್ವತದ ಶೋಭೆಯನ್ನು ಬಣ್ಣಿಸುವುದಕ್ಕೆ ನನ್ನಂತಹ ಮಂದ ಮತಿಗೆ ಅದು ಹೇಗೆ ಸಾಧ್ಯ ?

ಪರಮೇಶ್ವರನ ಪಟ್ಟಣದ ಮಧ್ಯಭಾಗದಲ್ಲಿ ಪುಣ್ಯಜರ ಕಣ್ಣಿಗೆ ಹಬ್ಬವೆಂಬಂತೆ ಶೋಭಿಸುವ ಶಿವನರಮನೆಯಲ್ಲಿ ತೇಜೋಮಯವಾದ ದಿವ್ಯಸಭಾ ಮಂಟಪವು ಹೊಳೆಯುತ್ತಿರುವುದು. ಅಲ್ಲಿ ಆದಿಶೇಷನ ಹೆಡೆಯ ಮೇಲೆ ರತ್ನಖಚಿತವಾದ ಥಳಥಳಿಸುತ್ತಿರುವ ಸಿಂಹಾಸನದ ಮೇಲೆ ಮಂಗಳ ಮೂರ್ತಿಯಾದ ಪರಮೇಶ್ವರನು ಎಡದಲ್ಲಿ ಗಣಪತಿಯೊಂದಿಗಿರುವ ಜಗನ್ಮಾತೆಯನ್ನೂ ಬಲದಲ್ಲಿ ಷಣ್ಮುಖನನ್ನೂ ಕೂಡ್ರಿಸಿಕೊಂಡು ಶೋಭಾಯಮಾನವಾಗಿ ಪ್ರಕಾಶಿಸುತ್ತಿರಲಾಗಿ, ಬ್ರಹ್ಮ, ವಿಷ್ಣು, ಲಕ್ಷ್ಮೀ, ಸರಸ್ವತೀ, ವರುಣ ಇಂದ್ರಾದಿ ದೇವತೆಗಳೂ ಎಡಬಲದಲ್ಲಿ ಸಿಂಹಾಸನಾರೂಢರಾಗಿರಲು, ಅಷ್ಟದಿಕ್ಪಾಲಕರೂ, ಕಿನ್ನರ ಕಿಂಪುರುಷರೂ, ಯಕ್ಷ-ಗಂಧರ್ವರೂ, ಸಿದ್ಧ-ಸಾಧ್ಯ-ಮನು, ಮುನಿಗಳೆಲ್ಲರೂ ನೆರೆದು ಸ್ತುತಿಸುತ್ತಿದ್ದರು. ಮಹರ್ಷಿಗಳು ಶಿವಸಹಸ್ರನಾಮಾವಳಿಯ ಪಾಡುತ್ತಿರಲು, ರಂಭಾ ಊರ್ವಸಿಯರು ಹೂವಿನ ಹಾಸಿಗೆಯ ಹಾಸುತ್ತಿರಲಾಗಿ ನಂದಿ ಬೃಂಗಿಯರ ತಾಂಡವ ನೃತ್ಯ ಸಾಗಿತ್ತು. ಮೃದಂಗ ಮದ್ದಳೆ, ನಗಾರಿ, ಜಾಂಗಟೆ, ಶಂಖ, ಕಾಳೆಗಳ ಆರ್ಭಟ ಕೇಳಿಬರುತ್ತಿತ್ತು. ಇಂಥ ಮನೋಹರವಾದ ಶಿವನೊಡ್ಡೋಲಗದಲ್ಲಿ ರಂಜಿಸುತ್ತಿರುವ ತ್ರಿಲೋಕ ಶರಣ್ಯನೂ, ತ್ರಿಶೂಲಧಾರಿಯೂ ತ್ರಿಪುಂಡ್ರಧಾರಿಯೂ, ತ್ರಿನೇತ್ರನೂ, ದೇವದೂತನೂ, ಕೃಪಾಮಯನೂ, ಸರ್ವಾಂತರ್ಯಾಮಿಯೂ, ಭಕ್ತ ಪರಿಪಾಲಕನೂ, ದೀನ ಪರಿಪಾಲಕನೂ, ಎಂಬತ್ನಾಲ್ಕು ಲಕ್ಷ ಜೀವರಾಶಿಗಳ ಅಣುರೇಣುತೃಣ ಕಾಷ್ಟಗಳಲ್ಲಿಯೂ ಬೆರೆತು ಮೋಕ್ಷಪದವಿಯನೀವ ಪರಮಾತ್ಮನು ಶಿರೋಭಾಗದಲ್ಲಿ ಚಂದ್ರನನ್ನು, ಕಂಠದಲ್ಲಿ ಕೆಪ್ಪನ್ನೂ, ಕಿವಿಯಲ್ಲಿ ಸರ್ಪ ಕುಂಡಲಗಳನ್ನೂ ; ಕೊರಳಲ್ಲಿ ಸರ್ಪಾಭರಣಗಳನ್ನು ; ಅಭಯ ಹಸ್ತದಲ್ಲಿ ತ್ರಿಶೂಲವನ್ನೂ, ನಡುವಿನಲ್ಲಿ ಚರ್ಮಾಂಬರವನ್ನೂ ಸುತ್ತಿ, ಗಂಟೆ, ಶಂಖ, ಢಮರುಗಳನ್ನು ಧರಿಸಿ ಕೋಟಿ ಚಂದ್ರರನ್ನೂ ತಿರಸ್ಕರಿಸುತ್ತಿರುವ ದೇಹಕಾಂತಿ

ಯಿಂದ ರಂಜಿಸುತ್ತಿರುವ ಸಚ್ಚಿದಾನಂದ ಪರಿಪೂರ್ಣನಾಗಿ ಷಣ್ಮುಖನನ್ನು ಎತ್ತಿಕೊಂಡು ವೈದಡವುತ್ತ ಕುಣಿಯುತ್ತಿರುವ ನಂದಿ, ಭೃಂಗಿಯರ ನೋಡಿ ಮುಗುಳ್ನಗೆ ನಗುತ್ತ ಸಂತೋಷಪಡಿಸುತ್ತ ಪರಮಾನಂದದಿಂದ ಓಲೈಸುತ್ತಿರುವ ವೃಷಭನನ್ನು ಕಂಡು ವಿಷ್ಣು ಬ್ರಹ್ಮ ಮೊದಲಾದ ಸಕಲ ದೇವಾನುದೇವತೆಗಳೆಲ್ಲ ಆ ಪರಶಿವ ಮೂರ್ತಿಯ ಪಾದಾರವಿಂದಗಳಲ್ಲಿ ನಮಸ್ಕರಿಸಿ ತಮ್ಮ ಆಸನಗಳಲ್ಲಿ ಮಂಡಿಸುತ್ತಿರಲಾಗಿ ನಾರದರು ತ್ರಿಲೋಕ ಸಂಚಾರವನ್ನು ಮುಗಿಸಿಕೊಂಡು ಅಲ್ಲಿಗೆ ಬರುವಂಥವರಾದರು.

ಶ್ರೇಷ್ಠ ಜಂಗಮ ಗಣದೊಂದಿಗೆ ಓಲಗವನ್ನು ವಹ್ಡಿೖಸುತ್ತಿರುವ ತ್ರಿಪುರಾರಿಯ ಆಸ್ಥಾನಕ್ಕೆ ಬಂದ ನಾರದ ಮಹರ್ಷಿಗಳು ಸರ್ವರಿಗೂ ನೆರೆದ ಗಣಂಗಳಿಗೂ ಮಹರ್ಷಿ ದೇವತೆಗಳಿಗೂ ವಂದಿಸುತ್ತ ಆಸ್ಥಾನ ಪಂಡಿತನೂ, ಶಿವಭಕ್ತ ಸಂಪನ್ನನೂ ಅನಂತ ವಿದ್ಯಾ ವಿಶಾರದನೂ, ಸಂಗೀತ ಪ್ರವೀಣನೂ ಆದ ನಾರದ ಬ್ರಹ್ಮರ್ಷಿಯು ದೇಹವೆಂಬ ಮರವು ಬೀಳುತ್ತಿರಲು ಬಿಟ್ಟಂತೆ ತೋರಿ ಜಟಾ ಪಟಲವನ್ನು ಧರಿಸಿ ಭಸ್ಮಲಿಪ್ತನಾಗಿ ಮುಗುಳು ನಗೆ ನಗುತ್ತ ಶಿವಸಾಮೀಪ್ಯ ಬಂದು ಗಂಗಾಧರನ ಪಾದಕ್ಕೆ ಲಲಾಟ ಸೋಂಕುವಂತೆ ನಮಸ್ಕರಿಸಿಶೃತಿ ಮಾಡಿ ಶುದ್ಧ ವಾಗಿರುವ ಬೃಹತಿ ಎಂಬ ತನ್ನ ವೀಣೆಯನ್ನು ಬಾರಿಸುತ್ತ

ಮಂಗಳ ಸ್ವರೂಪನೆ ಜಯು ।
ವಿಷಕಂಠನೆ ಜಯ ।
ಜಯ ವೃಷಭಧ್ವಜನೆ ಜಯ ।
ಜಯ ಸರ್ಪಾಭರಣನೆ ।
ಜಯ ಸಕಲ ದೇವತಾರ್ಚಕನೆ ।
ಜಯ ಭಕ್ತ ಸುಖದಾಯಕನೆ ।
ಜಯ ಗೌರೀರಮಣನೆ ।
ಜಯ ತ್ರಿನೇತ್ರನೆ ।

ಜಯ ಜಯ ವೃಷ ಹರಿಯೆ ನಿಮಗೆ ಜಯವಾಗಲಿ ನಿಮ್ಮ ಪಾದಾರವಿಂದಗಳಿಗೆ ನಮಸ್ಕರಿಸುತ್ತೇನೆ. ಎಂಬುದಾಗಿ ಸ್ತುತಿಸಿ ಕೈಮುಗಿದುಕೊಂಡು ನಿಂತಿರುವ ನಾರದರನ್ನು ಮನ್ಮಥ ಧ್ವಂಸಿಯು ನೋಡಿ ಅವರಿಂದ ಭೂಲೋಕ ವರ್ತ

ಮಾನವನ್ನು ಕೇಳಬೇಕೆಂದು ಕುತೂಹಲಗೊಂಡು ತನ್ನ ಕಾಂತೆಯ ಮುಖವನ್ನ ವಲೋಕಿಸಲು. ಜಗನ್ಮಾತೆಯಾದ ಪಾರ್ವತೀ ದೇವಿಯು ಪತಿಯ ಮನೋಭಿ ಪ್ರಾಯವನ್ನು ಅಂತು ನಾರದ ಋಷಿಯ ಮುಖ ಕಮಲವನ್ನು ಕಂಡು, ಎಲೈ ಮುನಿವರನೇ ! ನೀನು ಯಾವ ಯಾವ ಲೋಕಗಳನ್ನು ಸಂಚರಿಸಿ ಬಂದಿರುವಿ ? ಭೂಲೋಕದ ಭಕ್ತಾಗ್ರಣಿಗಳ ವೃತ್ತಾಂತವೇನೆಂಬುದನ್ನು ಬಿಟ್ಟೂಬಿಡದೇ ಹೇಳು ವಂತನಾಗೆನಲು.

ನಾನೆ ಮೊದಲೇ ಭಿನ್ನವಿಸಿಕೊಳ್ಳಬೇಕೆಂದ ವಿಷಯವನ್ನು ತಾಯಿಯವರು ಪೂರ್ವದಲ್ಲಿಯೇ ಕೇಳಿದ್ದು ವಿಹಿತವೇ ಆಯಿತು. ಅನ್ನುತ್ತ ಶಿವನಿಗೂ ಶಿವಿನಿಗೂ ಕೈಮುಗಿದು ನಿಂತುಕೊಂಡು ಎಲೈ ! ದೇವ ದೇವನಾದ ಮಹೇಶ್ವರನೇ ನನ್ನ ಭಿನ್ನಾಭಿಪ್ರಾಯವನ್ನು ಆಲಿಸಬೇಕು.

ಶಿವಭಕ್ತಿಯು ಎಲ್ಲಾ ಲೋಕಗಳಲ್ಲಿಯೂ ಬೆಳಗುತ್ತಿರುವದು. ಶಿವಸದ್ಭಕ್ತರು ಸಂಪನ್ಮೂಲಭರಿತರಾಗಿ ಸದಾಚಾರ, ಶಿವಾಚಾರ, ಬೃತ್ತ್ಯಾಚಾರಗಳನ್ನ ನಡಿಸಿ ಕೊಂಡು ಅಷ್ಟಾವರಣ, ಪಂಚಾಚಾರ, ಷಟಸ್ಥಲಗಳನ್ನು ರೂಢಿಸಿಕೊಂಡು ದೇಹವೆಂಬ ದೇಗುಲದಲ್ಲಿ ಪ್ರಾಣವೆಂಬ ಶಿವಲಿಂಗಕ್ಕೆ ಜೀವನೆಂಬ ಶಿವಕಳೆಯನ್ನು ತುಂಬಿ ಲಿಂಗಪತಿ ಅಂಗಸತಿಯಾಗಿಸಿಕೊಂಡು ಪತಿಯಾಜ್ಞೆಯಂತೆ ಲಿಂಗಾಂಗ ಸಾಮರಸ್ಯವನ್ನು ಹೊಂದಿ ಶಿವ ಜೀವೈಕ್ಯತೆಯನ್ನು ಹೊಂದುತ್ತಿದ್ದಾರೆ. ಆದರೆ ಶಿವಶರಣರ ಬೀಡಾಗಿ ಮೆರೆದ ಸಗರ ನಾಡು ಇಂದು ಹೈದರಾಬಾದ ನಿಜಾಮನ ನಾಡಿಗೆ ಅಳವಟ್ಟಿದೆ. ಸಗರ ನಾಡಿನ ಗುಲ್ಬರ್ಗಾ ಜಿಲ್ಲೆಯಲ್ಲಿ ಇಸ್ಲಾಂ ಮತವು ಹೆಚ್ಚಿ ಶಿವಮತವನ್ನು ನಿಂದಿಸುತ್ತಿದ್ದಾರೆ. ಸಕಲ ಧರ್ಮ ತತ್ವಗಳು ಆಚಾರ ವಿಚಾರಗಳು ನೀತಿ ಭೋದಗಳು ಹಾಳಾಗಿ ಹೋಗುತ್ತಿವೆ. ಅಧರ್ಮ, ಅತ್ಯಾಚಾರ, ಅನಾಚಾರ, ಕಳವು, ಮೋಸ, ಕೊಲೆಗಡುಕತನ, ಸುಲಿಗೆ ವ್ಯಭಿಚಾರಗಳ ಬೀಡಾ ಗಿದೆ. ಅರಳ ಗುಂಡಗಿಯ ಸತ್ಯ ಶರಣ ಬಸವನ ಪುಣ್ಯದ ಆಗರವಾದ ಈ ಸಗರ ನಾಡು ಇಂದು ಪಾಪದ ಹೊರೆಯಾಗಿದೆ ಅಲ್ಲಲ್ಲಿ ಶ್ರೇಷ್ಠ ಶಿವಭಕ್ತರು ಗುಟ್ಟಾಗಿ ಕಾಲಾಪಹರಣ ಮಾಡುತ್ತಿರುವರು. ಇದನ್ನೆಲ್ಲ ಹೋಗಲಾಡಿಸುವದಕ್ಕೋಸ್ಕರ ಕಲಬುರ್ಗಿ ನಾಡಿನ ಗಡಿ ನಾಡಾದ ಪಡುವಣದಲ್ಲಿ ಒಬ್ಬ ಮಹಾಮಹಿಮಾ ಪುರುಷನನ್ನು ಬೆಳಗಿಸಬೇಕು. ಆ ತ್ರಿಕಾಲ ಜ್ಞಾನಿಯು ಅಷ್ಟಾವರಣಗಳೇ ಅಂಗ ವಾಗಿಸಿಕೊಂಡು, ಪಂಚಾಚಾರಗಳೇ ಪ್ರಾಣವಾಗಿಸಿಕೊಂಡು ಷಟಸ್ಥಲಗಳೇ

ಮಾರ್ಗವಾಗಿಸಿಕೊಂಡು ಪ್ರಜ್ವಲಿಸಿ ಬೆಳಗಬೇಕು. ಅಷ್ಟಾವರಣ, ಷಟಸ್ಥಲ, ಪಂಚಾಚಾರ ಭಕ್ತಿ-ಜ್ಞಾನಗಳನ್ನು ಜನರಲ್ಲಿ ಮೂಡಿಸಬೇಕು. ಮಠ ಮಂದಿರಗಳಲ್ಲಿ ಶಿವಪುರಾಣ, ಶಿವಭಜನೆ ಶಿವಕೀರ್ತನೆ, ವೇದ ಉಪನಿಷತ್ ಆಗಮಗಳ ಪ್ರವಚನಗಳು ಪ್ರಕಾಶಿಸಿ ವೈಭವ ಶಿಖರಕ್ಕೇರುವಂತೆ ಮಾಡಬೇಕು. ಅನಾಚಾರಿಗಳನ್ನು ಆಚಾರಕ್ಕೂ, ಅಧರ್ಮಿಗಳನ್ನು ಧರ್ಮಕ್ಕೂ, ಅಸತ್ಯರನ್ನು ಸತ್ಯಕ್ಕೂ, ಅವಿವೇಕಿಗಳನ್ನು ವಿವೇಕಕ್ಕೂ ಅಮಾರ್ಗಿಗಳನ್ನು ಸುಮಾರ್ಗಕ್ಕೂ ಹಚ್ಚುವಂತಾಗಬೇಕು. ಈ ಎಲ್ಲ ಕಾರ್ಯಗಳು ಅಲ್ಲಿ ಸ್ಥಾಪನವಾಗಲು ಒಬ್ಬ ಅವತಾರಿ ಪುರುಷನನ್ನು ಉದಯಿಸುವಂತೆ ಕೃಪೆ ಮಾಡಿರಿ.

ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನ ಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥
ಪರಿತ್ರಾಣಾಯ ಸಾಧುನಾಂ ವಿನಾಶಾಯಚ ದುಷ್ಕೃತಾಂ ।
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥

ಎಂದು ವಿನಂತಿಸಿಕೊಂಡ ನಾರದರನ್ನು ತಮ್ಮ ಪೀಠದ ಮೇಲೆ ಕೂಡ್ರುವಂತೆ ತಿಳಿಸಿ ಅಲ್ಲೇ ಬಲಬದಿಯಲ್ಲಿ ಶಿವ ಸೇವಾ ತತ್ಪರನಾಗಿ ನಿಂತುಕೊಂಡಿರುವ ಒಬ್ಬ ಜಂಗಮ ಪುಂಗವನಿಗೆ ಮೃಡನು ಇಂತುಸುರುತ್ತಾನೆ.

ನಾರದರ ಮಾತುಗಳನ್ನು ಕೇಳಿ ಪರಮ ಸಂತುಷ್ಟನಾದ ವೃಷಭೇಂದ್ರನು ಜಂಗಮೋತ್ತಮನನ್ನು ಕರೆದು ಎಲೈ ಶಿವಸಂಭೂತನಾದ ಜಂಗಮಶ್ರೇಷ್ಠನೇ ಕೇಳು ನೀನು ಕನ್ನಡ ನಾಡಿನ ಕಣ್ಮಣಿಯಾದ ಕಲಬುರ್ಗಿಯ ಪಡುವಲ ನಾಡಾದ ಮಾಗಣಗೇರಿ ಎಂಬ ಪುರದಲ್ಲಿ ಸದಾಚಾರ ಸಂಪನ್ನರೂ, ಶಿವಭಕ್ತ-ವೀರಶೈವ ಧರ್ಮಿಗಳೂ, ತತ್ವ ಜ್ಞಾನಿಗಳೂ, ಜಂಗಮ ದಂಪತಿಗಳೂ ಆದ ಗುರುಬಸವಾರ್ಯ ಹಂಪಮ್ಮರೆಂಬ ದಂಪತಿಗಳ ಉದರದಲ್ಲಿ ಚನ್ನವೃಷಭೇಂದ್ರನೆಂಬ ನಾಮದಿಂದ ಜನಿಸಿ ಮಂದಮತಿಗಳಾದ ಮೂಢರಿಗೆ ವೀರಶೈವ ಧರ್ಮದ ತಿರುಗಳನ್ನು ತಿಳಿಸುತ್ತ ಶಿವಸಾಮ್ರಾಜ್ಯದ ಸುಖೋಪ ಭೋಗವನ್ನು ಅರುಹುತ್ತ ಭಕ್ತರ ಕಾರುಣ್ಯ ನಿಧಿಗಳಾಗಿ ಮನದ ಕಲ್ಮಶವನ್ನು ತೊಳೆದು ಬೆಳಗುವಂತೆ ಮಾಡಿ ಜನರನ್ನು ಉದ್ಧರಿಸಬೇಕು. ಅವರಿಗೆ ಭಕ್ತಿ ಜ್ಞಾನವನ್ನೂ ಬೇಡಿದಿಷ್ಟಾರ್ಥವನ್ನೂ ಕೊಟ್ಟು ಕಾಪಾಡಬೇಕು. ಶಿವನಾಮಾಮೃತವು ಚಿರಕಾಲ ಉಳಿಯುವಂತೆ ಮಾಡಬೇಕು.

ಭಕ್ತರ ಹಿತಾರ್ಥವನ್ನು ನೆರವೇರಿಸಬೇಕು. ದುರ್ಗುಣಿಗಳನ್ನು ಸುಗ ಣಿಗಳನ್ನಾಗಿ ಮಾಡಬೇಕು. ಇಂತೆಂದು ಅಪ್ಪಣೆ ಕೊಡಲಾಗಿ ಜಂಗಮ ಪುಂಗವನು ಪರ ಮಾತ್ಮನನ್ನು ಕುರಿತು ವಿಶ್ವಪತಿಯೇ ಮಹಾಮಹಿಮನೇ ವೇದ ಆಗಮ- ಸ್ಸಾರ ಗಳಿಗೆ ನಿಲುಕದ ಚರಂತನೇ ನಿಮ್ಮ ಪಾದ ಸೇವಕನಾದ ನಾನು ಭೂಮಿಯಲ್ಲಿ ನಿಮ್ಮನ್ನಗಲಿ ಹೇಗೆ ಜೀವಿಸಲಿ ಎಂದು ದು ಖಿತನಾಗಿ ಅಲ್ಪರಿಯಲು ಎಲೈ ಶಿವೋತ್ತಮನೇ ನನ್ನ ಪ್ರಾಣಲಿಂಗವನ್ನೇ ನಿನಗೆ ಧಾರೆ ಎರೆದು ಭೂಮಿಯಲ್ಲಿ ಸಕಲ ಪ್ರಪಂಚಕ್ಕೂ ನೀನೇ ಅಧಿಪತಿಯಾಗಿ ಶ್ರೀಮದ್ ಘನಲಿಂಗ ಚಕ್ರವರ್ತಿ ಗಳಾಗಿ ಸದ್ಧರ್ಮ ಸಿಂಹಾಸನಾರೂಢನಾಗಿ ಸರ್ವಶ್ರೇಷ್ಠ ಜಂಗಮ ಮೂರ್ತಿಗ ಳಾಗಿ ಚರಪಟ್ಟಾಧ್ಯಕ್ಷನಾಗಿ ಮೆರೆಯುವಂತೆ ಕರುಣಿಸುತ್ತೇನೆ. ಮತ್ತು ನಾನೂ ಕೂಡಾ ಭೂಮಿಯಲ್ಲಿ ನಿನ್ನ ಗುರುವಾಗಿ ತೋಂಟದಾರ್ಯನೆಂಬ ನಾಮಾವಳಿ ಯಿಂದನೆಲೆಸಿ ಸದಾ ನಿನಗೆ ದರ್ಶನ ಭಾಗ್ಯ ವೀಯುತ್ತ ನಿನ್ನ ನೆರಳಾಗಿ ನಿನ್ನನ್ನು ಕಾಪಾಡುತ್ತೇನೆ. ಜ್ಞಾನ ಸೌಖ್ಯವನ್ನು ಕೊಟ್ಟು ತ್ರಿಕಾಲ ಜ್ಞಾನಿಯಾಗಿ ನಿಜಾನಂ ಬ್ರಹ್ಮದಲ್ಲಿರುವಂತೆ ಮಾಡುತ್ತೇನೆ. ನಿನ್ನ ಇಷ್ಟಲಿಂಗವಾಗಿ ತನ್ನ ಕರುಣ ಮೊದಲಾಗಿ ನಿನ್ನ ರೋಮಗಳಲ್ಲೆಲ್ಲ ಬೆರೆತು ಅಂಗಾಂಗಗಳಲ್ಲೆಲ್ಲ ಕೂಡಿ ಕೊಂಡು ಭೋಗಿಸುತ್ತೇನೆ. ಎಂದು ಆಜ್ಞಾಪಿಸಿ ಕಳಿಸಿಕೊಡಲು ಮೃಡನ ಪಾದಕ್ಕೂ ಮೃಡಾಣಿಯ ಪಾದಕ್ಕೂ ನಮಸ್ಕರಿಸಿ ಶಿವಗಣ ಸಮೇತನಾಗಿ ಶಿವ ಸಹಸ್ರನಾಮಾಮಾವಳಿಯಿಂ ಪಾಡುತ್ತ ಹೊರಟು ಮಧ್ಯಮಾರ್ಗದಲ್ಲಿ ಇಂದ್ರಾದಿ ದೇವತೆಗಳಿಂದ ಸತ್ಕರಿಸಿಕೊಳ್ಳುತ್ತ ಭೂತಲಕ್ಕೆ ಬರುವಂತವನಾದನು.

## ನಗರನಾಡ ಸಿರಿ

ಜಂಬೂ ದ್ವೀಪದಲ್ಲಿ ಅತ್ಯಂತ ಶ್ರೇಷ್ಠವಾದ ನಮ್ಮೀಭಾರತ ಭೂಮಿಯು ಪೂರ್ವದಿಂದಲೂ, ಮಹಿಮಾ ಶಾಲಿಗಳಾದ ಬ್ರಹ್ಮಜ್ಞಾನಿಗಳಿಂದಲೂ, ಪ್ರಸಿದ್ಧ ವಾದ ಮುಕ್ತಿ ಪ್ರದಾಯಕವಾದ ಪುಣ್ಯ ಕ್ಷೇತ್ರಗಳಿಂದಲೂ, ಜಗಜ್ಯೋತಿಯಾಗಿ ಬೆಳಗಿದ ಮಹಾ ಮಹಾ ಶಿವಶ್ರೇಷ್ಠರೂ ಬೆಳಗಿ ಎಲ್ಲೆಡೆಯಲ್ಲಿಯೂ, ತಮ್ಮ ವಿಭೂ ತಿಯನ್ನು ನೆಲೆಗೊಳಿಸಿ ಪರಾತ್ಪರ ಸ್ವರೂಪವೇ ತಾನಾಗಿ ಪರರ ಜ್ಯೋತಿಯಂತೆ ಬೆಳಗಿ ಬೈಲಾಗಿ ಹೋದರು.

ಉಪಖಂಡವೆಂದು ಹೆಸರಾದ ಭರತಖಂಡದಲ್ಲಿ ಹೊನ್ನಿನ ಹೊಗೆ ಹಾಯು ಕನ್ನಡನಾಡಿನ ಉತ್ತರಾ ಪಥಕ್ಕೆ ಸೇರಿದ ಸಗರ ನಾಡು ಐಸಿರಿಯಲ್ಲಿ ಹೆಸರಾಗಿ ಶಿವಶರಣರ ಬೀಡಾಗಿ, ತತ್ವಜ್ಞಾನಿಗಳ ತವರಾಗಿ ಪರಂಜ್ಯೋತಿಗಳ ನಾಡಾ ಬೆಳಗುತ್ತಿದೆ. ಇದು ಅತ್ಯುನ್ನತವಾದ ಕೋಟೆ ಕೊತ್ತಲಗಳಿಂದ ಸುತ್ತುಗಟ್ಟ ಅಂದವಾದ ಪುರದ್ವಾರ ಮಂದಿರ ಮಂಟಪಗಳಿಂದ ಒಪ್ಪುತ್ತಿವೆ. ವಜ್ರಮ ಗಳಿಂದ ಕೆತ್ತಿದ ರಾಜಪಾಡೆಗಳ ಸಾಲುಗಳಿಂದ ಶೋಭಿಸುತ್ತಿದೆ. ನಿಬಿಡವಾ ಬೆಳೆದ ಗಿಡ ಮರಗಳ ತಣ್ಣೆಳಲುಗಳ ತಂಪಿನಿಂದ ಮುದ್ದು ಬೀರುವ ಉದ್ಯಾನ ಳಿಂದ ಎದ್ದು ಕಾಣುತ್ತಿದೆ. ತಾವರೆಗಳ ತಂಗೊಳಗಳಿಂದ ತಂಬೆಲರು ತಣ್ಣ ತೀಡುತ್ತಿದೆ. ಕಣ್ಮನಂಗಳಿಗಾನಂದ ಬೀರುವ ವನಗಳಿಂದೊಪ್ಪುವ ಅಮರಾ ಯಂತೆ ಒಪ್ಪುತ್ತಿದೆ. ಅಲ್ಲದೆ ನದಿಗಳಿಂದಲೂ, ಕಾಲುವೆಗಳಿಂದಲೂ, ಅನೇ ಹಳ್ಳಿಗಳಿಂದಲೂ, ಫಲಭರಿತವಾದ ಗದ್ದೆ ತೋಟಗಳಿಂದಲೂ, ಫಲವತ್ತಾ ಭೂಮಿಗಳಿಂದಲೂ, ಕೊಳ್ಳ, ಕೆರೆ, ಅರವಟ್ಟಿಗೆ, ಅನ್ನಛತ್ರ, ದೇವಾಲಯ ಳಿಂದಲೂ, ವೈಭವ ಶಿಖರಕ್ಕೇರಿದ ವಿದ್ಯಾಮಂದಿರಗಳಿಂದಲೂ ಸಿಬಿಡೀಕೃತವಾ ಈ ದೇಶದಲ್ಲಿ ಕಲಬುರ್ಗಿ ಜಿಲ್ಲೆಯ ಜೇವರ್ಗಿ (ಅಂದೋಲಾ) ತಾಲೂಕಾದಲ್ಲಿ ಮಾಗಣಗೇರಿ ಎಂಬ ಗ್ರಾಮುವು ಧ್ವಜ ಪಟಗಳಿಂದ ಶೋಭಿಸುತ್ತಿರುವ ಉಪ್ಪರ ಗಳಿಂದ ಶುಭಕರವಾದ ಹಲವು ದೇವಾಲಯಗಳಿಂದ ಬಾಳೆ, ಕಬ್ಬು, ತೋ ಗಳಿಂದ ಸುತ್ತುವರೆದ ಮನಮೋಹಕವಾದ ಆ ಗ್ರಾಮದಲ್ಲಿ ಬೃಹನ್ಮಠ(ಹಿರೇಮ ವೀರ ಮಾಹೇಶ್ವರರಾದ ಶಿವಭಕ್ತ ಸುಸನ್ನರೂ, ಅನ್ನದಾಸೋಹ ಪ್ರೇಮಿಗಳ ಹರಗುರು ಚರಪಟ್ಟಾಧ್ಯಕ್ಷರ ಸೇವಾನಿಷ್ಠರೂ ಆದ ಗುರುಬಸವಾರ್ಯ ಹಂಪ ರೆಂಬ ವೀರಶೈವ ದಂಪತಿಗಳು ಸದ್ಗುಣಾಢ್ಯರಾಗಿ ರಂಜಿಸುತ್ತಿದ್ದರು.

## ಜನನ

ವೀರಶೈವ ಧರ್ಮಾಭಿಮಾನಿಗಳೂ, ಸರ್ವಶ್ರೇಷ್ಠ ಜಂಗಮ ದಂಪತಿಗಳ ತ್ರಿವಿಧ ದಾಸೋಹ ಮೂರ್ತಿಗಳೂ ಆದ ಹಂಪಮ್ಮ ಗುರು ಬಸವಾರ್ಯರು ಭ ಬಲದಿಂದ ಶಿವಭಕ್ತಾಸಕ್ತರಾಗಿ ಇರುತ್ತಿದ್ದರು. ಪತಿವ್ರತಾ ಶಿರೋಮಣಿಯಾ ತಾಯಿ ಹಂಪಮ್ಮನವರು ಪತಿಭಕ್ತಿ ಸಂಪನ್ನಳೂ, ಪತಿ ಆಜ್ಞಾಧಾರಕ ಪತಿಯ ಸಕಲ ಕಾರ್ಯ ನಿರ್ವಾಹಕಳೂ, ಪತಿಯ ಇಂಗಿತವನ್ನರಿತು ನಡೆ

ಸತೀಧರ್ಮ ಪರಿಪಾಲಕಳೂ, ಪತಿಯೇ ದೇವರೆಂದು ನಂಬಿ ಪತಿಪಾದ ಪೂಜಾ ಪರಳೂ, ಅಷ್ಟಾವರಣ ಪಂಚಾಚಾರ, ಷಟಸ್ಥಲಗಳ ಮರ್ಮವನ್ನು ಶೋಧಿಸಿ ನಿಷ್ಠಾವಂತ ಲಿಂಗ ಪೂಜಕಳೂ ಆಗಿ ಬೆಳಗುತ್ತಿದ್ದಳು. ಈರ್ವರೂ ದಂಪತಿ ಗಳು ಪ್ರೀತಿಯಿಂದ ಶಿವಶರಣರ ಹಾಗೂ ಹರಗುರು ಚರಮೂರ್ತಿಗಳ ಪಾದ ಪೂಜೆಯನ್ನು ಮಾಡುತ್ತ ಶಿವ ಪುರಾಣಗಳನ್ನು ಭಕ್ತಿಯಿಂದ ಕೇಳುತ್ತ, ಶಿವಕಥೆ, ಶಿವಸಹಸ್ರ ನಾಮಾವಳಿಗಳನ್ನು ತ್ರಿಕರಣ ಪೂರ್ವಕವಾಗಿ ಓದುತ್ತ ವೇದ, ಆಗಮ, ಶಾಸ್ತ್ರ ಪುರಾಣ, ಪುಣ್ಯ ಕಥೆಗಳ ತಿರುಳನ್ನು ಅರಗಿಸಿಕೊಂಡು ಪರಶಿವ ಮೂರ್ತಿಯ ಸಮಾನರಾಗಿ ಮೆರೆಯುತ್ತಿದ್ದರು. ಅಸಮ ಸಂಪತ್ತಿನೊಂದಿಗೆ ಗುಣಾಢ್ಯಳೂ, ಸುರಸುಂದರಿಯೂ ರೀತಿನೀತಿಗಳನ್ನೂ ಹೊಂದಿದ ಪತ್ನಿಯನ್ನು ಪಡೆದ ಯೌವ್ವನದ ಮೊದಲ ಪಾವಟಣಿಗೆಯನ್ನೇರಿದ ಗುರು ಬಸವಾರ್ಯರು ಭಯ, ಭಕ್ತಿಯಿಂದ ವಿನಯದಿಂದ ಅತಿಥಿ ಸತ್ಕಾರವನ್ನು ಗೈಯುತ್ತ, ಅನ್ನದಾನ, ವಸ್ತ್ರದಾನ, ಅಧ್ಯಯನ ಮಾಡುತ್ತಿರುವ ಮಕ್ಕಳಿಗೆ ಧನ ಸಹಾಯ ಮಾಡುತ್ತ ಮನೆಯಲ್ಲಿ ಪುರಾಣ ಪುಣ್ಯಕಥೆಗಳನ್ನು ಹೇಳಿಸುತ್ತ ಸರ್ವಧರ್ಮ ಸಮನ್ವಯ ರಾಗಿ, ಜಂಗಮ ಧರ್ಮನಿಷ್ಠೆಗಾಗಿ ಸಕಲ ಪ್ರಪಂಚಕ್ಕೂ ಬೆಳಕಾಗಿ ಬೆಳಗು ತ್ತಿದ್ದರು.

ಇಂತಪ್ಪ ದಂಪತಿಗಳು ಒಂದು ಶುಭ ದಿನದಂದು ಶುಭ ಸೂಚನೆಯೊಂದಿಗೆ ಸುಭಕರವಾದ ದಿವ್ಯ ಕನಸೊಂದನ್ನು ಬೆಳಗಿನ ಜಾವದಲ್ಲಿ ಕಂಡರು. ಪರ ಮಾತ್ಮನು ಒಬ್ಬ ಜಂಗಮ ಮೂರ್ತಿಗೆ ಅಪ್ಪಣೆ ಕೊಡಿಸಿದಂತೆ ತೋಂಟದಾರ್ಯ ಶಿವಾಚಾರ್ಯರ ರೂಪದಲ್ಲಿ ಭಸ್ಮ, ತ್ರಿಪುಂಡ್ರವನ್ನೂ, ಕೊರಳಲ್ಲಿ ರುದ್ರಾಕ್ಷಿ ಮಾಲೆಯನ್ನೂ, ಕಂಠದಲ್ಲಿ ಶಿವಲಿಂಗದ ವಸ್ತ್ರವನ್ನೂ, ಶಿರಸ್ಸಿನಲ್ಲಿ ಜಡೆಯನ್ನೂ, ಸುತ್ತಿ ಕಟ್ಟಿ ಶುಭ್ರವಾದ ಕಾವಿಯ ಬಟ್ಟೆಗಳನ್ನು ಧರಿಸಿಕೊಂಡು ಘನ ತೇಜಸ್ವಿಗ ಳಾಗಿ ಓಜಸ್ಸು ತುಂಬಿ ಕಳಾಪೂರಿತ ಮುಖಕಮಲವದನರಾಗಿ ಘನತೇಜ ಬ್ರಹ್ಮರ್ಷಿಗಳಂತೆ ಒಪ್ಪುವ ಜಂಗಮ ಶ್ರೇಷ್ಠರು ಮಲಗಿದ ದಂಪತಿಗಳೀರ್ವರ ಕನಸಿನಲ್ಲಿಯೂ ಕಾಣಿಸಿಕೊಂಡರು. ಇಂಥಾ ಮಹಾನ್ ಸ್ವಾಮಿಗಳನ್ನು ಕಂಡ ದಂಪತಿಗಳು ಮನೆಯಲ್ಲಿ ಬರಮಾಡಿಕೊಂಡು ಸಾಷ್ಟಾಂಗವೆರಗಿ ಕೈಜೋಡಿಸಿ ನಿಂತಿರಲು ಸ್ವಾಮಿಗಳು ಇಂತೆಂದರು.

ನಿಮಗೆ ಒಬ್ಬ ಸರ್ವ ವಿದ್ಯಾ ಪಾರಂಗತನೂ, ಇಂದ್ರಿಯಗಳ ನಿಗ್ರಹಕನೂ ಜಿತೇಂದ್ರಿ ಪುರುಷನೂ, ಆಡಿದಂತೆ ಮಾಡಿ ತೋರಿಸುವವನೂ, ನುಡಿದಂತೆ ನಡೆಯುಳ್ಳವನೂ, ತ್ರಿಕಾಲಜ್ಞಾನಿಯೂ, ತ್ರಿಕಾಲಲಿಂಗ ಪೂಜಾನಿಷ್ಠನೂ, ಸಿಂಹಾಸನಾಪರನೂ, ಯೋಗಬಲ ಪಂಡಿತನೂ, ಸರ್ವಭಕ್ತ ಪರಿಪಾಲಕನೂ, ಬೇಡಿದಿಷ್ಟಾರ್ಥವನ್ನು ಪೂರೈಸುವವನೂ, ಶಿವಪೂಜಾ ಶ್ರೇಷ್ಠನೂ ಆದ ಒಬ್ಬ ಸರ್ವಶ್ರೇಷ್ಠ ಪುತ್ರನ ಜನನವಾಗುವದು. ಈ ಮಗನನ್ನು ನಮ್ಮ ಹಿರಿಯ ಮಠಕ್ಕೆ ಒಪ್ಪಿಸಬೇಕು. ಮುಂದಿನ ಮಕ್ಕಳು ನಿಮ್ಮ ವಂಶೋದ್ಧಾರಕರಾಗಿ ಬೆಳಗುವರು. ಅವರ ವಂಶಜರೇ ಮುಂದಿನ ಚರ ಪಟ್ಟಾಧ್ಯಕ್ಷರಾಗಿಯೂ ಮೆರೆ ಯುವರು. ಎಂದು ಅಭಯ ವಚನವನ್ನು ಕೊಟ್ಟು ಆಶೀರ್ವದಿಸಲು ಅವರ ದಿವ್ಯ ಹಸ್ತದಿಂದ ಕೋಟಿಸೂರ್ಯ ಪ್ರಕಾಶವನ್ನು ಮೀರಿಸುವ ಘನವಾದ ಪ್ರಭಾ ಜ್ಯೋತಿಯು ಪ್ರಜ್ವಲಿಸುತ್ತ ಬಂದು ತಾಯಿ ಹಂಪಮ್ಮನವರ ಪುಣ್ಯಗರ್ಭವನ್ನು ಹೊಕ್ಕಿತು. ಅದನ್ನೇ ದಿಟ್ಟಿಸುತ್ತ ನಿಂತಿರಲಾಗಿ ಸ್ವಾಮಿಗಳು ಸಾವಧಾನದಿಂದ ನಡೆಯುತ್ತ ಅಲ್ಲೇ ಇರುವ ತೋಂಟದಾರ್ಯನ ಗರ್ಭಗುಡಿಯಲ್ಲಿಯ ಈಶ್ವರ ಲಿಂಗದಲ್ಲಿ ಸೇರಿ ಮಾಯವಾದರು.

ಬೆಳಗಾಗುತ್ತಲೇ ದಂಪತಿಗಳಿಬ್ಬರೂ ಎದ್ದು ಒಬ್ಬರ ಮುಖವನ್ನೊಬ್ಬರು ಈಕ್ಷಿಸುತ್ತ ತಮಗಾದ ಮಹಾದಾನಂದವನ್ನು ವಿವರಿಸುತ್ತ ಅತೀವ ಭಕ್ತಿ ಭಾವ ದಿಂದ ಮಜ್ಜನಂಗೈದು ಸತಿಪತಿಗಳು ಲಿಂಗಾರ್ಚನೆಯನ್ನು ತೀರಿಸಿಕೊಂಡು ಪ್ರಾತಃ ಕಾಲದ ಸೂರ್ಯೋದಯ ಸಮಯಕ್ಕೆ ಭಯ ಭಕ್ತಿಯಿಂದ ಪತ್ನೀ ಸಮೇತನಾಗಿ ಹಾಲು, ತುಪ್ಪ, ಮೊಸರು, ಜೇನುತುಪ್ಪ, ಅರ್ಘ್ಯ, ಪಾದ್ಯ, ಆಚಮನ ಮೊದ ಲಾದವುಗಳಿಂದಲೂ, ಪರಿಮಳಿಸುತ್ತಿರುವ ನಿರ್ಮಲೋದಕದಿಂದಲೂ ನಾನಾ ತರದ ಪುಷ್ಪ, ಧೂಪ ದೀಪಾದಿಗಳಿಂದಲೂ ಘಮಘಮಿಸುತ್ತಿರುವ ಗಂಧಾಕ್ಷತೆ ಗಳಿಂದಲೂ, ಮೀಸಲು ಖಾದ್ಯ ಪದಾರ್ಥಗಳಿಂದಲೂ, ಕೂಡಿದವನಾಗಿ ಬಂದ ತೋಂಟದಾರ್ಯರ ಗರ್ಭ ಗುಡಿಯನ್ನು ದಂಪತಿಗಳ ಸಮೇತರಾಗಿ ಪ್ರವೇಶಿಸಿದರು. ಅಲ್ಲಿರುವ ಶಿವಲಿಂಗ ಮೂರ್ತಿಯನ್ನು ಕಂಡು ಆನಂದಿಸಿ ವಿನಯ ಭಕ್ತಿಪೂರ್ವಕ ಪಂಚಾಭಿಷೇಕವಂ ಗೈದು ನಿರ್ಮಲೋದಕವಂ ಸೊಂಕಿಸಿ, ಭಸ್ಮ ಗಂಧಾಕ್ಷತೆಯನ್ನು ಧರಿಸಿ, ಕರ್ಪೂರಾರುತಿಯನ್ನು ಬೆಳಗಿರವವತ್ತಾದ ಹಣ್ಣು, ಹಂಪಲುಗಳಿಂದೊಡ

ಗೂಡಿದ ಖಾದ್ಯ ಪದಾರ್ಥಗಳ ನೈವೇದ್ಯವನ್ನು ಅರ್ಪಿಸಿ ವೀಳ್ಯ ತಾಂಬೂಲವನ್ನು ಕೊಟ್ಟು ವಿವಿಧ ವಾದ್ಯಗಳಿಂದೊಡಗೂಡಿದ ಪುಷ್ಪಾಂಜಲಿ ಮಾಡಿ ಕರಜೋಡಿಸಿ ಈ ರೀತಿ ಪ್ರಾರ್ಥಿಸುತ್ತಾರೆ.

ಕಾಯೋ ತೋಟೇಂದ್ರ, ಗುರುವರ
ಕಾಯೋ ತೋಟೇಂದ್ರ ॥ಪ॥
ಮಾಗಣ ಪುರನಾಥ ಗುರುನಾಥ
ಭಕ್ತರ ಪೊರೆವೀಶ ।
ಯತಿವರ ಮಹಾಮಹಿಮಾಗಾರ ।
ಗುರುವರ ಕಾಯೋ ತೋಟೇಂದ್ರ ॥೧॥
ಭವತಾಪ ಕಳೆಯುವ ಭವಹರ ।
ಭವವೈದ್ಯಾಗಾರ । ವೇದವಾ
ತಿಳಿಸುವಾಕಾರ । ಗುರುವರಾ ।
ಕಾಯೋ ತೋಟೇಂದ್ರಾ ॥ ೨ ॥

ಪ್ರಾರ್ಥಿಸಿ ಪ್ರದಕ್ಷಿಣೆ ಹಾಕುತ್ತಿರುವಾಗ ತೋಂಟದಾರ್ಯನ ಲಿಂಗದಿಂದ ಒಂದು ಪುಷ್ಪವು ಕೆಳಗೆ ಬೀಳಲು ಹಂಪಮ್ಮನವರು ಅದನ್ನು ತೆಗೆದುಕೊಂಡು ಮುಡಿಯಲ್ಲಿ ಮುಡಿದುಕೊಂಡು, ನಮಸ್ಕರಿಸಿ ಮನೆಗೆ ಬರುವಂತವರಾದರು.

ಈ ರೀತಿ ಷೋಡಷೋಪಚಾರ ಪೂಜೆಯುಗೈದು ಗಂಡ ಹೆಂಡರಿಬ್ಬರೂ ಅಖಂಡ ಪ್ರೇಮದಿಂದ ಭೂಮಂಡಲದಲ್ಲಿ ಸುಖಮಯವಾಗಿ ಆತ್ಮಾನಂದ ಭರಿತ ದಿಂದ ಶಿವ ಪುರಾಣ ಕೇಳುತ್ತ ಶಿವಭಜನೆ ಮಾಡುತ್ತ ಕಾಲ ಕಳೆಯುತ್ತಿರಲಾಗಿ ಶಿವನಪ್ಪಣೆಯನ್ನು ಶಿರಸಾವಹಿಸಿ ಬಂದ ಜಂಗಮನು ಅಂದೇ ಶಿವ ಶುಭಹಸ್ತ ದಿಂದ ಪ್ರಕಾಶಮಾನವಾಗಿ ಬೆಳಗುತ್ತ ಬಂದು ಹಂಪಮ್ಮನವರ ಗರ್ಭದಲ್ಲಿ ಬೆಳೆಯ ತೊಡಗಿದರು. ತಾಯಿ ಹಂಪಮ್ಮನವರು ವಿಲಕ್ಷಣವಾದ ಗರ್ಭವನ್ನು ಧರಿಸಿ ದರು. ಬಸಿರು ಬೆಳೆಯುತ್ತ ಹೋದ ಹಾಗೆ ಆಕೆಗೆ ಅಲೌಕಿಕವಾದ ತರತರದ ಬಯಕೆಗಳು ಬರಹತ್ತಿದವು. ಅವುಗಳೊಡನೆ ಶರೀರದಲ್ಲಿ ಸುಚಿನ್ಹಗಳೂ ತೋರ ಹತ್ತಿದವು. ಏನೆಂದರೆ ಗರ್ಭದಲ್ಲಿ ಆತ್ಮಜ್ಞಾನಿಯು ಪುಟ್ಟುವನು. ಅವನು ಮುಂದೆ ಮನೆ-ಮಾರು ತೊರೆದು ಗವಿಸೇರಿ ಬ್ರಹ್ಮಜ್ಞಾನಿಯಾಗುವನು. ಆ

ಕಾರಣ ಜ್ಞಾನಿಗೆ ಇರಲಿಕ್ಕೆ ತಕ್ಕ ಸ್ಥಳಾವಕಾಶಬೇಕೆಂದು ಬ್ರಹ್ಮನೇ ರಚಿಸಿದ ನೆಂಬಂತೆ ತಾಯಿಯ ಗರ್ಭದ ಆಕಾರವು ಗೋಲಾಕಾರದ ಗುಹೆಯಂತೆ ಶೋಭಿಸಿತು ಒಳಗಿರುವ ಮಹಾಯೋಗಿಯ ಮನವೆಂಬ ಹಂಸವನ್ನು ತನ್ನ ನೀಳವಾದ ಕೇಶಪಾಶಗಳಿಂದ ಬಿಗಿದು ಕಟ್ಟುವುದಕ್ಕೆ ಮಾಯಾ ಜನನಿಯು ಪ್ರೇಗಲು ಆ ಹಂಸ ಯೋಗಿಯು ಮಾಯಾಮಯವೆಂಬ ಕೇಶಗಳ ಬಲೆಯಲ್ಲಿ ಸಿಗದೇ ಹೋದ ಕಾರಣ ಬಲೆಯು ಹರಿದು ಛಿದ್ರ ಛಿದ್ರವಾಯಿತೆಂಬಂತೆ ತಾಯ ತಲೆಗೂದಲುಗಳು ಕವಲೊಡೆದು ಛಿದ್ರವಾದವು. ಬಸುರಿನೊಳಗಿನ ಹಸುಳನ ವಸುಧೆಯನ್ನೇ ಬೆಳಗುವನೆಂದು ತಾಯಿಯ ಶರೀರವೆಲ್ಲ ಬೆಳ್ಳಗೇ ಹೊಳೆಯ ತೊಡಗಿತು. ಇತರ ಹೆಣ್ಣು ಮಕ್ಕಳು ಬಯಸುವಂತೆ ಹಂಸಮ್ಮನವರು ಬಯಸುತ್ತಿರಲಿಲ್ಲ. ಅವರು ಗುರುಭಜನೆ, ಶಿವಕೀರ್ತನೆಗಳನ್ನು ಕೇಳುತ್ತ ಕಾಲಹರಣ ಮಾಡುತ್ತಿದ್ದರು. ಮುಂದೆ ಹುಟ್ಟುವ ಕಂದನಿಂದ ತ್ರಿತಾಪ, ತ್ರಿದೋಷ, ತ್ರಿಮಲಗಳು ನಷ್ಟವಾಗಿ ಹೋಗುವವೆಂಬಂತೆ ತಾಯ ಗರ್ಭದ ಮೇಲಿದ್ದ ತ್ರಿವಳಿಗಳು ಅಷಗಿ ಮಾಯವಾವಾದವು. ಹಂಸಮ್ಮನವರ ನಡುಗೆಯು ಮೆಲ್ಲಗಾಯಿತು. ನವಮಾಸ ತುಂಬಿ ಹರಮಾಯಾಗಾಳಿ ಬೀಸಿ ಬಂದು ಶುಭ-ಮುಹೂರ್ತದಲ್ಲಿ ಅಂದರೆ ಶ್ರೀಮನ್ನೃಪ ಶಾಲಿವಾಹನ ಶಕೆ 1781 ಕಾಲ ಯುಕ್ತಾಕ್ಷಿ ನಾಮಸಂವತ್ಸರ ಇಸ್ವಿಸನ್ 1859 ವೈಶಾಖ ಶುದ್ಧ ಅಕ್ಷಯ ತೃತಿಯಾದಂದು ಕಥಾನಾಯಕರಾದ ಶ್ರೀ ಚನ್ನವೃಷಭೇಂದ್ರ ಮಹಾಸ್ವಾಮಿಗಳು ಸುಖಕರವಾಗಿ ಜನಿಸ್ಧಿದರು.

ಆ ಮಗುವು ಅತ್ಯದ್ಭುತವಾದ ಓಜಸ್ಸಿನಿಂದ ಬೆಳಗುತ್ತ ಸೂರ್ಯಕಾಂತಿಯಂತೆ ತೇಜೋಮಯನಾಗಿ ಬೆಳಗುತ್ತಿದ್ದನು. ಮುಖದ ಮೇಲೆ ಚಂದ್ರನ ಶೀತಲ ಕಾಂತಿ ತೇಲಾಡುತ್ತಿತ್ತು. ವೇಳೆಗೆ ಸರಿಯಾಗಿ ಬಂದ ಮಹಾತಪಸ್ವಿಗಳಾದ ಜಂಗಮ ಮೂರ್ತಿಯೊಬ್ಬರು ತಮ್ಮ ಅಮೃತ ಹಸ್ತದಿಂದ ಆ ಬಾಲಕನಿಗೆ ಶಿವಲಿಂಗಧಾರಣೆಯನ್ನಿತ್ತು ಪುನೀತನನ್ನಾಗಿ ಮಾಡಿ ಭೋಜನ ತೀರಿಸಿಕೊಂಡು ಹೊರಟು ಹೋದರು. ಮುಂದೆ ಹನ್ನೆರಡು ದಿನಗಳು ತುಂಬುತ್ತಲೇ ಲೋಕಾನುರೂಢಿಯಂತೆ ಮುತ್ತೈದೆಯರು ಕೂಡಿಕೊಂಡು ಬಹಳ ಅಟ್ಟಹಾಸದಿಂದ ತೊಟ್ಟಿಲೊಳಗೆ ಹಾಕಿ ಜೋಗಳ ಪಾಡಿ ಚನ್ನವೃಷಭೇಂದ್ರನೆಂದು ನಾಮಕರಣ ಮಾಡಿ ಶಿಸುವನ್ನು ಕಣ್ತುಂಬ ನೋಡಿ ಆನಂದ ಹೊಂದಿದರು. ಬಂದ ಜಂಗಮರಿಗೆ

ಹಾಗೂ ಮುತ್ತೈದೆಯರಿಗೆ ಊಟ ಮಾಡಿಸಿ ದಾನ-ಧರ್ಮಾದಿಗಳಿಂದ ಸಂತುಷ್ಟ ಗೊಳಿಸಿದರು.

## ಬಾಲ ಲೀಲೆ

ಪರಶಿವನೇ-ಪರಶಿವೆಯಂತಿರುವ ಹಂಪಮ್ಮನವರ ಪವಿತ್ರಗರ್ಭದಲ್ಲಿ ಜನಿಸಿ ಬಂದು ನಮಗೆಲ್ಲ ಸುಖ-ಸಂತೋಷವನ್ನುಂಟು ಮಾಡುವನೆಂದು ತಿಳಿದು ಗುರು ಬಸವಾರ್ಯರು ಅತ್ಯಧಿಕ ಎಚ್ಚರದಿಂದ ಮಗುವಿನ ಪಾಲನೆ ಪೋಷಣೆಗೆ ನೆರ ವಾಗುತ್ತಿದ್ದರು. ಸತ್ಯ ಬ್ರಹ್ಮಾನಂದವನ್ನುಂಟು ಮಾಡುವ ಮಗನೆಂದು ಶಿಸು ವಿಗೆ ಚನ್ನವೃಷಭೇಂದ್ರನೆಂದು ನಾಮಕರಣ ಮಾಡಿದರು. ಮಗು ಹಸುವಿನಿಂದ ಕಸಿವಿಸಿ ಪಡದಿದ್ದರೂ ತಾಯಿಯೇ ಖುಸಿಯಿಂದ ತಾನೇ ಬಂದು ಮಗುವಿಗೆ ಮೊಲೆ ಹಾಲುಣಿಸುತ್ತಿದ್ದಳು. ಪ್ರೇಮವುಕ್ಕಿ ತಾಯಿಯ ಮೊಲೆಯೊಳಗಿಂದ ಹಾಲು ತಾವೇ ಸುರಿಯುತ್ತಿದ್ದವು. ಮಗನನ್ನು ಎತ್ತಿ ಮುದ್ದಾಡಿ ಮೊಲೆಕೊಟ್ಟು ಬೆರಳುಗಳಿಂದ ಕೊರಳಿಗೆ ಕುಲಕಾಡಿ ನಗಿಸಿ ಎತ್ತಿ ತೊಪಿರಿದು ತೊಟ್ಟಲೊಳು ಮಲಗಿಸಿ ಮಧುರವಾದ ಮಂಜುಳ ಜೋಗುಳವ ಪಾಡಿ ಮುಖಕ್ಕೆಲ್ಲ ಲಟಲಟನೆ ಮುದ್ದಿಟ್ಟು ಮಲಗಿಸುವಳು.

ಚನ್ನವೃಷಭೇಂದ್ರರು ಮುಂದಿನ ಗುರುತನ್ನು ತೋರಿಸುವನೋ ಏನೋ ಎಂಬಂತೆ ತೊಟ್ಟಿಲಲ್ಲಿ ತನ್ನ ನಿಜಸ್ವರೂಪದ ಆಟವನ್ನಾಡುತ್ತಿದ್ದನು. ಈ ಜಡ ಪ್ರಪಂಚವೆಲ್ಲವೂ ಮಿಥ್ಯವಾದದ್ದು ಶಿವಾಗಮ ಪ್ರಣವಾಕ್ಷರ ವಾಕ್ಯವೊಂದೇ ಸತ್ಯವಾದುದೆಂದು ತೋರಿಸುವಂತೆ ಒಂದಾವೃತ್ತಿ ಮುಗುಳುನಗೆ ನಗುವನು. ಒಮ್ಮೊಮ್ಮೆ ಚಿಟ್ಟನೆ ಚೀರಿ ಅಳುವನು. ಏಕೆಂದರೆ-

"ಒಂದಲ್ಲ ಎರಡಲ್ಲ ನೂರಲ್ಲ ನಾಲ್ಕಲ್ಲ
ಎಂಭತ್ತು ನಾಲ್ಕು ಲಕ್ಷ ಯೋನಿಯೊಳಗೆ ಬಂದೆ ಬಂದೆ
ಬಾರದ ಭವಂಗಳ ನುಂಡೆ ನುಂಡೆ
ಶುಭಾ ಶುಭಂಗಳ ಕಂಡೆ ಕಂಡೆ
ಹಿಂದಣ ಜನ್ಮಂಗಳೇನಾದರೂ ಆಗಲಿ !
ಮುಂದೆ ನೀ ಕರುಣಿಸಾ ಚನ್ನಮಲ್ಲಿಕಾರ್ಜುನಾ"

ಹಿಂದೆ ಎಷ್ಟೋ ಜನ್ಮಗಳಲ್ಲಿ ಹುಟ್ಟಿ ಹುಟ್ಟಿ ಬಂದು ಸಂಸಾರವೆಂಬ ಬೆಂ ಯಲ್ಲಿ ಬೆಂದು ಬೇಯುವ ಹೇಯವಾದ ದುಃಖವನ್ನು ಮತ್ತೆ ಭೋಗಿಸಬೇಕಾ ಶಲ್ಲ ? ಎಂದು ನೆನೆನೆನೆದು ಬಾಯಿಂದ ಹೇಳಲಾಗದೇ ಅಳುವನೋ ಏನೋ ಎಂಬಂತೆ ಚನ್ನವೃಷಭೇಂದ್ರನು ಆಗಾಗ್ಗೆ ಅಳುತ್ತಿದ್ದನು. ಜಗದಲ್ಲಿ ಜನಿಸಿ ಬಳಿಕ ಮಾಯೆಯನ್ನು ತೊರೆದು ಶಿವಶರಣರ ಅಡಿದಾವರೆಗಳನ್ನು ಪಡಿಯುವ ಜೀವರುಗಳಿಗೆ ಭೂಷಣವೆಂದು ಎಡಬಿಡದೇ ಮೃಡನನ್ನು ನೆನೆವನೋ ಏನೋ ಎಂಬಂತೆ ಕಣ್ಣುಮುಚ್ಚಿ ಮಲಗುತ್ತಿದ್ದನು. ಹೇಸಿಯಾದೀ ಮಾಯಾ ಮೋಹ ನಿಷ್ಕರುಣಿ ಪ್ರಪಂಚದ ಮೋಸವನ್ನು ತಿಳಿಯದೇ ಗಾಸಿ ಜಗವೆಲ್ಲ ಮಡಿವದು. ನಾನು ಮಾತ್ರ ಇದರಲ್ಲಿ ಸಿಕ್ಕು ತೊಳಲಿ ಬಳಲಿ ಬೆಂಡಾಗಿ ಸಾಯಲಾರೆನು ಎಂದು ಈ ಮಾಯಾ ಪ್ರಪಂಚವೆಂಬ ತೊಟ್ಟಿಲವನ್ನು ಗಟ್ಟಿಯಾಗಿ ಪಡೆಯು ವನೋ ಏನೋ ಎಂಬಂತೆ ಕಾಲುಗಳನ್ನು ಬಡಿಯುತ್ತಿದ್ದನು. ವೈಯ್ಯಾಕರಣಿ ಯಾಗಿ ಚತುಷ್ಟಾದ ಪ್ರಾಣಿಗಳಲ್ಲಿ ನಾನೇ ಎಂದು ತನ್ನ ನಿಜಾನಂದವನ್ನು ಸರ್ವ ರಿಗೆ ಇತ್ತ ಜೀವನ್ಮುಕ್ತನಾಗಿ ವಿದೇಹ ಕೈವಲ್ಯವಂ ಪಡೆಯುವದೇ ವೀರಶೈವ ತತ್ವ ವೆಂದು ಧಾರುಣಿಗೆ ತೋರುವನೋ ಎಂಬಂತೆ ಆಗಾಗ್ಗೆ ತನ್ನ ಬಿಡಜೋಳ್ಗಳನ್ನೆತ್ತಿ ಲೀಲೆಯಿಂದ ಆಡುತ್ತಿದ್ದನು. ನಿರ್ಗುಣ, ನಿರಂಜನ, ನಿರಾಭಾರಿ ಮಹಾಲಿಂಗಾಂಗ ನಿಷ್ಠ ಸದ್ಗುರು ಜಂಗಮನ ಪಾದೋದಕವನ್ನು ಕೊಂಡು ತೀರ್ಥ ಪ್ರಸಾದವೆಂದು ಕೊಂಡು ಭವರೋಗವನ್ನು ಹಿಂಗಿಸುವೆನೆಂಬಂತೆ ಸೇವಿಸುವನೋ ಏನೋ ಎಂಬಂತೆ ತನ್ನ ಕಾಲು ಐದು ಬೆರಳುಗಳನ್ನು ಬಾಯಲ್ಲಿ ಹಿಡಿದು ಜುರುಜುರು ಚೀಪುತ್ತಿ ದ್ದನು. ಸಕಲ ಜೀವರುಗಳು ಈ ಸಂಸಾರವೆಂಬ ಸಾಗರದಲ್ಲಿ ಈಸಿ ಇಹ-ಪರ ಗಳೆಂಬ ದಡಗಳನ್ನು ಸೇರದೇ ಅಲ್ಲಲ್ಲಿ ಮುಳಗಿ ಹೋಗುವದು. ನಾನು ಮಾತ್ರ ಇದರಲ್ಲಿ ಈಸಿ ಪಾರಾಗುವೆನೆಂದು ತೋರಿಸಲು ತನ್ನ ತೋಳುಗಳನ್ನು ಚಾಚಿ ನೆಲದ ಮೇಲೆ ನಡೆದು ಈಸುತ್ತಿರುವನು. ಅಜ್ಞಾನವಾದೀ ಎರಡು ಕಣ್ಣುಗಳಿಗೆ ಜಗದ ವಿಷಯಾದಿಗಳು ; ಮನವೇ ಮೊದಲಾದ ಸರ್ವೇಂದ್ರಿಯಂಗಳು ಕ್ಷಣಿಕ ಸುಖವನ್ನು ಹೊಂದಿ ಜೀವಾತ್ಮನನ್ನು ಮತ್ತೆ ಮತ್ತೆ ಜನನ ಮರಣಕ್ಕೆ ಗುರಿ ಮಾಡುವವೆಂದು ಬಗೆದು ಅಂತರ್ದೃಷ್ಟಿಯನ್ನು ಬಲಿಸಿ ಜ್ಞಾನ ಬಿಂದುವಿನಿಂದ ತನ್ನನ್ನು ತಾನರಿದು ಮೋಕ್ಷವನ್ನು ಪಡೆಯುವನೆಂಬಂತೆ ಕಣ್ಣುಗಳನ್ನೂ ಮುಚ್ಚಿ ಗಾಢ ನಿದ್ರೆಯಂಗೈಯ್ಯುವನು. ಇಂತಹ ಬಾಲಲೀಲೆಗಳನ್ನು ತೋರುತ್ತ ತೊಟ್ಟಿ

ಲಲ್ಲಿ ಆಡಿ ಗಹಗಹಿಸಿ ನಕ್ಕು ನಗಿಸುವ ಚನ್ನವೃಷಭೇಂದ್ರನನ್ನು ತಾಯಿ ಹಂಸಮ್ಮನು ಆಲಿಂಗಿಸಿ ಅಕ್ಕರದಿಂದ ಬಗಲಲ್ಲಿ ಹಿಡಿದು ಮುದ್ದಾಡಿ ಮತ್ತೊಬ್ಬರ ದೃಷ್ಟಿ ತಾಕೀತೆಂದು ಸೆರಗು ಮರೆಮಾಡಿ ಉಕ್ಕಿ ಬರುವ ಮೊಲೆ ಹಾಲನ್ನು ಕುಡಿಸಿ ಮತ್ತೆ ತೊಟ್ಟಿಲಲ್ಲಿ ಮಲಗಿಸಿ ಹೋಗುತ್ತಿದ್ದಳು. ಇದರಂತೆ ಕೆಲದಿನಗಳೆಯಲಾಗಿ ದಿನಕ್ಕೊಮ್ಮೆ ಮಗು ತಾಸೆರಡು ತಾಸು ತೊಟ್ಟಿಲಲ್ಲಿ ಇರುತ್ತಿರಲಿಲ್ಲ. ಗುರುಬಸವಾರ್ಯರೇ ತೆಗೆದುಕೊಂಡು ಹೋಗಿರಬೇಕೆಂದು ಹಂಪಮ್ಮನವರು ಸುಮ್ಮನಾಗುತ್ತಿದ್ದರು. ಇದರಂತೆ ನಾಲ್ಕಾರು ದಿನಗಳೆದ ಮೇಲೆ ಒಂದು ದಿನ ಪೂರ್ತಿ ಕೂಸು ಮಾಯವಾಯಿತು. ಗುರುಬಸವಾರ್ಯರೂ ಕೂಡಾ ಮನೆಗೆ ಹಿಂದಿರುಗಿದ ಬಳಿಕ ಮಗು ಎಲ್ಲಿ ಎಂದು ಕೇಳಲಾಗಿ ತಾಯಿಯು ಗಾಬರಿಯಾಗಿ ನೀವು ಚನ್ನವೃಷಭೇಂದ್ರನನ್ನು ತೆಗೆದುಕೊಂಡು ಹೋಗಲಿಲ್ಲವೆ ? ಎಂದು ಉದ್ಗಾರವೆತ್ತಲು ಈರ್ವರೂ ದಂಪತಿಗಳು ಭಯಗ್ರಸ್ಥರಾಗಿ ಮನೆಯ ಪ್ರತಿ ಕೋಣೆಯಲ್ಲಿಯೂ ಅಂಗಳ ಬಯಲುಗಳಲ್ಲೆಲ್ಲ ಹುಡುಕಿ ಕಾಣದೇ ಇರಲು ಮತ್ತಿಷ್ಟು ಭಯದಿಂದ ಗಾಬರಿಗೊಂಡು ನೆರೆ-ಹೊರೆಯ ಮನೆಗಳಲ್ಲಿಯೂ ಆಪ್ತೆಸ್ಟರ ಮನೆಗಳಲ್ಲಿಯೂ ಕೇಳಿ ಬಂದರು. ಎಲ್ಲಿಯೂ ಬಾಲಕನು ಸಿಗದಿರಲು ತಂದೆ-ತಾಯಿಗಳಿಗೆ ಅತೀವ ದುಃಖವಾಯಿತು. ತಾಯಿ ಹಂಪಮ್ಮನವರು ಹಸುಳನ ಮುದ್ದಾದ ಬಾಲಲೀಲೆಯನ್ನು ನೆನೆಸಿ ರೋಧಿಸತೊಡಗಿದರು. ಈ ತೆರನಾಗಿ ವ್ಯಾಕುಲ ಚಿತ್ತರಾದ ಗುರುಬಸವಾರ್ಯನವರು ಮಡದಿಯನ್ನು ಸಂತೈಸುತ್ತ ತೋಂಟದಾರ್ಯನ ಗರ್ಭಗುಡಿಯನ್ನು ಹೊಕ್ಕು ಅತ್ಯಂತ ದುಖಿತರಾಗಿ ಶಿವಲಿಂಗದ ಮುಂದೆ ಎರಡೂ ಹಸ್ತಗಳನ್ನು ಮುಷ್ಟಿ ಮಾಡಿ ನೆಲವನ್ನು ವಾಮನ ಬಲಚಕ್ರವರ್ತಿಯನ್ನು ತನ್ನ ಪಾದಾಘಾತದಿಂದ ಪಾತಾಳಕ್ಕೆ ತುಳಿದಂತೆ ಈ ಶಿವಲಿಂಗವನ್ನೇ ನೆಲದಲ್ಲಿ ಇಳಿಸುವುನೋ ಏನೋ ಎಂಬಂತೆ ಭೂಮಿಗೆ ಮುಷ್ಟಿ ಪ್ರಹಾರ ಮಾಡುತ್ತಿರುವಾಗ "ಆತುರ ಪಡಬೇಡ ಗುರುಬಸವಾ ! ಅಗೋ ನಿನ್ನ ಮುದ್ದು ಕಂದ ಬಂದನು ನೋಡಲ್ಲಿ" ಎಂಬೀವಾಣಿಯನ್ನು ಕೇಳಿ ಗುರುಬಸವಾರ್ಯನು ಹೊರಳಿ ನೋಡಿದನು. ಅಕ್ರಾಳ ವಿಕ್ರಾಳವಾದ ಒಂದು ಹೆಣ್ಣುರೂಪು ಮಗುವನ್ನೆತ್ತಿಕೊಂಡು ಬರುತ್ತಿರುವುದು ಕಾಣಿಸಿತು. ಅದೇ ಶಿವಲಿಂಗವಾಣೀ ಘರ್ಷದ ನುಡಿಯಲ್ಲಿ ಮತ್ತೊಮ್ಮೆ ಕೇಳಬಂತು. ಎಲ್ಲಿಗೆ ? ಯಾತಕ್ಕಾಗಿ ಬೈದಿದ್ದಿ ? "ಗುರು ತೊಟ್ಟಿಲಲ್ಲಿ ಅಳುತ್ತಿದ್ದ ನನ್ನ ಸ್ಥಾನಕ್ಕೆ ಬೈದಿದ್ದೆ ಹಣ್ಣ

ತಿನಿಸಿದ್ದೇನಿ ನಾನೇನೂ ಮಾಡಿಲ್ಲ." ಎಂಬುದಕ್ಕೆ ಪ್ರತಿಯಾಗಿ "ದೆವ್ವನಿಂಗಿ ಇನ್ನೊಮ್ಮೆ ಮಗುವನ್ನು ಪೈಯ್ಯಕೂಡದು ನೀನು ಈ ಕಡೆ ಸುಳಿಯಲೂಬಾರದು" ಎಂಬ ಆಣತಿ ಹೊರಹೊಮ್ಮಿತು. ಹಾಗೇ ಆ ಹೆಣ್ಣುರೂಪಿನ ದೆವ್ವ ಮುಚ್ಚಿ ಬಂದು ಮಗುವನ್ನ ಗುರುಬಸವಾರ್ಯರ ಕೈಗಿತ್ತು ಮಾಯವಾಯಿತು. ಇದ್ದೆ ವನ್ನೂ ತದೇಕ ಚಿತ್ತದಿಂದ ನೋಡುತ್ತ ಕುಳಿತ ಗುರುಬಸವಾರ್ಯರು ತನ್ನ ತೀರೇಕದಿಂದ ಮಗುವನ್ನು ಎತ್ತಿಗಪಚಿಕೊಂಡು ಶಿವಲಿಂಗಕ್ಕೆ ನಮಸ್ಕರಿಸಿ ಬಂದು ಮಡದಿಯ ಕೈಯಲ್ಲಿ ಶಿಸುವನ್ನು ಕೊಡುತ್ತ ಅಲ್ಲಿ ನಡೆದ ವೃತ್ತಾಂತವನ್ನೆಲ್ಲವನ್ನು ಹೇಳಿದರು. ನಿರಾಕಾರ ರೂಪಿಯಾದ ತೋಂಟದಾರ್ಯರು ತಮ್ಮ ಶಿವದ ಮುಖಾಂತರವಾಗಿ ಗರ್ಜಿಸಿದ್ದು ದೆವ್ವನಿಂಗಿ ಬಂದು ಮಗುವನ್ನು ಕೊಟ್ಟು ಹೋದದ್ದು ಎಲ್ಲವನ್ನೂ ವಿವರಿಸಿದರು. ದೆವ್ವನಿಂಗಿ ಇರುವ ಸ್ಥಾನ ಮಠದ ಈಗಲೂ ಕೂಡಾ ಇರುವದು.

## ವಿದ್ಯಾಭ್ಯಾಸ

ಈ ಪ್ರಕಾರವಾಗಿ ಅಮೋಘವಾದ ಅದ್ವಿತೀಯವಾದ, ಅನಾರೂಢಿಯಾದ ಬಾಲಲೀಲೆಗಳನ್ನು ತೋರಿಸುತ್ತ ಸುಖಮಯವಾಗಿ ಇರುತ್ತಿರುವಾಗಲೇ ಬಾಲ ನಿಗೆ ಐದು ವರ್ಷಗಳು ತುಂಬಿದವು. ತಂದೆ-ತಾಯಿಯ ಪ್ರೀತ್ಯಾದರದ ಪೋಷಣೆಯಲ್ಲಿ ದಿನಗಳೆದದ್ದೇ ತಿಳಿಯಲಿಲ್ಲ. ಆಗಲೇ ಐದು ವರ್ಷಗಳು ತುಂಬಿ ದ್ದರಿಂದ ಗುರುಬಸವಾರ್ಯನವರು ಒಂದು ಒಳ್ಳೆ ಶುಭ-ಮುಹೂರ್ತವನ್ನು ನೋಡಿ ಶುಭಗಳಿಗೆಯಲ್ಲಿ ಚನ್ನವೃಷಭೇಂದ್ರನನ್ನು ಶಾಲೆಗೆ ಕಳಿಸಲಾಯಿತು. ಶಾಲೆ ಗುರುಗಳು ಅತೀ ಪ್ರೀತಿಯಿಂದ ಬರಮಾಡಿಕೊಂಡು ಕುಳ್ಳಿರಿಸಿ ಪಾಟಿಯ ಮೇಲೆ "ಓಂ" ಎಂಬ ಪ್ರಣವವನ್ನು ಹಾಕಿಕೊಟ್ಟು "ಮಗು ಮೊದಲು ಇದನ್ನು ಕಲಿ ಕಂಠಪಾಠ ಮಾಡಿಕೊಂಡಿರು ನಂತರ ಪ್ರಣವಾಕ್ಷರದ ಸಂಪೂರ್ಣ ಜ್ಞಾನಾಮೃತ ಕೊಡುವ ಬೀಜ ಮಂತ್ರವನ್ನು ಕಲಿಸಿ ಕೊಡುವೆ" ಎಂದೆನ್ನಲಾಗಿ ಚನ್ನವೃ ಷಭೇಂದ್ರನು ಗುರುಗಳು ಹಾಕಿಕೊಟ್ಟ ಪ್ರಣವಾಕ್ಷರವನ್ನು ಹಾಗೆ ಇಟ್ಟು ಅದ ಕೆಳಗೆ ಪ್ರಣವದಲ್ಲಿ ಹುಟ್ಟಿದ "ನಮಃ ಶಿವಾಯ" ಎಂಬ ಬೀಜವನ್ನೇ ಬರೆ ಗುರುಗಳಿಗೆ ತೋರಿಸಿ ಅದರ ನಿಜಾರ್ಥವನ್ನು ವಿವರಿಸತೊಡಗಿದನು.

ಓಂ=೫ ೧ ೨ ೩ ೪ ೫
-೪ ೦ ೭ ೩ ೧ ೦
೨೩ ನ ಮ ಶಿ ವಾ ಯ
೧) ಆದಿಯಲ್ಲಿ ಶಬ್ದನಾದವಿತ್ತು
೨) ಆ ಶಬ್ದ ದೇವರಾಗಿತ್ತು
೩) ಅದರಿಂದ ಎಲ್ಲವೂ ಉಂಟಾಯಿತು
೪) ಅದರಲ್ಲಿ ಜೀವವಿತ್ತು
೫) ಅದು ಮನುಷ್ಯರ ಬೆಳಕಾಗಿತ್ತು
ಓಂ=ಶೂರ್ಯ ಅ+ಉ+ಮ-ಅ=ವಿಶ್ವ
ಉ=ತೈಜಸ ಮ=ಪ್ರಾಜ್ಞ.

ಓಂ ಅಕ್ಷರವು ಇವು ಮೂರಿಂದ ಆಗಿದೆ. ಅಲ್ಲದೆ "ನಮಃ ಶಿವಾಯ" ಎಂಬ ಬೀಜಾಕ್ಷರವನ್ನೂ ಒಳಗೊಂಡಿದೆ ಎಂದು ಬಿಂಗಡಿಸಿ ಹೇಳಿದ್ದನ್ನು ಕಂಡು ಗುರುಗಳು ಬೆಕ್ಕಸದಿಂದ ಬೆರಗಾದರು. ಬಂದ ಮೊದಲನೆಯ ದಿನದಲ್ಲಿಯೇ ಅದು ಐದು ವರ್ಷದ ಬಾಲಕನಲ್ಲಿ ಇಷ್ಟೊಂದು ಅಮೋಘವಾದ ಜ್ಞಾನ ಕಲೆ ಇರುವದನ್ನು ಕಂಡು ಇವನು ಸಾಮಾನ್ಯ ಮಗು ಅಲ್ಲ ಪರಮಾತ್ಮನ ನಿಜಸ್ವರೂಪ ವನ್ನು ತಾಳಿ ಪರಶಿವ ಮೂರ್ತಿಯೇ ತಾನಾಗಿ ಧರೆಗಿಳಿದು ಬಂದ ಮಹಾ ಪರಂಜ್ಯೋತಿಯಾಗಿದ್ದಾನೆ ಎಂದು ಮನದಲ್ಲಿಯೇ ಸಂಕಲ್ಪಿಸಿಕೊಂಡು ಮರುದಿನ ಶಾಲೆಗೆ ಕಳಿಸಲು ಬಂದ ತಂದೆಯ ಮುಂದೆ ಇದನ್ನೆಲ್ಲ ಅರುಹಿದರು. ಓಡಿ ಬಂದ ಮಗನನ್ನು ಮುದ್ದಾಡಿ ತಾಯಿ ಹಂಪಮ್ಮನವರು ಅತ್ಯಾನಂದದಿಂದ ಮಗು ಚನ್ನವೃಷಭೇಂದ್ರನ ಕೈಕಾಲು ಮುಖಗಳನ್ನು ತೊಳೆದು ಅಂಗಾಲುಗಳನ್ನು ತನ್ನ ಸೆರಗಿನಿಂದವರೆಸಿ ಬೆಳ್ಳಿಯ ಬಟ್ಟಲಲ್ಲಿ ಅನ್ನವನ್ನು ನೀಡಿ ಉಣ್ಣೆಂದು ಮುಂದೆ ಕೂಡ್ರುತ್ತಿದ್ದಳು. ಮಗು ವೃಷಭೇಂದ್ರನು ತಾಯಿಯ ಮುಖ ತಪ್ಪಿಸಿ ಓಡಿ ಹೋಗಿ ದೇವಾಲಯಗಳಲ್ಲಿ ಅಡಗುವನು ಮಠದೊಳು ಹೊಕ್ಕು ಮಾಯವಾಗು ವನು. ಭಜನೆಯ ಮೇಳಗಳಲ್ಲಿ ಹೋಗಿ ತಾಳಹಾಕುತ್ತ ಹಾಡುತ್ತ ಸುಮ್ಮನೇ ಕುಳಿತು ಬಿಡುವನು. ಶಿವಭಜನೆ ಕೀರ್ತನೆಗಳಲ್ಲಿ ಆಸ್ತೇವಹಿಸಿ ಕೇಳುತ್ತ ಬಾಹ್ಯ ಪ್ರಪಂಚವನ್ನೇ ಮರೆತು ಶಾಲೆಗೆ ಹೋಗದೇ ಕೇಳುತ್ತ ಕುಳಿತು ಬಿಡುವನು. ಆಗಾಗ ಗೆಳೆಯರ ಆಟದ ಗುಂಪಿಗೆ ಸೇರಿ ಯಾವ ಆಟವೇ ಇರಲಿ ತಾನೇ ಹಿರಿ

ಮಣಿಯಾಗಿ ಆಟವಾಡುವನು. ತನ್ನ ಪಾರ್ಟಿಯೇ ಗೆಲ್ಲಬೇಕು. ಇಂಥ ದ್ವಿ ಷದ ಆಟವಾಡುವನು. ಹೀಗೆ ತುಂಟತನದಿಂದ ಆಡುತ್ತಿರುವ ಬಾಲಕನ್ನು ಗುರುಗಳು ಗದರಿಸಿ ಶಾಲೆಗೆ ಕರೆದೊಯ್ದು ಪ್ರೀತಿಯಿಂದ ಮೈದಡವಿ ವಸ್ ಯಿಂದ ಮಗು ನೀನು ಹೀಗೆ ಯಾವಾಗಲೂ ಆಟವಾಡುತ್ತಿರಬಾರದು. ಗು ಹಿರಿಯರಲ್ಲಿ ತಂದೆ-ತಾಯಿಗಳಲ್ಲಿ ಪ್ರೀತಿಯುಳ್ಳವನಾಗಿರಬೇಕು. ದೇವರಲ್ಲಿ ಭ ಭಕ್ತಿ ಇಟ್ಟಿರಬೇಕು. ದಿನಾಲು ಶಿವಾರ್ಚನೆ ಮಾಡುತ್ತಿರಬೇಕು. ಪಾಠದಲ್ಲಿ ಮನಸ್ಸು ತೊಡಗಿಸಿ ಏಕಾಗ್ರಚಿತ್ತದಿಂದ ಪಾಠವನ್ನು ಮನನ ಮಾಡಬೇ ಸಜ್ಜನರ ಸಂಗ ಮಾಡಬೇಕು ಎಂದು ಹೇಳಿ ಸ್ಕಾಂದ ಪುರಾಣದ ಶೈವಭಕ್ತ ಕಥೆಗಳನ್ನು ಬಸವಣ್ಣನವರ, ಶರಣಬಸವೇಶ್ವರರ, ಅರವತ್ತುಮೂರು ಮ ಪುರಾತನರ ಪ್ರಭುವಿನ ಸಿದ್ಧರಾಮೇಶ್ವರ ಶ್ರೇಷ್ಠವಾದ ಶರಣ ಸಂತತಿಗೆ ಮುಕು ಪ್ರಾಯರಾದ ಅಗ್ಗಳ ಶಿವಶರಣರ ಕಥೆಗಳನ್ನೂ ಬಿತ್ತರಿಸುತ್ತಿದ್ದರು. ಮಗು ಏಕಚಿತ್ತದಿಂದ ಆಲಿಸಿ ಅದರಂತೆ ನಡೆಯಲು ಹವಣಿಸುತ್ತಿದ್ದರು.

## ಮೊಳಕೆಯಲ್ಲಿ ಝಳಿಕೆ

ವಿದ್ಯಾಭ್ಯಾಸದಲ್ಲಿ ತೊಡಗಿದ ಚನ್ನವೃಷಭೇಂದ್ರನಿಗೆ ಹತ್ತು ವರ್ಷಗ ತುಂಬುತ್ತ ಬಂದವು. ತಂದೆ-ತಾಯಿಗಳಾದ ಹಂಪಮ್ಮ ಗುರುಬಸವಾರ್ಯನ ರಿಗೆ ಮತ್ತೆರಡು ಪುತ್ರ ಸಂತಾನವಾಯಿತು. ಈರ್ವರು ಪುತ್ರಿಯರೂ ಸಹ ಜ ತಾಳಿದರು. ಹೀಗೆ ನಾಲ್ಕು ಜನ ಮಕ್ಕಳಾಗಿ ಮನೆ ಮಕ್ಕಳ ಸಂಪತ್ತಿನಿಂದ ಧನ-ಧಾನ್ಯ ಸಿರಿಸಂಪತ್ತಿನಿಂದಲೂ, ಎತ್ತು, ಎಮ್ಮೆ, ಆಕಳು ಮೊದಲಾದ ಪ ಸಂಪತ್ತಿನಿಂದಲೂ ಮೆರಗುಗೊಟ್ಟಿತ್ತು. ಇಂತಪ್ಪ ವೈಭವೋಪೇತ ಶಿವಸಂಪ ತವಾದ ಪರಶಿವಕಳಾಪೂರಿತವಾದ ಶಿವಸಭೆಯೆಂತೊಪ್ಪುವ ಮನೆಯಲ್ಲಿ ಆಕಸ್ಮಿ ಕವಾಗಿ ಒಂದು ಘಟನೆಯು ಮಿಂಚಿ ಮಾಯವಾಯಿತು.

ಒಂದು ದಿನ ಶ್ರೀಗುರು ಚನ್ನವೃಷಭೇಂದ್ರರು ದಿನ ರೂಢಿಯಂತೆ ಮಾತೃ ಶ್ರೀಯವರಿಗೆ ತಮ್ಮ ಹಸಿವೆಯನ್ನು ತೋರ್ಪಡಿಸಿ ಕುಡಿಯಲು ಹಾಲು ಕೇಳ ಮೊದಲು ಚನ್ನವೃಷಭೇಂದ್ರರು ಒಬ್ಬರಿದ್ದಾಗ ಹಸುಗಳ ಹಾಲೆಲ್ಲ ತಾವೇ ಕು ಯುತ್ತಿದ್ದರು. ಬರುಬರುತ್ತ ತಮ್ಮಂದಿರು ತಂಗಿಯರು ದೊಡ್ಡವರಾದಂತೆ ಹ ಗಳ ಹಾಗೂ ಎಮ್ಮೆಯ ಹಾಲೂ ಸಹಿತ ಸಾಲದೇ ಹೋಯಿತು. ಇ

ಸಮಯದಲ್ಲಿ ಚನ್ನವೃಷಭೇಂದ್ರರು ಹೆಚ್ಚಾಗಿ ವಸ್ತುವಂತೆ ಹಾಲನ್ನು ಕೇಳಲಾಗಿ ತಾಯಿ ಹುಸನಮ್ಮನವರು ತಮ್ಮ ! ಮಗು ಇಂದು ಎಮ್ಮೆ ಅಲ್ಪ ಪ್ರಮಾಣದಲ್ಲಿ ಹಾಲು ಕರೆದಿದೆ ತಮ್ಮ ತಂಗಿರೆಲ್ಲ ಕುಡಿದಿದ್ದಾರೆ ಇವತ್ತೊಂದು ದಿನ ಬಿಡು ನಾಳೆ ಕುಡಿಯುವಿಯಂತೆ ಎಂದರು. ಇದನ್ನಾಲಿಸಿದ ವೃಷಭೇಂದ್ರರು ಏನವ್ವಾ ! ! ಎಂದು ಕೂಗಿ ಕೇಳಿದರು "ಎಮ್ಮೆ ಹಿಂಡಿಲ್ಲ" ಎಂಬ ಧ್ವನಿ ಪ್ರತಿಯಾಗಿ ಅಡು ಗೆಯ ಕೋಣೆಯಿಂದಲೇ ಹೊರ ಬಂದು ಗುರುಗಳ ಕಿವಿಗೆ ಮುಟ್ಟಿತು. ಚನ್ನ ವೃಷಭೇಂದ್ರರು ಖೇದಗೊಂಡಂತಾಗಿ ಬಾಯಿಗೆ ಬಂದದ್ದನ್ನೇ ತಮ್ಮ ಅಮೃತ ವಾಣಿಯಿಂದ ಹೊರಗೆಡಹಿದರು. ಇದು ಸತ್ಯವಾಗಿಯೇ ಪರಿಣಮಿಸಿತು "ಎಮ್ಮೆ ಹಿಂಡದೇ ಹೋದರೆ ಮುಂದೆ ಹಿಂಡದಂತೆಯೇ ಆಗಬಿಡಲಿ" ಎಂದು ನುಡಿದರಂತೆ ಅದೇ ಘಳಿಗೆಯಲ್ಲಿ ಹೊರಗೆ ತಿರುಗಾಡಲು ಹೋದ ಎಮ್ಮೆ ಮರಳಿ ಮನೆಗೆ ಬಂದಿತು. ದೃಢಕಾಯ ಹೊಂದಿದ ಎಳೆ ವಯಸ್ಸಿನ ಭವ್ಯಾಕಾರ ಹೊಂದಿದ ನಿರೋಗಿಯಾದ ಎಮ್ಮೆ ತಲಬಾಗಿಲ ದಾಟಿ ವಳಗೆ ಬರದೇ ಮುಂಗಾಲು ಒಳ ಭಾಗದಲ್ಲಿಯೂ ಹಿಂಗಾಲು ಹೊರಬಾಗಿಲಲ್ಲಿಯೂ ಇಟ್ಟು ನಿಂತಲ್ಲಿಯೇ ಒಮ್ಮೆ ವಿಕಾರವಾಗಿ ಅರಚಿ ಕೆಳಗೆ ಬಿದ್ದು ಪ್ರಾಣವನ್ನೇ ಬಿಟ್ಟಿತು.

ಬರುಬರುತ್ತ ಬಾಲಕನಲ್ಲಿ ವಿಚಿತ್ರವಾದ ಮನೋ ವೈಚಿತ್ರ್ಯಗಳು ಕಾಣ ಬರಹತ್ತಿದವು. ಒಂದೊಂದು ದಿನ ಶಾಲೆಗೆ ಹೋಗದೇ ಗುಡಿ ಗುಂಡಾರಗಳಲ್ಲಿ ಅಡಗಿ ಕುಳಿತು ಬಿಡುತ್ತಿದ್ದನು. ಒಂದೊಂದು ದಿನ ಎಷ್ಟೋ ಹೊತ್ತಿನ ವರೆಗೆ ಧ್ಯಾನಸ್ಥನಾಗಿ ಗುರು ತೋಂಟದಾರ್ಯನ ಗುಡಿಯಲ್ಲಿ ಲಿಂಗದ ಮುಂದೆ ಕುಳಿತು ಬಾಹ್ಯ ಪ್ರಪಂಚದ ಅರಿವನ್ನು ಮರೆತು ಅಂತರ್ಮುಖನಾಗಿ ಮೈಮರೆತು ಕುಳಿತಿ ರುವುದನ್ನು ತಂದೆ ಗುರುಬಸವಾರ್ಯರು ಕಂಡು ಗದರಿಸಿ ಶಾಲೆಗೆ ಕಳಿಸುತ್ತಿದ್ದರು. ವಿದ್ಯಾಭ್ಯಾಸದ ಕಡೆಯ ಲಕ್ಷವನ್ನು ಕಡಿಮೆಮಾಡಿ ಊರಲ್ಲಿಯ ದೇವಾಲಯ ಗಳಲ್ಲಿ ಮಠ ಮಂದಿರಗಳಲ್ಲಿ ತಂದೆ ತಾಯಿಯ ಕಣ್ಣು ತಪ್ಪಿಸಿ ಅಡಗಿ ಕುಳಿತು ಶಿವಸ್ತುತಿಗೈಯ್ಯುತ್ತ ಮನೆ ಊಟ, ಪಾಠಗಳನ್ನು ಮರೆತು ಎಷ್ಟೋ ಹೊತ್ತಿನ ವರೆಗೆ ಕುಳಿತು ಬಿಡುತ್ತಿದ್ದರು. ತಂದೆ ಗುರುಬಸವಾರ್ಯನವರು ಹುಡುಕಿ ಬೇಸತ್ತು ಕೊನೆಗೆ ಎಷ್ಟೋ ದೂರದ ಒಂದು ಗುಡಿಯಲ್ಲಿ ಅವಿತುಕೊಂಡಿರುವ ಮಗನನ್ನು ಬೆದರಿಸಿ ಕರೆತಂದು ಊಟ ಮಾಡಿಸುವುದೇ ಅವರ ಕೆಲಸವಾಯಿತು. ಚನ್ನವೃಷಭೇಂದ್ರರ ಶಿವಧ್ಯಾನಕ್ಕೆ ಈ ತೆರನಾದ ಅಡ್ಡಿ ಆತಂಕಗಳು ಬರುವುದನ್ನು

ಕಂಡು ರಾತ್ರಿ ವೇಳೆಯಲ್ಲಿ ಎಲ್ಲರೂ ಊಟಮಾಡಿ ಮಲಗಿದ ಮೇಲೆ ಕೈಯಲ್ಲಿ ಕಂದೀಲು ಹಿಡಿದು ಊರ ಮುಂದಿರುವ ಬೈಲಲ್ಲಿಯ ಪತ್ರಿಗಿಡಕ್ಕೆ ಹೋಗಿ ಪತ್ರಿಗಳನ್ನು ತಂದು ರಾತ್ರಿ ಎಷ್ಟೋ ಹೊತ್ತಿನವರೆಗೆ ಲಿಂಗಪೂಜಾನಿಷ್ಟರಾಗಿರುತ್ತಿದ್ದರು. ಒಂದೊಂದು ದಿನ ರಾತ್ರಿವಿಡೀ ಹಾಗೇ ಲಿಂಗಧ್ಯಾನದಲ್ಲಿ ಕುಳಿತ ಮಗನನ್ನು ಕಂಡ ತಾಯಿ ಕಸಿವಿಸಿಗೊಳ್ಳುತ್ತ ರಾತ್ರಿಯಲ್ಲಿ ನಿದ್ರೆಯಲ್ಲಿಯೇ ಹೀಗೇಕೆ ಮಾಡುತ್ತಿರುವಿ ಕಂದಾ ! ಎಂದು ಹಲುಬಿ ಮಗನಿಗೆ ತಿಳಿ ಹೇಳುತ್ತಿದ್ದರು. ಮುಂಜಾನೆ ಗುರು ಮಠದ ಕಸಗುಡಿಸಲು ಬಂದಾಗಲೇ ಇದು ತಾಯಿಗೆ ಗೊತ್ತಾಗುತ್ತಿತ್ತು. ಮಗನ ಈ ಸರ್ವಶ್ರೇಷ್ಠ ಲಿಂಗಭಕ್ತಿ ಜ್ಞಾನ ಶಕ್ತಿಯನ್ನು ಕಂಡು ಮಗನ ಅಪೂರ್ವವಾದ ಕಳಾಪೂರಿತ ಮೊಗವನ್ನು ಕಂಡು ಸಂತೋಷ ಪಡುತ್ತಿದ್ದರು. ಆದರೆ ಅದರ ಹಿಂದೆಯೇ ಮಾತೃಹೃದಯದ ಮಮತೆಯಿಂದ ವಾತ್ಸಲ್ಯತೆಯನ್ನು ಹೊಂದಿ ಅಷ್ಟೇ ದುಃಖ ಪಡುತ್ತಿದ್ದರು. ಹಗಲಿರುಳೂ ನಿದ್ರಾಹಾರಗಳನ್ನು ತೊರೆದು ಈ ತೆರನಾಗಿ ಶಿವಧ್ಯಾನಾ ಪರನಾದ ಮಗನ ಕಷ್ಟವನ್ನು ಅರಿತು ದುಃಖಕ್ಕೀಡಾಗಿ ಒಳಗೊಳಗೇ ಕೊರಗುತ್ತಿದ್ದರು. ತಂದೆಯವರಂತೂ ಇದು ಪರಿಹಾರವನ್ನು ಕಂಡು ಹಿಡಿಯುವದರಲ್ಲಿಯೇ ದಿನಗಳೆಯುತ್ತಿದ್ದರು. ತಮ್ಮ ಬಂಧು ಬಾಂಧವರಲ್ಲಿ, ಮಿತ್ರರಲ್ಲಿ, ಗುರುಹಿರಿಯರಲ್ಲಿ ಸಲಹೆ ಕೇಳುತ್ತಿದ್ದರು. ಮಗನ ನಿರಂತರವಾದ ಪರಶಿವಧ್ಯಾನ ಪರತೆಯನ್ನು ಹೋಗಲಾಡಿಸಿ ತಮ್ಮಂತೆ ಲಿಂಗಪೂಜಾನಿಷ್ಠನಾಗಿ ಪ್ರಪಂಚದ ಸುಳುವಿನಲ್ಲಿ ಸಿಲುಕಿ ಪ್ರಪಂಚಿಕನಾಗಬೇಕು ಎಂದು ಹಂಬಲಿಸುತ್ತಿದ್ದರು.

## " ಬ್ರಹ್ಮಸತ್ಯಂ ಜಗನ್ಮಿಥ್ಯಾ "

**"ಸರ್ವಂ ಬ್ರಹ್ಮಮಯಂ"** ಎಂಬ ತತ್ವದ ಮೇಲೆ ಹೇಯ ಸಂಸಾರಿಕ ಗುಣಗಳೆಲ್ಲವನ್ನೂ ತ್ಯಾಜ್ಯ ಮಾಡಿ ಅಶನ ವ್ಯಸನವನ್ನು ತೊರೆದು " ಸ್ವಯಂ ಬ್ರಹ್ಮನಾಗಿ " ಬ್ರಹ್ಮಾನಂದದಲ್ಲಿ ಕಾಲ ಕಳೆಯುತ್ತಿರುವ ಮಗನನ್ನು ತಮ್ಮೆಡೆಗೆ ಎಳೆದುಕೊಳ್ಳಲು ಪ್ರಯತ್ನಿಸುತ್ತಿದ್ದರು.

ರಾತ್ರಿಯಲ್ಲಿ ದೇವಪ್ಪೊಡೆಯನ ಬಿಲ್ವಗಳ ತರಲು ಹೋಗುವನು ಎಂಬ ವದಂತಿ ಊರಲ್ಲೆಲ್ಲಾ ಹಬ್ಬಿತು. ಇಡೀ ರಾತ್ರಿ ಪೂಜೆ ಮಾಡುವನೆಂಬ ಸುದ್ದಿಯೂ ಅಷ್ಟೇ ಪ್ರಭಲವಾಗಿ ಊರಲ್ಲಿ ಪಸರಿಸಿತು. ಒಂದುದಿನ ಊರಲ್ಲಿಯ ಪ್ರಮುಖ

ವರ್ಗದ ಕೆಲವರು ಚನ್ನ ವೃಷಭೇಂದ್ರರನ್ನು ಪರೀಕ್ಷಿಸಿಯೇ ತೀರಬೇಕೆಂಬ ಹಟ ದಿಂದ ಆರೆಂಟು ಜನ ಗುಂಪುಗೂಡಿ ಹೊರಟರು. ಸ್ವಾಮಿಗಳನ್ನು ಹಿಡಿತಂದು "ದೇವವಶ ಮಾಡಿಕೊಳ್ಳುತ್ತಿದ್ದರೆ ದೇವರನ್ನು ತೋರಿಸು ಇಲ್ಲವೆ ಭೂತವಶ ಮಾಡಿಕೊಳ್ಳುತ್ತಿದ್ದರೆ ಭೂತವನ್ನೇ ತೋರಿಸು," ಎಂದು ಕೇಳುವದಾಗಿ ನಿಶ್ಚಯಿಸಿ ಕೊಂಡು, ಹೊರಬಿದ್ದರು. ಚನ್ನವೃಷಭೇಂದ್ರರು ಬಿಲ್ವದಳ ಮುಡಿದು ಹಿಂದಿರು ಗುವ ವೇಳೆಗಾಗಲೇ ಸರಿಯಾಗಿ ಅವರೆಲ್ಲ ಅಲ್ಲಿಗೆ ತಲುಪಿದರು. ಮೊದಲೇ ಇತ್ಯಾರ್ಥ ಮಾಡಿಕೊಂಡಂತೆ ಅವರೆಲ್ಲ ಒಟ್ಟಿಗೇ ಸ್ವಾಮಿಗಳ ಮೇಲೆ ಬಿದ್ದರು. ಆದರೆ ಅವರೆಲ್ಲರಿಗೆ ಅಲ್ಲಿ ಸಿಕ್ಕಿದ್ದೇನು ? ಕೇವಲ ಧೂಳು ಮಣ್ಣು, ಅಂದರೆ ಅವರೆಲ್ಲ ಕೈತಪ್ಪಿ ನೆಲಕ್ಕೆ ಬಿದ್ದಿದ್ದರು. ಸ್ವಾಮಿಗಳು ಕಂದೀಲ ಸಮೇತ ಅವರಿ ಗಿಂತ ಹತ್ತು ಗಜ ದೂರದಲ್ಲಿ ನಗುತ್ತ ನಿಂತಿದ್ದರು. ಅದನ್ನು ಕಂಡು ಅಪಮಾನ ಗೊಂಡಂತಾಗಿ ಬಿದ್ದ ಪೆಟ್ಟನ್ನೂ ಹೊಂದಿ ಕೂಡಲೇ ಎದ್ದು ಅವರತ್ತ ಧಾವಿಸಿ ಸುತ್ತುಗಟ್ಟಿ ಒಮ್ಮೆಲೇ ಗುರುಗಳ ಮೇಲೆರಗಿದರು. ಆಗಲೂ ಅವರಿಗೆ ಮೊದಲಿನ ಅನುಭವವೇ ಆಯಿತು. ಅವರು ತಮ್ಮಿಂದ ಹತ್ತು ಗಜದಳತೆ ಮೊದಲಿನ ಸ್ಥಾನ ದಲ್ಲಿಯೇ ನಿಂತು, ನಗುತ್ತಿರುವುದನ್ನು ಕಂಡು ಇವರುಗಳ ಮೈಯಲ್ಲಿ ಉರಿದಂತಾ ಯಿತು. ಸಿಟ್ಟಿಗೆದ್ದ ಜನ ಕೂಡಲೇ ರಭಸದಿಂದೆದ್ದು ಹಿಡಿಯಲು ಮುನ್ನುಗ್ಗಿ ದರು. ಕೈಯಲ್ಲಿಯೇ ಸಿಕ್ಕಂತಾಗಿ ಹಿಡಿಯಲು ಹವಣಿಸಿದಾಗ ಅವರು ಕೈಗೆ ಸಿಕ್ಕದೆ ಇದ್ದಾಗ ಆಯತಪ್ಪಿ ಬಿದ್ದು ಬಿಡುತ್ತಿದ್ದರು. ಈ ರೀತಿಯಾಗಿ 8-10 ಸಲ ಪರಿದಾಡಿದಾಗ "ಬೇಟೆಸಿಗದೇ ಪೆಟ್ಟುತಿಂದ ನಾಯಿಯಂತಾಗಿ" ಬಂದದಾರಿಗೆ ಸುಂಕವಿಲ್ಲೆಂದು ಅವರೆಲ್ಲ ಸುಮ್ಮನೇ ತಲೆ ತಗ್ಗಿಸಿಕೊಂಡು ಹೊರಟು ಹೋದರು.

ಬರುಬರುತ್ತಾ ಶಾಲೆಗೆ ಹೋಗುವುದನ್ನು ಮರೆತರು. ಶಿವಧ್ಯಾನಸ್ಥರಾಗಿ, ಲಿಂಗಪೂಜಾನಿಷ್ಠರಾಗಿ, ಲೌಕಿಕವನ್ನೇ ಮರೆತು ದಿನ ರೂಢಾ ಕಾರ್ಯಕ್ರಮ ಗಳನ್ನು ಮರೆತು ಗುರು, ಲಿಂಗ ಜಂಗಮರಲ್ಲಿ ಮನವನ್ನು ಅಡಗಿಸಿ ಧ್ಯಾನಸ್ಥರಾಗಿ ಕುಳಿತು ಬಿಡುತ್ತಿದ್ದರು. ಇದನ್ನು ಕಂಡು ತಂದೆ ತಾಯಿಗಳು ಕಳವಳಗೊಂಡು ಮನದಲ್ಲಿಯೇ ಮರುಗಿ ಮಮತೆಯಿಂದ ಮೈದಡವಿ ತಿಳಿ ಹೇಳುತ್ತಿದ್ದರು. ಒಮ್ಮೊಮ್ಮೆ ಗದರಿಸಿ ಹೊಡೆದೂ ಬಡಿದೂ ಮಾಡುತ್ತಿದ್ದರು. ಎಷ್ಟೇ ಪ್ರಯತ್ನ ಪಟ್ಟರೂ ಅವರು ಹೇಯವಾದ ಮಾಯಾ ಪ್ರಪಂಚಕ್ಕೆ ಬರದಿರಲು ಒಂದು ದಿನ ತಂದೆ ಗುರುಬಸವಾರ್ಯರು ಸಿಟ್ಟಿನಿಂದ ಬೈದು ಮನೆಬಿಟ್ಟು ಹೋಗೆನಲು ಖೇದ

ಗೊಂಡ ಚನ್ನವೃಷಭೇಂದ್ರರು ಗುರು ಮಠದಲ್ಲಿ ಬಂದು ಕೋಠಡಿಯ ಬಾಗಿಲನ್ನು ಹಾಕಿಕೊಂಡು ಪದ್ಮಾಸನದಲ್ಲಿ ಕುಳಿತು ಶಿವಲಿಂಗದಲ್ಲಿ ತಲ್ಲೀನರಾಗಿ ಕುಳಿತುಬಿಟ್ಟರು. ಮಗನಿಗೆ ತಿಳಿ ಹೇಳಿ ಹೇಳಿ ಬೇಸತ್ತು ರೋಸಿಗೊಂಡಿದ್ದ ತಂದೆ ತಾಯಿಗಳು ಅವನ ವರ್ತನೆಗೆ ಖತಿಗೊಂಡು ಎಂಟು ದಿನಗಳ ವರೆಗೆ ಮಾತನಾಡಿಸುವುದನ್ನೇ ಬಿಟ್ಟು ಬಿಟ್ಟರು. ತಾಯಿಯ ಕರುಳು ಒಳಒಳಗೆ ಮಿಡುಕಿ ಕೊರೆಯುತ್ತಿತ್ತು. ಮಗನ ಮಮತೆಯ ಮಾತುಗಳನ್ನು ನೆನೆನೆನೆದು ಕಣ್ಣೀರಿಟ್ಟಳು. ಪುತ್ರ ಮೋಹದ ಮಾತೃ ಹೃದಯ ತಡೆಯಲಾರದೇ ಚೀರಿ ಹಲುಬಿದರು. ಕೊನೆಗೆ ಪತಿಯನ್ನು ಕಾಡಿ ಬೇಡಿ ಮಗನನ್ನು ಎಬ್ಬಿಸುವಂತೆ ಒಪ್ಪಿಸಿದರು. ತಂದೆ ತಾಯಿಗಳಿಬ್ಬರೂ ಹೋಗಿ ಬಾಗಿಲನ್ನು ತಳ್ಳಿದರು. ಆದರೆ ಭದ್ರವಾಗಿ ಮುಚ್ಚಿಕೊಂಡ ಬಾಗಿಲು ತೆಗೆಯಲೇ ಇಲ್ಲ ತಮ್ಮ ಶಕ್ತಿ ಮೀರಿ ಬಾಗಿಲನ್ನು ಬಡಿದರು. ಹಿಂದಕ್ಕೆ ತಳ್ಳಿದರು. ಯಾವದಕ್ಕೂ ಅದು ತಗೆಯದೆ ಇದ್ದಾಗ ವ್ಯಾಕುಲ ಚಿತ್ತರಾಗಿ ಕೊನೆಗೆ ನಾಲ್ಕಾರು ಜನರೊಂದಿಗೆ ಕೂಡಿ ಹಾರಿಗಳಿಂದ ಸೊನ್ನೆ ಹಾಕಿ ಬಾಗಿಲನ್ನು ಮುರಿದು ತೆಗೆದರು. ಎಂಟು ದಿನಗಳ ವರೆಗೆ ಮಗನ ಮುದ್ದು ಮುಖವ ಕಾಣದೇ ಇದ್ದ ಪಿತೃ ಪ್ರೇಮ ಒಮ್ಮೆಲೇ ಉಕ್ಕಿ ದುಮ್ಮಿಕ್ಕಿ ಒಳ ಹೊಕ್ಕಾಗ ಅಲ್ಲಿ ಕಂಡದ್ದೇನು ? ಆ ದೃಶ್ಯ ಅಘಟನಾ ಘಟಿತ ಅಗಮ್ಯ, ಅಮೋಘ ಅಗೋಚರವಾಗಿತ್ತು. ಪದ್ಮಾಸನಾ ರೂಢರಾಗಿ ಇಷ್ಟಲಿಂಗದಲ್ಲಿ ಸಾಮರಸ್ಯವನ್ನು ಹೊಂದಿ ನೆಲದಿಂದ ಮೂರು ಮೊಳದ ಅಂತರದ ಎತ್ತರದಲ್ಲಿ ಕುಳಿತಿದ್ದುದನ್ನು ಕಂಡು ಬೆಕ್ಕಸ ಬೆರಗಾಗಿ ಕಣ್ಣಿನಿಂದ ನೋಡಲಾರದೇ ಹೊರಗೋಡಿ ಬಂದರು. ನಂತರ ಒಂದರಗಳಿಗೆಯಲ್ಲಿಯೇ ಚನ್ನವೃಷಭೇಂದ್ರರು ನಡೆದು ಹೊರಗೆ ಬರುತ್ತಿರುವವನ್ನು ಕಂಡು ಎಲ್ಲರೂ ಆನಂದ ಪರವಶರಾದರು.

ಈ ತೆರನಾದ ಅಮೋಘ ಲೀಲೆಗಳನ್ನು ತೋರ್ಪಡಿಸುತ್ತ ಬೆಳೆಯುತ್ತಿರುವ ಚನ್ನವೃಷಭೇಂದ್ರರ ಪುಣ್ಯ ಪುರುಷರಿಗೆ ಇಪ್ಪತ್ತೈದು ವರ್ಷಗಳು ತುಂಬುತ್ತ ಬಂದವು. ಇವರ ವರ್ತನೆಗೆ ಹೆದರಿದ ತಂದೆ ತಾಯಿಗಳು ಅವನ ಇಷ್ಟ ಬಂದಂತೆ ಇರಲಿ ಎಂದು ಸುಮ್ಮನಾದರು. ಗುರುಗಳು ಯಾವ ಗೊಡವೆಗೂ ಬರದೇ ಯಾವ ಹೆಚ್ಚಿನ ವಿಷಯವನ್ನು ಚರ್ಚಿಸದೇ ಮತ್ತಾವ ಗೋಜಿಗೂ ಹೋಗದೇ ಸುಮ್ಮನಿದ್ದು ಬಿಟ್ಟರು. ಇತ್ತ ಗುರುಗಳು ಶಾಲೆಯನ್ನು ಬಿಟ್ಟು ಶಿವಪೂಜಾ ವೃತ್ತಿಯಲ್ಲಿಯೇ ಕಾಲ ಕಳೆಯುತ್ತಿದ್ದರು. ಮುಂಜಾವು ಬೆಳಗಿನ ಜಾವದಿಂದ ಸಂಜೆ

ಮೂರನೇ ಪ್ರಹರದ ವರೆಗೆ ಶಿವಪೂಜೆಯಲ್ಲಿ ತಲ್ಲೀನರಾಗಿರುತ್ತಿದ್ದರು. ನಸುಕಿನಲ್ಲಿ ಸಂಧ್ಯಾವಂದನೆಗಳನ್ನು ಮುಗಿಸಿಕೊಂಡು ಊರ ಮುಂದಿರುವ ತೋಟದ ಭಾವಿಯಲ್ಲಿ ಸ್ನಾನ ಮಾಡಿಕೊಂಡು ಬರುವಾಗ ಮಾರ್ಗ ಮಧ್ಯದಲ್ಲಿಯ ಬಿಲ್ವದಳಗಳನ್ನು ಪುಷ್ಪಗಳನ್ನೂ ತೆಗೆದುಕೊಂಡು ಬಂದು ಬೆಳಗಿನ ಪೂಜೆ ಮುಗಿಸಿಕೊಂಡು ಗುರು ತೋಂಟದಾರ್ಯರ ಗುಡಿಯ ದರ್ಶನಭಾಗ್ಯ ಪಡೆದು ನಂತರ ಒಂದು ತಾಸೆರಡು ತಾಸು ಬಂದು ಹೋದವರೊಡನೆಯೂ ಬಂಧು ವರ್ಗದವರೊಡನೆಯೂ ಮಾತಾಡುತ್ತ ಕುಳಿತಿರುತ್ತಿದ್ದರು. ಬಳಿಕ ಮದ್ಯಾಹ್ನ ಹನ್ನೆರಡು ಗಂಟೆಗೆ ಮತ್ತೆ ಸ್ನಾನ ಮಾಡಿ ಬಂದು ಶಿವಪೂಜೆಗೆ ಕುಳಿತುಕೊಳ್ಳುತ್ತಿದ್ದರು. ಎರಡು ತಾಸಿನ ಪೂಜೆ ಮುಗಿದ ಬಳಿಕ ಊಟಮಾಡಿ ವಿಶ್ರಾಂತಿ ಪಡೆಯುತ್ತಿದ್ದರು. ತದನಂತರ ಸಾಯಂಕಾಲದ ವಿಹಾರದೊಂದಿಗೆ ಪುನಃ ಅದೇ ಭಾವಿಯಲ್ಲಿ ಜಳಕ ತೀರಿಸಿಕೊಂಡು ಪತ್ರಿ ಪುಷ್ಪಗಳೊಡನೆ ಬಂದು ಸಂಜೆಯ ಪೂಜೆಗೆ ಕುಳಿತರೆಂದರೆ ಇದಕ್ಕೆ ಗೊತ್ತುಗುರಿಗಳೇ ಇರುತ್ತಿದ್ದಿಲ್ಲ. ತಾಯಿ ಹಂಪಮ್ಮನವರು ಯಾವಾಗಲೋ ಸದ್ದಿಲ್ಲದೇ ಬಂದು ಹಾಲಿನ ತಂಬಿಗೆಯನ್ನು ಮುಂದಿಟ್ಟು ಹೋಗಿ ಬಿಡುತ್ತಿದ್ದರು. ಸ್ವಾಮಿಗಳು ಶಿವಾರ್ಚನೆ ಮುಗಿದ ಬಳಿಕವೆ ಹಾಲನ್ನು ಸ್ವೀಕರಿಸಿ ಮಲಗುತ್ತಿದ್ದರು.

## ಅನುಷ್ಠಾನ

ಗುರು ಮಠದಲ್ಲಿ ಒಬ್ಬರು ಸಿಂಹಾಸನಾರೂಢರಾಗಿ ಕುಳಿತು ಶಿವಧ್ಯಾನದಲ್ಲಿ ತಲ್ಲೀನರಾಗಿ ಉಗ್ರ ತಪೋಸಿಧಿಗಳಾಗಿ ಕುಳಿತಾಗ್ಗೆ ತಂದೆ ತಾಯಿಗಳ ಕರುಣೆಯ ಬಳ್ಳಿ ಅಡ್ಡವಾಗಿ ಬಂದು ಅವರ ನಿಷ್ಠಾವಂತ ಶ್ರೇಷ್ಠ ಶಿವೋಪಾಸನೆ ಭಂಗವಾಯಿತು. ಅಂದಿನಿಂದ ಅವರ ಮನಸ್ಸಿಗೆ ಸಮಾಧಾನವಿಲ್ಲವಾಯಿತು. ನಿಗಮನಿಗ್ಗೋಚರವಾದ ನಿರಂತರ ಧ್ಯಾನಸ್ಥರಾಗಿ ಅನುಷ್ಠಾನವಂಗೈಯ್ಯಬೇಕೆಂದು ಸುಭದ್ರವಾಗಿರುವ ಸುರಕ್ಷಿತ ಸ್ಥಲಾವಲೋಕನ ಮಾಡಬೇಕೆಂದು ಅನುದಿನ ವಿಚಾರಪರರಾಗಿ ಕಾಲಾಪಹರಣ ಮಾಡತೊಡಗಿದರು. ಇದೇ ಪ್ರಕಾರವಾಗಿ ಕೆಲವು ದಿನಗಳೆದ ಬಳಿಕ ಒಂದುದಿನ ಅನುಷ್ಠಾನಕ್ಕೋಸ್ಕರ ಯಾರಿಗೂ ಹೇಳದೇ ಬೆಳಗಿನ ಜಾವದಲ್ಲಿಯೇ ಸ್ವಗೃಹತ್ಯಾಗ ಮಾಡಿದರು.

ಮನೆಯಿಂದ ಹೊರಟ ಚನ್ನವೃಷಭೇಂದ್ರ ಸ್ವಾಮಿಗಳು ಮಾಗಣಗೇರಿಯಿಂದ ನೇರವಾಗಿ ಉತ್ತರ ದಿಕ್ಕಿನಲ್ಲಿರುವ ಬಿಜಾಪೂರ ಜಿಲ್ಲೆಯ ಸಿಂದಗಿ ತಾಲೂಕಾದ ಕಡೆಹಳ್ಳಿ ಎನಿಸಿದ ಖೈನೂರ ಎಂಬ ಗ್ರಾಮದ ಮುಂದಿರುವ ಉಪಾಸಪ್ಪನ ಗುಡಿಯ ಗವಿಯಲ್ಲಿ ಹರಿಯುವ ಝರಿಯ ತಂಪನೆಯ ನೀರು ಕುಡಿದು ಮಾವಿನ ಗಿಡದ ಬುಡದಲ್ಲಿ ಕುಳಿತ ಗುರುಗಳು ಎದುರಿಗಿರುವ ಊರನ್ನು ಸಹಿತ ಸುತ್ತ ಮುತ್ತಲಿರುವ ಸ್ಥಳಾವಲೋಕನ ಮಾಡತೊಡಗಿದರು. ಅಣಿಯ ಮಧ್ಯಭಾಗದಲ್ಲಿ ಕುಳಿತ ಸ್ವಾಮಿಗಳಿಗೆ ಖೈನೂರಗ್ರಾಮವು ಒಂದು ಮನೋಹರವಾದ ಶಿವನಗರಮನೆಯಂತೆ ಕಂಡು ಬಂದಿತು. ಗಂಗೆಯ ತಟದಲ್ಲಿರುವ ವಾರಾಣಸಿಯ ವಿಶಾಲವಾದ ಪಾವಟಣಿಗೆಗಳೋ ಏನೋ ಎಂಬಂತೆ ಅಲ್ಲಿಯ ಮನೆಗಳ ಸಾಲಗಳು ಹಬ್ಬುತ್ತ ಹೋಗಿದ್ದವು. ಸುಣ್ಣ ಬಣ್ಣ ಬಳಿದ ಮೇಲುಪ್ಪರಿಗೆಗಳು ಹಿಮಬೆಟ್ಟದಂತೆ ಕಂಗೊಳಿಸುತ್ತಿದ್ದವು. ಅಲ್ಲಲ್ಲಿ ಹಂಚುಗಳಿಂದ ಎದ್ದು ಕಾಣುವ ಮುಹಡಿಯ ಮನೆಗಳು ಆ ಹಿಮಪರ್ವತಕ್ಕೆ ಹೊಂಗಳಸಗಳನ್ನಿಟ್ಟಂತಾಗಿತ್ತು. ಪುರದ್ವಾರದಲ್ಲಿ ಬೃಹದಾಕಾರವಾದ ಆಂಜನೇಯ ದೇವಾಲಯ ಎಡಭಾಗದಲ್ಲಿ ಅಮೋಗಸಿದ್ಧನ ಶಿವಾಲಯದ ಗೋಪುರ ನಾಮೇಲೆಂದು ಹೇಳುವುದೋ ಏನೋ ಎಂಬಂತೆ ಆಕಾಶದೆತ್ತರ ಬೆಳೆದು ನಿಂತಿದೆ. ಪುರಮಧ್ಯದಲ್ಲಿ ವಿಶಾಲವಾದ ಪ್ರಾಂಗಣವುಳ್ಳ ಸುತ್ತಲೂ ತಂಗುವ ಚಂದ್ರಶಾಲೆಗಳಿಂದಲೂ, ಪ್ರಶಾಂತವಾಗಿ ಪ್ರಶಸ್ತವಾದ ಪ್ರಾಂಗಣದಲ್ಲಿ ಹುಣಸೆ, ಮಾವು ಬೇವಿನ ಮರಗಳು ನಾಲ್ಕು ದಿಕ್ಕುಗಳನ್ನು ತಮ್ಮ ಕೈಮಾರಿನಿಂದ ಆಳೆಯುವವೋ ಏನೋ ಎಂಬಂತೆ ನಾಲ್ಕು ದಿಕ್ಕಿಗೆ ಚಾಚಿ ಹಬ್ಬಿಕೊಂಡು ನಿಂತಿವೆ. ಇವುಗಳಿಂದಾಗಿ ರಾಜಂಗಳ ಸೂರ್ಯಕಿರಣಗಳನ್ನೇ ಕಂಡಿಲ್ಲ ಇಂತೊಪ್ಪುವ ತಂಪಾದ ಪ್ರಾಂಗಣದ ಮಧ್ಯಭಾಗದಲ್ಲಿ ದೇವಶಿಲ್ಪಿಯಲ್ಲಿ ಮನ ಮನೋಹರವಾಗಿ ಕೆತ್ತಿದ ಶಿಲ್ಪ ಕಲಾಕೃತಿಗಳಿಂದ ಕೂಡಿದ ಭವ್ಯವಾದ ಶಿವಾಲಯವು ಗೊಲ್ಲಾಳೇಶ್ವರನಿಗೆ ನಿವಾಸ ಸ್ಥಾನವಾಗಿ ಬೆಳಗುತ್ತಿದೆ. ಈ ಪ್ರಕಾರವಾಗಿ ಕಣ್ಮನಗಳಿಗಿಂಪಾಗಿ ಕಾಣುತ್ತಿರುವ ಗ್ರಾಮವನ್ನು ಕಂಡು ಆನಂದಭರಿತರಾಗಿ ಅಣಿ ಹಾಗೂ ಊರನ್ನು ಮುಟ್ಟಿ ಹರಿಯುತ್ತಿರುವ ಸತಲಜ ನದಿಗೂ ಮೀರಿ ರಭಸದಿಂದ ಹರಿದ ಶರಣ ಸಂತತಿಗೆ ವಾಸಸ್ಥಾನವೆನಿಸಿದ ಬಂಗಾರ ಹಳ್ಳವನ್ನು ಕೆಲಹೊತ್ತು ವೀಕ್ಷಿಸಿದರು. ಇದೇ ಹಳ್ಳಕ್ಕೆ ಊರ ಮೇಲ್ಭಾಗದಲ್ಲಿ

ವಗಣಿ ಹಳ್ಳ ಬಂದು ಸೇರಿ ಕೂಡಲ ಸಂಗಮವಾಗಿದೆ. ಎರಡೂ ಹಳ್ಳಗಳ ಎಡ ಬಲ ಭಂಜಗಳು ಕದಳಿಯ ಬನದಿಂದಲೂ ಗರಿಹಿರಿದ ಕಬ್ಬಿನ ತೋಟಗಳಿಂದಲೂ ಕಿಕ್ಕಿರಿದು ತುಂಬಿದೆ. ಹಚ್ಚನೆಯ ಹಸಿರು ಸೀರೆಯನುಟ್ಟು ಬಾಳೆ ಬಾಳೆಲೆಯ ಕುಪ್ಪಸ ಬಿಗಿದು ಜೋಗರಿ ಕುಚಗಳ ಬಾಲೆ ಬಿಳಿ ಮುತ್ತಿನಿಂದ ಹೆಣೆದ ಪಚ್ಚೆ ತುರಾಯುವನಿಟ್ಟಂತೆ ಕಬ್ಬಿನ ಗರಿಗಳು ಹೊಯ್ದಾಡುತ್ತಿವೆ. ಎತ್ತರವಾದ ತೆಂಗು ಸೇವದಾರು ಮರಗಳ ಮೇಲೆ ಗುಲಾಬಿ, ಚಂದನ, ಸೇವಂತಿಗೆ, ಮಲ್ಲಿಗೆ, ಜಾಜಿ, ಪಚ್ಚೆಕರ್ಪೂರ, ಗಂಧದ ನಾನಾತರದ ಬಣ್ಣ ಬಣ್ಣಗಳಿಂದೊಪ್ಪುವ ಸುಗಂಧ ಪರಿಮಳ ಪೂರಿತವಾದ ಹೂಗೊಂಚಲುಗಳು ನವವಧುವಿಗೆ ದಂಡೆ ಮುಡಿಸಿದಂತೆ ಕಾಣುತ್ತಿವೆ. ನಾರಿಕೇಳ, ಬಾಳೆಗೊಲ, ಪುಷ್ಪಗಳನ್ನೂ ತರುಣಿಗೆ ಉಡಿತುಂಬಿ ಬಾಗ್ಣಸಿಗೆ ಎಂದು ಕರೆಯುವಂತಿದೆ ಅಲ್ಲಿಯ ಸೊಬಗು ಸೌಂದರ್ಯ ಅವರು ಕುಳಿತ ಅಣೆಯುಲ್ಲಂತೂ ಹತ್ತಾರು ಮಾವಿನ ಮರಗಳೂ ಬೇವಿನ ಮರಗಳೂ ಆಕಾಶ ಮುಟ್ಟಲು ನಾ ಮುಂದೆ ನೀ ಮುಂದೆ ಎಂದು ಸ್ಪರ್ಧೆಗೆ ನಿಂತಂತೆ ತೋರುತ್ತಿವೆ. ಅವುಗಳ ಮಧ್ಯದಲ್ಲಿ ಉಪಾಸಯ್ಯನ ಗುಡಿ ಚುಕ್ಕೆಗಳ ಸಮೂಹದಲ್ಲಿ ಚಂದ್ರಮ ನಂತೆ ನೋಡುವವರ ದೃಷ್ಟಿಯಾಗುವಂತೆ ಶೋಭಾಯಮಾನವಾಗಿದೆ. ಆ ಗುಡಿಯ ಬುಡದಲ್ಲಿಯೇ ಪೂರ್ವಾಭಿಮುಖವಾಗಿ ಒಂದು ಮಹಾಗವಿಯಿದ್ದದ್ದು ಗುರುಗಳ ದೃಷ್ಟಿಗೆ ತಗಲೇ ಬಿಟ್ಟಿತ್ತು. ಕುಳಿತ ಸ್ಥಳದಿಂದ ಎದ್ದು ನಾಲ್ಕು ಹೆಜ್ಜೆ ಮುಂದೆ ಬಂದು ಗವಿಯಲ್ಲಿ ವಳಹೊಕ್ಕು ನೋಡಿ ಬಂದರು. ಅಷ್ಟೇನು ಆಳ ವಾಗ ಅಲ್ಲದ ಗವಿಯು ಒಬ್ಬ ಯೋಗಿವರ್ಯನಿಗೆ ತಪಶ್ಶಕ್ತಿಯೊದಗಿಸಲು ಪ್ರಶಸ್ತ ವಾಗಿತ್ತು. ಗುಡಿಯ ಎಡಬಲಗಳಲ್ಲಿ ಎಳೆಯ ಬಿಲ್ವಪತ್ರಿಯ ಗಿಡಗಳು ತ್ರೀದಳ ಪಂಚದಳಗಳಿಂದ ಕೂಡಿದ್ದವು. ಹಿಂಬದಿಯಲ್ಲಿ ಪೂಜೆಗೆಂದು ನಿರ್ಮಿಸಿದ ಹೂ ಗಿಡಗಳ ಗುಂಪು ಕಂಡುಬಂದಿತು. ಸೂರ್ಯಾಸ್ತ ಸಮಯ ಸಮೀಪಿಸಿದ್ದರಿಂದ ಸಂಧ್ಯಾವಂದನೆಗಳನ್ನು ಮುಗಿಸಿಕೊಂಡು ಅಲ್ಲೇ ಹರಿಯುವ ಹಳ್ಳದಲ್ಲಿ ಮಿಂದು ಒಂದು ಹೂ ಪುಷ್ಪ ಬಿಲ್ವಪತ್ರಿ ತೆಗೆದುಕೊಂಡು ಗವಿಯನ್ನು ಹೊಕ್ಕು ಅಲ್ಲೇ ಒಂದು ಶಿಲೆಯ ಮೇಲೆ ಪದ್ಮಾಸನಾರೂಢರಾಗಿ ಇಷ್ಟಲಿಂಗ ಪೂಜೆಯಲ್ಲಿ ತೊಡಗಿ ಇಷ್ಟಲಿಂಗದಲ್ಲಿ ನೇರ ದೃಷ್ಟಿಯನ್ನಿಟ್ಟು ತದೇಕ ಚಿತ್ತರಾಗಿ ಧ್ಯಾನಿಸುತ್ತಿದ್ದರು. ಆತ್ಮನಲ್ಲಿ ಶಿವನನ್ನು ನೆಲಗೊಳಿಸಿಕೊಂಡು ಶಿವನಲ್ಲಿ ಜೀವನನ್ನು ಐಕ್ಯಗೊಳಿಸಿ ಲಿಂಗಾಂಗ ಸಾಮರಸ್ಯವನ್ನು ಹೊಂದಿ ಅನುಷ್ಠಾನದಲ್ಲಿ ಕುಳಿತಿದ್ದರು.

## ಅನುಷ್ಠಾನ ಪೂರ್ಣವಾದದ್ದು

ಚಿರಂತನವಾದ ಆತ್ಮನಲ್ಲಿ ಶಿವನೆಂಬ ಜೀವನನ್ನು ಅಳವಡಿಸಿಕೊಂಡು ನಿರಾಕಾರಿ ನಿರಂತರವಾದ ಪರಮ ಆತ್ಮನ ಚಿಂತನೆಯಂಗೈಯುತ್ತ ಐಕ್ಯ ಸಮಾಧಿಯಲ್ಲಿ ಕುಳಿತಿದ್ದರು. ನಶ್ವರವಾದ ಮಾನವ ಶರೀರ ನಿಮಿತ್ಯ ಮಾತ್ರ ಕಾರಣೀಭೂತನಾದ ಆತ್ಮನು ಅಮರ ನಿಜಾನಂದ ಪರಿಪೂರ್ಣವಾದ ಆತ್ಮ ಮಾನವ ಹುಟ್ಟಿನಿಂದಲೇ ಅವನಲ್ಲಿ ಸೇರಿ ಆಯುಷ್ಯ ತೀರಿದೊಡನೆ ದೇಹನಾಶಿ ಮುಪ್ಪಾದೊಡನೆ ಅದರಿಂದ ಬೇರೆಯಾಗಿ ಬಿಡುತ್ತದೆ. ಮಳೆ ಬರುವಾಗ ಹೇಗೆ ನೀರಿನ ಮೇಲೆ ಅನೇಕಾನೇಕ ಗುರುಳೆಗಳು ಏಳುವವು ಆ ಎಲ್ಲಾ ಪ್ರತಿ ಗುರುಳೆಗಳಲ್ಲಿಯೂ ಆಕಾಶ ಕಾಣಿಸಿಕೊಳ್ಳುತ್ತದೆ. ಗುಳ್ಳೆವಡೆದು ಮಾಯವಾದಾಗ ಅದರಲ್ಲಿ ಬಿಂಬಿಸಿರುವ ಆಕಾಶವೂ ಒಡೆದು ಛಿದ್ರವಾಗಲಾರದು. ಅದರಂತೆ ದೇಹ ನಶಿಸಿದರೂ ಆತ್ಮ ನಶಿಸಿ ಹೋಗಲಾರದು. ಇದೇ ತೆರನಾಗಿಯೇ ಈ ಮಾನವ ಶರೀರವಿದೆ. ಶರೀರ ಗುರುಳೆಯಿದ್ದಹಾಗೆ ಆತ್ಮ ಆಕಾಶವಿದ್ದಹಾಗೆ ಯಾವಾಗಲೂ ಅವರ ತನ್ನ ಕರ್ಮಕ್ಕನುಸಾರವಾಗಿ ಹುಟ್ಟಿ ಕರ್ತವ್ಯದಂತೆ ಕಾಯಕಮಾಡಿ ಮಣ್ಣು, ನೀರು, ಗಾಳಿಯ ಋಣ ತೀರಿದೊಡನೆಯೇ ಶರೀರ ಬಿದ್ದು ಹೋಗುತ್ತದೆ. ನಿರಂತರವಾದ ಆತ್ಮ ಶರೀರದಿಂದ ಬೇರ್ಪಟ್ಟು ತನ್ನ ನಿಜ ಸ್ವರೂಪದೊಡನೆ ಕೂಡಿಕೊಳ್ಳುತ್ತದೆ. ಪ್ರತಿಯೊಬ್ಬ ಮಾನವ ದೇಹವೂ ನೀರು ಗುರುಳಿದ್ದಹಾಗೆ. ಆತ್ಮ ಆಕಾಶದಂತೆ ಪ್ರತಿಯೊಬ್ಬನಲ್ಲಿಯೂ ಪ್ರತಿಬಿಂಬಿಸುತ್ತದೆ. ಆಕಾಶ ಬಿಂಬ ಗುರುಳೆಯ ಹೊಕ್ಕಾಗ ಮಾತ್ರ ಅದು ನಮಗೆ ಗೋಚರವಾಗುತ್ತದೆ. ಅದರಂತೆ ಆತ್ಮ ಶರೀರದಲ್ಲಿ ಇದ್ದಾಗ ಮಾತ್ರ ಮಾನವ ಜೀವ ತಳೆಯುತ್ತಾನೆ. ಗುರುಳೆ ವಡೆದು ಹೋದಾಗ ಹೇಗೆ ಆಕಾಶ ಸ್ಥಿರವಾಗಿರುವುದೋ ಹಾಗೇ ದೇಹ ಬಿದ್ದುಹೋದಾಗ ಆತ್ಮ ಸ್ಥಿರವಾಗಿರುತ್ತದೆ. ಪೃಥ್ವಿ ಜನ್ಮ ತಳೆಯುವದಕ್ಕಿಂತಲೂ ಪೂರ್ವದಲ್ಲಿಯೇ ಇದ್ದ ಬಟ್ಟಬಯಲು ಈಗಲೂ ಮೈದೋರಿದೆ. ನೋಡಲು ಬಾರದ ಹಿಡಿಯಲು ಬಾರದ ಆನಂದಮಯ ಪರಬ್ರಹ್ಮನಾಗಿ ತೋರಿದ ಬಯಲು ಪೃಥ್ವಿ ನಾಶವಾದಾಗ್ಯೂ ಇರುತ್ತದೆ. ಹಿಂದೂ ಇತ್ತು. ಈಗಲೂ ಇದೆ. ಮುಂದೆ ಎಂದೆಂದೂ ಇರುತ್ತದೆ. ಇದುವೇ ಚೇತನಾಮಯವಾದ ಪರಮ ಆತ್ಮ.

ಸತ್ಯ, ಜ್ಞಾನ, ದಯಾ, ಧರ್ಮ, ಶಾಂತಿ, ಸಹನಶೀಲತೆ, ಅಹಿಂಸೆ ಇವೇ ಮೊದಲಾದ ಸದ್ಗುಣಗಳನ್ನು ತನ್ನ ಸರ್ವ ಸಂಪತ್ತೆಂದು ತಿಳಿಯುವುದು. ಆತ್ಮನು ಸದಾ ಸಂತುಷ್ಟನು ನಿತ್ಯಾನಂದ ಪರಿಪೂರ್ಣನು, ಸಾಕ್ಷಾತ್ ಪರಬ್ರಹ್ಮನು, ಪರ ಮಾತ್ಮನು, ದ್ವಂದ್ವಾತೀತನು, ಜೀವನ್ಮುಕ್ತನು, ನಿರಾಧಾರಿಯು, ಜಂಗಮನು, ಲಿಂಗಾಂಗೈಕ್ಯನು ಎಂಬ ತತ್ವಜ್ಞಾನಗಳನ್ನು ಅರಿತುಕೊಳ್ಳುತ್ತ ಮಾಂಸ ಪಿಂಡವನ್ನು ಮಾತ್ರ ಬಂಧವನ್ನಾಗಿಸಿ ಸ್ವಾಭಿಮಾನ ಅಹಂಕಾರವುಳ್ಳ ದೇಹದಿಂದ ಬೇರ್ಪಟ್ಟು ಆತ್ಮನಲ್ಲಿ ಬೆರೆತು ತಾನು ಹುಟ್ಟಿದ್ದೇಕೆ? ಯಾವ ಕಾರ್ಯಗಳನ್ನು ಕೈಕೊಳ್ಳಬೇಕು? ಈ ಹೇಯವಾದ ಅಸತ್ಯವಾದ ಅಪರಿಪೂರ್ಣವಾದ ನರಕಯಾತನೆ ಪಡುವ ಸಂಸಾರದಲ್ಲಿ ಬೀಳದೇ ಸಚ್ಚಿದಾನಂದ ಅಮರವಾದ ಜನನ ಮರಣ ರಹಿತವಾದ, ಸ್ವಯಂ ಪ್ರಕಾಶವುಳ್ಳ ಕೋಟಿ ಸೂರ್ಯರಂತೆ ಪ್ರಜ್ವಲಿಸುವ, ಹರಿಹರ ಬ್ರಹ್ಮಾದಿಗಳಿಗೂ ಸಿಲುಕದ ಪುನಃ ಪುನಃ ಜನ್ಮತಾಳುವ ಮಾಂಸ ಮಜ್ಜಾದಿಗಳಿಂದ ಕೂಡಿದ ಈ ನಶ್ವರವಾದ ಶರೀರದಲ್ಲಿ ಮತ್ತೆ ಬೆರೆಯದೇ ಮೋಕ್ಷ ಪದವಿಯನ್ನು ಪಡೆದು ಅಮರನಾಗಬೇಕೆಂದು ನಿಜ ಸದ್ಗುರು ಚನ್ನವೃಷಭೇಂದ್ರರು ಈ ರೀತಿ ಆತ್ಮ ಚಿಂತನೆಯಲ್ಲಿ ಮಗ್ನರಾಗಿ, ಅಹಂಕಾರ ಮಮಕಾರ ಮೋಹ ಲೋಭಗಳಿಂದ ಕೂಡಿದ ಮನಸ್ಸನ್ನು ಮೀರಿ ದೇಹವನ್ನು ಮರೆತು ಜ್ಞಾನಸ್ಥರಾಗಿರಲು, ನಿಜಾನಂದ ಐಕ್ಯ ಸಮಾಧಿ ಪೂರ್ಣವಾಗದ ಮುನ್ನವೇ ಅವರ ಸಮಾಧಿ ಅಂತ್ಯಗೊಳಿಸುವುದರೊಂದಿಗೆ ಗುರುಗಳ ಅನುಷ್ಠಾನ ಅಪೂರ್ಣವಾಗುತ್ತದೆ.

ಇಂತಿರಲು ಒಂದು ದಿನ ಮೈಸೂರ ಗ್ರಾಮದ ದನಗಾಯ್ವ ಹುಡುಗರು ಮಧ್ಯಾಹ್ನದ ಹೊತ್ತಿಗೆ ಉರಿಬಿಸಿಲು ತಾಳದೇ ಗೋವುಗಳನ್ನು ಹೊಡೆದುಕೊಂಡು ಅದೇ ವಿಶಾಲ ತೋಟಕ್ಕೆ ವಿಶ್ರಾಂತಿಪಡೆದು ಹೋಗಲು ಬಂದರು. ಉಪಾಸ್ಯನ ಗುಡಿಯ ಮುಂದೆಯೇ ಗೋವುಗಳನ್ನೆಲ್ಲ ಬಿಡುಬಿಟ್ಟು ಹರಿವ ಝರಿಯಲ್ಲಿ ಮುಖ ಮಾರ್ಜನ ಮಾಡಿಕೊಂಡು ಮನೆಯಿಂದ ನಡುವಿಗೆ ಸುತ್ತಿತಂದ ಬುತ್ತಿಗಳನ್ನೆಲ್ಲ ಬಿಚ್ಚಿಕೊಂಡು ಊಟಕ್ಕೆ ಕುಳಿತರು. !ಅಜ್ಞಾನಿ ಎಳೆಗರುವೊಂದು ತನ್ನ ತಾಯಿ ಗೋವಿನೊಡನೆ ಚಕ್ಕಂದವಾದ ಟಣ ಟಣ ಜಿಗಿಯುತ್ತ ಚಲ್ಲಾಟವಾಡಿ ಹಾರಾಡುತ್ತ ಅಲ್ಲಿರುವ ಗವಿಯೊಳಗೆ ತೂರಿಕೊಂಡು ಹೋಯಿತು. ಎದುರಿಗೆ ಬಂಡಿಯ ಮೇಲೆ ಕುಳಿತ ಭವ್ಯ ಗುರುಮೂರ್ತಿಯನ್ನು ಕಂಡು ಒಮ್ಮೆಲೇ

ಹೆದರಿ ಓಡಿಬಂದು ವನವೆಲ್ಲ ಜಗದಾಡಿತು ಇದರಂತೆ ನಾಲ್ಕು ಐದು ಸಲ ಮಾಡುತ್ತಿರುವಾಗಲೇ ಹುಡುಗರ ಊಟ ತೀರಿ ಝರಿಗೆ ನೀರು ಕುಡಿಯಲು ಬಂದರು ಕರುವಿನ ಚಲ್ಲಾಟವನ್ನು ಕಂಡು ಆನಂದ ಪಟ್ಟ ಮಕ್ಕಳು ತಾವೂ ಅದರೊಡನೆ ಭಾಗಿಯಾಗಿ ಆನಂದಿಸುವ ಪ್ರಸಂಗದಲ್ಲಿ ಈಜಾಡಲು ಮನಸ್ಸು ಮಾಡಿ ಕರುವಿನೊಂದಿಗೆ ಹುಡುಗರು ಗವಿಯನ್ನು ಹೊಕ್ಕರು. ಕರುವಿನ ಮೇಲೆಯೇ ಸಂಪೂರ್ಣ ಲಕ್ಷ್ಯ ವಿಟ್ಟ ಯಾವೊಂದು ಹುಡುಗನೂ ಅತ್ತ ದೃಷ್ಟಿ ಹರಿಸದೇ ಇದ್ದಾಗ ಹಿಂದೆ ಬಂದ ಹುಡುಗನ ದೃಷ್ಟಿ ಆ ದಿವ್ಯ ಮೂರ್ತಿಯ ಮೇಲೆ ಬೀಳಲು ಹುಡುಗನ ಮೈ ನಡುಗಿ ರೋಮಾಂಚನವಾಗಿ ಒಮ್ಮೆಲೇ ಚಿಟ್ಟೆಂದು ಚೀರಿ ಹೊರಗೋಡಿಬಂದಿತು ಇದನ್ನು ಕಂಡ ಹುಡುಗರೆಲ್ಲ ದಿಗ್ಭ್ರಾಂತರಾಗಿ ಅವನತ್ತ ಓಡಿ ಬಂದು ಕೈಹಿಡಿದು ಅಲುಗಾಡಿಸಿ ಏನಾಯಿತೋ ? ಏಕೆ ಹೀಗೆ ಮಾಡಿದೆ ? ಎಂದು ಬಿಟ್ಟು ಬಿಡದೇ ಅಲುಗಾಡಿಸಿ ಕೇಳ ಹತ್ತಿದಾಗ ಬಾಯಿಯಿಂದ ಮಾತೇ ಹೊರಡದ ಆ ಬಾಲಕ ತೊದಲುತ್ತ ಅಯ್ಯ ..... ಯ್ಯ ...... ಹೆ ....ದ....ಹೇ ದ ಎಂದಷ್ಟೇ ನುಡಿಯಿತು. ಇದನ್ನು ಕೇಳಿದ ಹುಡುಗರೆಲ್ಲ ಒಟ್ಟುಗೂಡಿ ಗವಿಯ ಬಾಗಿಲಲ್ಲಿಯೇ ನಿಂತು ಒಳಗೆ ದೃಷ್ಟಿ ಹರಿಸಲಾಗಿ ಗೋಚರವಾದ ಮೂರ್ತಿಯನ್ನು ಅಸ್ಪಷ್ಟವಾಗಿ ನೋಡಿ ಹೆದರಿ ಓಡಿಬಂದು ದನಗಳನ್ನೆಲ್ಲ ಕಲೆಹಾಕಿ ಅವಸರವಸರವಾಗಿ ಓಡುತ್ತ ಎಲ್ಲ ಗೋವುಗಳನ್ನು ಓಡಿಸುತ್ತ ಊರತ್ತ ಧಾವಿಸ ತೊಡಗಿದರು. ಮಾರ್ಗ ಮಧ್ಯದಲ್ಲಿಯೇ ಹೊಲಕ್ಕೆ ಹೊರಟ ದ್ಯಾವಪ್ಪ ಸಾಹುಕಾರ, ಹುಡುಗರನ್ನು ತಡೆದು ವಿಚಾರಿಸಲಾಗಿ, ವಿಚಿತ್ರ ಸಂಗತಿಯನ್ನರಿತ ಆತನು ಅದೇ ಒಂದೆರಡು ಮಕ್ಕಳೊಂದಿಗೆ ಗವಿಯನ್ನು ಹೊಕ್ಕು ನೋಡಿ ಹಾಸುಬಂಡೆಯ ಮೇಲೆ ವಿರಾಜಮಾನರಾಗಿ ತೋರುವ ತೇಜಸ್ವೀ ಕಳಾಪೂರಿತ ಮಹಾ ಮೂರ್ತಿಯನ್ನು ಕಂಡು ಜ್ಞಾಪಿಸಿಕೊಂಡು ಓಹೊ ಇವರು ಮಾಗಣಗೇರಿಯ ಗುರುಬಸವಾರ್ಯ ಮುತ್ಯಾನವರ ಮಗ ಚನ್ನ ವೃಷಭೇಂದ್ರರು ! ಎಂದರಿತು ಹೊರಬಂದು ಒಂದು ತಿಂಗಳಿಂದಲೂ ಇವರಿಗಾಗಿ ಪರಿತಾಪ ಪಡುತ್ತ ಹುಡುಕಿಸುತ್ತಿರುವ ಅವರ ದೀನ ಮುಖವನ್ನು ನೆನೆದ ಸಾಹುಕಾರ ಮನೆಗೆ ಬಾರದೆ ನೇರ ಮಾಗಣಗೇರಿಗೆ ಬಂದು ಆಳನ್ನು ಕಳಿಸಿ ಗುರುಮೂರ್ತಿಯ ತಂದೆ ತಾಯಿಗಳಾದ ಗುರುಬಸವಾರ್ಯ ಡಂಪಮ್ಮನವರನ್ನು ಕರೆಸಿಕೊಂಡನು.

ಒಂದು ತಿಂಗಳಿಂದಲೂ ಮಗನ ಮುದ್ದು ಮುಖವನ್ನು ಕಾಣದ ತಂದೆ ತಾಯಿಗಳು ಮಗನಿರುವ ಸುದ್ದಿಯನ್ನು ಕೇಳಿದೊಡನೆ ವಸಂತ ಋತುವಿಗಾಗಿ ನಿರೀಕ್ಷಿಸುವ ಕಾಮ ಕುಳಿತ ಕೋಗಿಲೆ ವಸಂತ ಋತಾಗಮನವಾದ ಕೂಡಲೇ ಹೇಗೆ ಆನಂದಪಡುವುದೋ ಹಾಗೆ ಅತ್ಯಾನಂದ, ಭರಿತರಾಗಿ ಓಡೋಡಿ ಮೈಸೂರ ಗ್ರಾಮಕ್ಕೆ ಬಂದು ಊರಲ್ಲಿಯೇ ಅಗ್ರಗಣ್ಯರಾದ ಪ್ರಮುಖ ನಂದಗೇರಿ ದ್ಯಾಮಪ್ಪ ಸಾಹುಕಾರರ ಮನೆಯನ್ನು ಹೊಕ್ಕರು. ಮನೆಯಲ್ಲಿಯೇ ಆಸನಾರೂಢರಾಗಿ ಕುಳಿತ ಸಾಹುಕಾರರು ಹರುಷದಿಂದ ಎದ್ದು ಬಂದು ಸ್ವಾಗತಬಯಸಿ ಉಪಚಾರ ಪಾನೀಯಗಳಾದ ಬಳಿಕ ಕೂಡಲೇ ಎಲ್ಲಾ ನಡೆದ ಸಂಗತಿಗಳನ್ನರುಹುತ್ತ ಉಪಾಸನೆಯ ಗುಡಿಯತ್ತ ಧಾವಿಸಿ ನಡೆದು ಗವಿಯನ್ನು ಹೊಕ್ಕು ಗುರುಮೂರ್ತಿಯ ಕೈಹಿಡಿದು ಎಬ್ಬಿಸಿ ಹೊರಗೆ ಕರೆತಂದು ತಂದೆ ತಾಯಿಗಳ ಮುಂದೆ ನಿಲ್ಲಿಸಿದರು. ಹುಟ್ಟು ಸಾವುಗಳನ್ನು ಮೀರಿದ ಗುರುಲಿಂಗ ಜಂಗಮ ಸ್ವರೂಪಿಯಾದ ಪರಮಾತ್ಮನಲ್ಲಿ ಲೀನವಾದ ಸದ್ಗುರು ಚನ್ನ ವೃಷಭೇಂದ್ರರ ದೇಹ ಸಾಹುಕಾರರ ಕೈ ಸೋಂಕಿದೊಡನೆ ಜೊರಡಿನಂತಿದ್ದ ದೇಹ ಕೂಡಲೇ ಜೀವನು ಒಳಹೊಕ್ಕು ಸರ್ವಾಂಗ ಸಂಚಲನ ಮಾಡಿ ಶಾಕ್ ಕೊಟ್ಟಂತಾಗಿ ಪುಲಕಿತರಾಗಿ ಎಚ್ಚತ್ತು ಅವರು ಜಗ್ಗಿ ನಡೆಸಿದಂತೆ ನಡೆದು ಬಂದು ನೋಡುತ್ತಾರೆ ಎದುರಿಗೆ ತಂದೆ ತಾಯಿಗಳು ಬಂದು ನಿಂತಿದ್ದಾರೆ. ಈ ಮಾಯಾ ಮೋಹಗಳನ್ನು ತೊರೆದು ಭವಸಾಗರದ ಆಸೆಯನ್ನು ತೊರದು ಈಶ ಸಾಗರದಲ್ಲಿ ಸದಾ ಈಜಬೇಕೆನ್ನುವ ಗುರುವಿಗೆ ತಂದೆ ತಾಯಿಗಳು ಬಂದು ಆತಂಕ ಮಾಡಿದ್ದನ್ನು ಕಂಡು ಅಷ್ಟೇ ಕೋಪಗೊಂಡರೂ ಸಹಿಸಿಕೊಂಡು ಶಾಂತಚಿತ್ತರಾಗಿ ಸದಾನಂದ ವದನದಿಂದ ಸುಮ್ಮನೇ ದಾರಿ ಕ್ರಮಿಸತೊಡಗಿದರು. ಅಲೌಕಿಕರಾದ ತಂದೆ ತಾಯಿಗಳಂತಿರುವ ಆತ್ಮನ ಆಶ್ರಯದಲ್ಲಿದ್ದ ಮಾಯೆಯನ್ನು ಮೀರಿ ನಿರಂತರವಾದ ನಿಶಾ ಮಂಡಲವನ್ನೇ ಆಕ್ರಮಿಸಿದ ವಿಶಾಲವಾದ ಮಹದಾತ್ಮನ ಸನ್ನಿಧಿ ಸೇರಲು ತವಕಿಸುತ್ತಿರುವ ಗುರು ಚನ್ನ ವೃಷಭೇಂದ್ರರ ಆತ್ಮ ಈ ಲೌಕಿಕದ ತಂದೆ ತಾಯಿಗಳು ಕೊಡುತ್ತಿರುವ ತೊಂದರೆಗಳನ್ನು ಸಹಿಸದಾದರು, ಯಾವೊಂದು ಚಕಾರ ಶಬ್ದವನ್ನು ಕೂಡಾ ಎತ್ತದೇ ಹೊರಟ ಮಗನನ್ನು ಹಿಂಬಾಲಿಸಿದ ತಂದೆ ತಾಯಿಗಳೂ ಕೂಡಾ ಮಾತಾಡದೇ ಹಾಗೇ ದಾರಿನಡೆದು, ಬಂದು ಮಠ ಸೇರಿದರು. ತಾಯಿ ತನ್ನ ಅಂತಃ ಕರುಣೆಯ ತಾಪ ತಡೆಯದೇ ಹುಸಿ ಕೋಪಗೊಂಡು ಗದರಿಸಿ ಮಾತ

ನಾಡುತ್ತ ಊಟ ಉಪಚಾರಗಳನ್ನು ತೊರೆದು ನಿದ್ರಾ ವಿಹಾರಗಳನ್ನು ಬಿಟ್ಟು ಅಲ್ಲೇಕೆ ಕುಳಿತಿರುವಿಯೋ ಚನ್ನ !! ಹೇಳು ನಿನಗಾವುದನ್ನು ಕಡಿಮೆ ಮಾಡಿ ರುವೆ ? ಹೀಗೇಕೆ ಹುಚ್ಚನಂತೆ ವರ್ತಿಸುತ್ತಿರುವಿ ? ಎಂದು ಗದರಿಸುತ್ತ ಸೀದಾ ಮಗನೊಡನೆ ಅಡುಗೆಯ ಮನೆಯತ್ತ ನಡೆದರು. ಏನಮ್ಮ ! ಊಟ ಊಟ ವೆಂದು ಏಕೆ ಬಾಯಿ ಬಿಡುತ್ತಿರುವಿ ಇನ್ನೂ ಕೇವಲ ಮೂರು ದಿನಗಳಲ್ಲಿ ನನ್ನ ಅನುಷ್ಠಾನ ಪೂರ್ತಿಯಾಗುತ್ತಿತ್ತು. ನೀವು ಬಂದು ಈ ರೀತಿ ತೊಂದರೆ ಕೊಡ ಬಾರದಾಗಿತ್ತು ಈಗ ಎಲ್ಲವೂ ವ್ಯರ್ಥವಾಗಿ ಹೋಯಿತು. ಕೊಡಮ್ಮ ! ಕೊಡು ಈ ಇಪ್ಪತ್ತೆಂಟು ದಿನಗಳ ರೊಟ್ಟಿಯನ್ನು ಒಮ್ಮೆಲೇ ಕೊಡು ತಿಂದು ಮುಗಿಸುತ್ತೇ ನೆಂದು ಹೇಳಿ ಊಟಕ್ಕೆ ಕುಳಿತ ಗುರುವರ್ಯರು ಪುಟ್ಟಿಯಲ್ಲಿರುವ ಸಾಧಾರಣ ನೂರು ನೂರಿಪ್ಪತ್ತು ರೊಟ್ಟಿಗಳೆಲ್ಲವನ್ನೂ ತೀರಿಸಿ ಇನ್ನೂ ಬೇಡಿದರಂತೆ ಗಾಬರಿ ಗೊಂಡ ತಾಯಿ ಮಗನನ್ನು ಸಾಂತ್ವನಗೊಳಿಸಿ ಕರೆತಂದು ಗುರುಮಠದಲ್ಲಿ ಕೂಡ್ರಿ ಸಿದರು. ಇದೆಲ್ಲವನ್ನೂ ಧರ್ಮಪತ್ನಿಯ ಬಾಯಿಂದ ಕೇಳಿದ ಗುರುಬಸವಾ ರ್ಯರು ಏನೀ ವಿಚಿತ್ರವೆಂದು ಯಾವುದೋ ತಿಳಿಯದೇ ತೊಳಲಾಡ ಹತ್ತಿದರು.

ಅಪೂರ್ಣಗೊಂಡ ಅನುಷ್ಠಾನ ಬಿಟ್ಟುಬಂದ ಬಳಿಕ ಎಂದಿನಂತೆ ನಿತ್ಯ ಕರ್ಮಗಳನ್ನಾಚರಿಸುತ್ತ ಶಿವಪೂಜಾವಿಧಿಗಳಲ್ಲಿ ಮನಸ್ಸು ತೊಡಗಿಸಿ ಕಾಲಹರಣ ಮಾಡತೊಡಗಿದರು. ಈ ತೆರನಾಗಿ ಒಂದು ವರ್ಷ ಕಳೆದ ಬಳಿಕ ಗುರುಗಳ ಚಲನವಲನೆಗಳಲ್ಲಿ ಬದಲಾವಣೆಗಳು ಕಂಡು ಬರಹತ್ತಿದವು. ಯೌವ್ವನ ಪ್ರಾಪ್ತ ವಾಗಿ ಬೆಳೆಯುತ್ತಿರುವ ಸ್ವಾಮಿಗಳ ದಿವ್ಯ ವದನದಲ್ಲಿ ಬ್ರಹ್ಮತೇಜಸ್ಸು ಕಳಾ ಪೂರಿತವಾಗಿ ಹೊರ ಹೊಮ್ಮುತ್ತಿತ್ತು. ಆಗ ಗುರುಗಳಿಗೆ ಮೂವತ್ತು ವರ್ಷ ಗಳು ತುಂಬುತ್ತ ಬಂದಿದ್ದವು. ತಂದೆ ತಾಯಿಗಳು ಮಗನ ಚಿಂತೆಯಲ್ಲಿಯೇ ಮುಳುಗಿದ್ದರು. ದೇವಾನುಗ್ರಹದಿಂದ ಹುಟ್ಟಿದ ಮಗನನ್ನು ತೋಂಟದಾರ್ಯನ ಸಮ್ಮತದಂತೆ ಚರಪಟ್ಟಾಧಿಕಾರ ಸ್ಥಾನಕ್ಕೆ ಪಟ್ಟಗಟ್ಟಬೇಕೋ ಅಥವಾ ಮದುವೆ ಮಾಡಿ ನಮ್ಮಂತೆ ಸಂಸಾರಿಕನನ್ನಾಗಿ ಮಾಡಬೇಕೋ ಎಂಬ ವಿಷಯದಲ್ಲಿ ಗಹನ ವಾಗಿ ವಿಚಾರಿಸುತ್ತ ಚಿಂತಾಮಗ್ನರಾಗಿದ್ದರು. ತಾಯಿಯ ಹಂಬಲವಂತೂ ಮಗನಿಗೆ ಸುಂದರವಾದ ಒಬ್ಬ ತರುಣಿಯನ್ನು ನೋಡಿ ಮದುವೆ ಮಾಡಿದರೆ ಅಸಾಧ್ಯವಾದ ಪೂಜಾನಿಷ್ಠೆಯಿಂದ ಬಿಡುಗಡೆಯಾಗಿ ನಮ್ಮ ಹಾದಿಯಲ್ಲಿ ನಡೆ

ಯಲು ಹಚ್ಚುವಳೆಂದು ಆಶಾಕಾಂಕ್ಷೆಯುಳ್ಳವಳಾಗಿದ್ದಳು. ಹೀಗೆ ವಿಚಾರ ಪರರಾಗಿ ಕಾಲಾಪಹರಣ ಮಾಡುತ್ತಿರುವಾಗಲೇ ಗುರು ಚನ್ನವೃಷಭೇಂದ್ರರಿಗೆ ಭಯಂಕರವಾದ ಹೊಟ್ಟೆ ಶೂಲೆ ಪ್ರಾರಂಭವಾಯಿತು. ಅದಕ್ಕೆ ಯಾವ ಉಪಶಮನ ಮಾಡಲೂ ಪುರುಸೊತ್ತು ಕೊಡದೇ ವಂದೇ ಸವನೆ ಗುರುಗಳು ಗುರುಮಠದ ತುಂಬೆಲ್ಲ ಹೊರಳಾಡ ತೊಡಗಿದರು. ಯಾವ ವೈದ್ಯನನ್ನು ಕರೆಸಿದರೂ ರೋಗ ಪರಿಣಾಮ ಹೊಂದುವಂತೆ ಕಾಣಲಿಲ್ಲ. ಎಲ್ಲರೂ ತಮ್ಮಿಂದಾಗದು ಎಂದು ಕೈ ಕಟ್ಟಿ ಕುಳಿತರು. ರೋಗ ದ್ವಿಮುಖವಾಗಿ ಹೆಚ್ಚುತ್ತಲೇ ಹೋಯಿತು. ಅಸಾಧ್ಯವಾದ ಆರ್ತನಾದದೊಡನೆ ಗುರುಗಳು ನರಳುತ್ತ ಘನವಾದ ಕಷ್ಟಪಡುತ್ತ ಹೊರಳಾಡ ಹತ್ತಿದರು. ಒಂದು ದಿನ ತೋಂಟದಾರ್ಯನನ್ನು ನೆನೆಯುತ್ತ ಗುರುಬಸವಾರ್ಯ ಹಂಪಮ್ಮನವರು ಮಲಗಿಕೊಂಡಾಗ ತೋಂಟದಾರ್ಯರು ಕನಸಿನಲ್ಲಿ ಬಂದು ಎಲೈ ! ಮೂಢ ಮಂದ ಮತಿಯಾದ ನೀನು ಏನು ಯೋಚಿಸುತ್ತಿರುವಿ ? ನಿನಗೆ ಮಕ್ಕಳೆ ಆಗದಿದ್ದಾಗ ನಾನು ಬಂದು ಮೊದಲನೆಯ ಮಗುವಿನನ್ನು ನನ್ನ ಹಿರಿಯ ಮಠದ ಉತ್ತರಾಧಿಕಾರಿಯನ್ನಾಗಿ ಮಾಡು ಎಂದು ನಿನಗೆ ಆಶೀರ್ವದಿಸಿದ್ದೇನೆ. ಆದರೆ ನೀನು ಯೋಚಿಸುತ್ತಿರುವದು ಸರಿ ಅಲ್ಲ, ಇವನನ್ನು ನನ್ನ ಮಠಕ್ಕೆ ಅಧಿಕಾರಿಯನ್ನಾಗಿ ಬಿಡುವದಾದರೆ ಈ ರೋಗದಿಂದ ಮುಕ್ತನಾಗುವನು ಎಂದು ಹೇಳಿ ತೋಂಟದಾರ್ಯರು ಅದೃಶ್ಯರಾದರು. ಆಗ ದಂಪತಿಗಳು ಕಣ್ಣು ಬಿಟ್ಟು ನೋಡಿ ಗಡಗಡನೆ ನಡುಗುತ್ತ ತೋಂಟದಾರ್ಯ ಗುರುಗಳ ಗುಡಿಗೆ ಹೋಗಿ ಕೈ ಜೋಡಿಸಿ ತಪ್ಪಾಯಿತು ಕ್ಷಮಿಸಿ ತಂದೆ ಎಂದು ಅನನ್ಯ ರೀತಿಯಿಂದ ಬೇಡಿಕೊಂಡರು. ನಂತರ ಪ್ರಸಾದವನ್ನು ತಂದು ಇವನನ್ನು ನಿನ್ನ ಹೇಳಿಕೆಯ ಪ್ರಕಾರ ಚರ ಪಟ್ಟಾಧಿಕಾರ ಮಾಡುವೆನೆಂದು ಗುರು ತೋಂಟದಾರ್ಯರ ಪಾದೋದಕ ಪ್ರಸಾದ ಕುಡಿಸಲು ಅಂಥಾ ಭಯಂಕರವಾದ ಹೊಟ್ಟೆಶೂಲೆ ಒಮ್ಮೆಲೇ ಕಡಿಮೆಯಾಗಿ ಮೊದಲಿನಂತೆ ಗುರುಗಳು ಎದ್ದು ಕುಳಿತರು.

## ಚರಪಟ್ಟಾಧಿಕಾರ ಮಹೋತ್ಸವ

ಮೂವತ್ತೊಂದು ವರ್ಷದವನಾದ ಬಳಿಕ ಒಂದು ಒಳ್ಳೆಯ ಶುಭದಿನದಂದು ಮೂರುವರೆ ದಿವ್ಯ ಮುಹೂರ್ತದಲ್ಲಿ ಚರಪಟ್ಟಾಧಿಕರವನ್ನು ಮಾಡಿ ಮುಗಿಸಿದರು.

1890 ನೇಯ ಇಸ್ವಿ ಸರ್ವಧಾರಿನಾಮ ಸಂವತ್ಸರದ ಚೈತ್ರ ಶುದ್ಧ ಪಾಡ್ಯದಂದು ಪ್ರಾತಃಕಾಲ 9 ಘಂಟೆ 30 ನಿಮಿಷಕ್ಕೆ ಸಲ್ಲುವ ಧನುರ್ಲಗ್ನ ಶುಭಾಂಶದಲ್ಲಿ - ಸ್ವಸ್ತಿವಾಚನ, ಪುಣ್ಯಾಹವಾಚನಾ, ಗಣಪತಿ ಪೂಜಾ, ನಾಂದೀ ಸಮಾರಾಧನೆ, ಮಂಟಪ ದೇವತಾ ಪ್ರತಿಷ್ಠೆ, ಹೋಮಕುಂಡ, ವೇದಿಕೆಗಳ ಪೂಜೆ ಪಂಚಕಲಶಾರಾಧನೆ ಸಕಲ ವೈದಿಕ ವೀರಶೈವ ಕರ್ಮ ಪುರಸ್ಸರವಾಗಿ ಸಿದ್ಧಗೊಳಿಸಲ್ಪಟ್ಟ ಮಂಟಪದಲ್ಲಿ ಶ್ರೀ ವೇದಶಾಸ್ತ್ರಾಗಮಗಳನ್ನರಿತ ಶಾಸ್ತ್ರಿಗಳು ವೈದಕ ಪಂಡಿತ ಮಂಡಳಿಯೊಡನೆ ವೇದ ಮಂತ್ರ ಘೋಷಗಳೊಡನೆ ನೂತನ ಸ್ವಾಮಿಗಳಾದ ಚನ್ನ ವೃಷಭೇಂದ್ರರಿಗೆ ಮಂಗಲಸ್ನಾನ ರುದ್ರಾಭಿಷೇಕವಂ ಮಾಡಿಸಿ ಪೂರ್ವದ ಸಂಸ್ಥಾನ ಬೃಹನ್ಮಠಾಧ್ಯಕ್ಷರಾದ ಸಿಂಹಾಸನಾರೂಢ ಶ್ರೀ ಶಿವಾಚಾರ್ಯರ ಪಾದ ಸನ್ನಿಧಿಯಲ್ಲಿ ಕರೆದೊಯ್ದು ಸಾಷ್ಟಾಂಗ ಪ್ರಣಾಮಗಳನ್ನು ಮಾಡಿದ ಕೂಡಲೇ ಶ್ರೀ ಷ||ಬ್ರ||ಲಿಂ|| ದೊಡ್ಡ ಬಸವ ಶಿವಾಚಾರ್ಯರು ಅವರನ್ನು ಚರಪಟ್ಟಾಧ್ಯಕ್ಷರ ಉಚ್ಚಾಸನದಲ್ಲಿ ಕೂಡ್ರಿಸಿ ಶಾಸ್ತ್ರ ಪದ್ಧತಿಯ ಮೇರೆಗೆ ಅಭಿಷೇಕ ಮಾಡಿಸಿ ಗಂಧಾ ಕೌಪೀನ ಕಾಷಾಯ ವಸ್ತ್ರ ಭಸ್ಮರುದ್ರಾಕ್ಷಿಗಳನ್ನು ಕೊಟ್ಟು ಮಂತ್ರೋಪದೇಶವನ್ನು ಮಾಡಿ ಧರ್ಮಾಧಿಕಾರ ಪ್ರಧಾನವಾದ ಶಂಖ, ದಂಡ, ಕಮಂಡಲು, ಪಾದುಕೆಗಳನ್ನೆಲ್ಲ ಒಪ್ಪಿಸಿ ಮಹಾಪ್ರಾರ್ಥನಾ ಪೂರ್ವಕ ಸಿಂಹಾಸನವನ್ನಾರೋಹಣ ಮಾಡಿಸಿ ಬಂಗಾರದಿಂದ ಕೂಡಿದ ಪಂಚಮುಖಿ ರುದ್ರಾಕ್ಷಿಭರಿತ ಕಿರೀಟಧಾರಣ ಮಾಡಿ ಶ್ರೀ ಷ||ಬ್ರ|| ಚನ್ನವೃಷಭೇಂದ್ರ ಶಿವಾಚಾರ್ಯರೆಂದು ನಾಮಕರಣ ಮಾಡಿ ಮಹಾಸ್ವಾಮಿಗಳಿಗೆ ಜಯವಾಗಲಿ ಎಂದು ಜಯ ಘೋಷ ಮಾಡುತ್ತಿರುವಾಗಲೇ ಲಕ್ಷಾಂತರ ಜನರ ಕರತಾಡನಗಳೊಂದಿಗೆ ಹೂಮಳೆಗರೆಯುತ್ತಿರುವಾಗ ವಿಜಯಭೇರಿಗಳು ಭೂಮಂಡಲವೇ ವ್ಯಾಪಿಸುವಂತೆ ಭೋರ್ಗರೆದವು. ಭಕ್ತ ಸಮೂಹದ ಜಯಘೋಷವು ದಿಙ್ಮಂಡಲವನ್ನೇ ವ್ಯಾಪಿಸಿತು. ಜನ ಜಂಗು

ಳಿಯ ಪರಮಾನಂದವು ಸೀಮಾತೀತವಾಯಿತು. ಗುರುಗಳ ಚರಪಟ್ಟಾಧಿಕಾರ ಮಹೋತ್ಸವದ ಸಮಯದಲ್ಲಿ ಅನೇಕ ಹಿರಗುರು ಚರಪಟ್ಟಾಧಿಕಾರಿಗಳು ಬಂದು ನೆಲೆಸಿದ್ದರು. ಇದರಲ್ಲಿ ಕೆಂಭಾವಿಯ ಹಾಗೂ ಸಾವದಗಿಯ ಚರಪಟ್ಟಾಧಿಕಾರಿಗಳೂ ಬಂದಿದ್ದರು. ಕೆಂಭಾವಿ ಸಂಸ್ಥಾನ ಮಠಾಧ್ಯಕ್ಷರಾದ ದೊಡ್ಡ ಬಸವಯ್ಯ ಶಿವಾಚಾರ್ಯರು ನೂತನ ಸ್ವಾಮಿಗಳಾದ ಚನ್ನವೃಷಭೇಂದ್ರ ಶಿವಾಚಾರ್ಯರನ್ನು ಕರೆದೊಯ್ದು ಕರ್ತೃ ಶ್ರೀ ತೋಂಟದಾರ್ಯರ ಸನ್ನಿಧಿಯಲ್ಲಿ ಮಹಾ ಮಂಗಳಾರತಿಯನ್ನು ಮಾಡಿ ಉಪದೇಶ ಕೊಡುವಂತವರಾದರು.

ಲಿಂಗದೇಹದಲ್ಲಿ ಕನಸನ್ನು ಕಂಡಂತಾಗಿ ಜಾಗ್ರಾವಸ್ಥೆಯಲ್ಲಿ ವಿಚಾರಿಸಿ ಗುರುದರ್ಶನವಾಯ್ತೆಂದು ಚನ್ನವೃಷಭೇಂದ್ರರು ಹಿಗ್ಗಿ ಆನಂದಾಶ್ರುಗಳನ್ನುದುರಿಸಿದರು. ಬಳಿಕ ಅವರಿಗಾಗಿ ಸಿದ್ಧಪಡಿಸಿರುವ ಭವ್ಯ ಮಂಟಪದಲ್ಲಿ ಸಭೆಯನ್ನುದ್ದೇಶಿಸಿ ಮಾತನಾಡಲು ಗುರುವಿನೊಂದಿಗೆ ಹೊರಟರು. ರಾಜದರ್ಬಾರದ ರಾಜಂಗಳದಂತೆ ಆ ಭವ್ಯವಾದ ಮಂಟಪವನ್ನು ಕಟ್ಟಿದ್ದರು. ತಳಿರು ತೋರಣಗಳಿಂದಲಂಕರಿಸಿ ಎಳೆ ಬಾಳೆಕಂಭಗಳಿಂದಾವರಿಸಿದ ಕಂಬಗಳನ್ನು ನಿಲ್ಲಿಸಿದ್ದರು. ಬಣ್ಣ ಬಣ್ಣದ ರೇಶ್ಮೆ ಅರಿವೆಗಳನ್ನು ಸುತ್ತಿ ಜರತಾರಿ ಜಲ್ಲರಿಗಳನ್ನು ಇಳಿಬಿಟ್ಟಿದ್ದರು. ಜಂಗಮ ನಿಶಾನೆಯ ಧ್ವಜಪತಾಕೆಗಳು ಮಂಟಪದ ಮೇಲ್ಭಾಗದಲ್ಲಿ ಹಾರಾಡುತ್ತಿದ್ದವು. ಮಂಟಪದ ಮಧ್ಯಭಾಗದಲ್ಲಿ ಎತ್ತರದ ವೇದಿಕೆಯ ಮೇಲೆ ವಿಶೇಷವಾದ ಆಸನವೊಂದು ನಿರ್ಮಾಣಗೊಂಡಿತ್ತು. ಸುಂದರವಾದ ಸುಳಿವುಗಳೊಂದಿಗೆ ಬಂಗಾರದ ಎರಕ ಹೊಯ್ದ ಶ್ರೀಗಂಧದ ಸಿಂಹಾಸನದ ಮೇಲೆ ಸುವರ್ಣ ಬಣ್ಣದ ರೇಶ್ಮೆಯಿಂದಾವರಿಸಿದ ಮೃದುವಾದ ಗಾದಿಯನ್ನು ಹಾಕಿದ್ದರು. ಪಾದಗಳನ್ನಿಡಲು ಗಿಳಿಹಸುರಿನ ಮಕ್ಮಲ ಅರಿವೆಯನ್ನು ಹೊದ್ದ ಬೆಳ್ಳಿಯ ಆಂವಿಯೊಂದು ಅಲಂಕೃತವಾಗಿತ್ತು. ನವರತ್ನ ವೈಢೂರ್ಯಗಳಿಂದಲೂ ಮುತ್ತು ರತ್ನಗಳಿಂದಲೂ ಶೃಂಗರಿಸಲ್ಪಟ್ಟ ಛತ್ರಿ ಸಿಂಹಾಸನಕ್ಕೆ ನೆರಳಾಗಿ ನಿಂತಿತ್ತು. ವಟುಗಳಿಬ್ಬರು ಬಂಗಾರದ ಚಾಮರುಗಳನ್ನಿಡಿದು ನಿಂತುಕೊಂಡಿದ್ದರು. ಇದರ ಬಲಬದಿಯಲ್ಲಿ ಗುರುಪೀಠ ಎಡಬದಿಯಲ್ಲಿ ಪಟ್ಟದೇವರ ಪೀಠಗಳು ಕಂಗೊಳಿಸುತ್ತಿದ್ದವು. ಮಂಟಪದುದ್ದಕ್ಕೂ ನಡೆದು ಬರಲು ರತ್ನಗಂಬಳಿಯನ್ನು ಹಾಕಲಾಗಿತ್ತು. ವೈದಿಕರ ವೇದ ಘೋಷಗಳೊಡನೆ ಹೊರಟು ಬಂದು

ಗುರುಗಳು ಆಸನಾರೂಢರಾದ ಬಳಿಕ ಸಿಂಹಾಸನವನ್ನೇರಿ ಕುಳಿತು ಸಭೆಯನ್ನುದ್ದೇಶಿಸಿ ಮಾತನಾಡಿದರು. ನೆರೆದ ಜನ ಜಂಗುಳಿ ಆನಂದ ಪರವಶರಾಗಿ ಕರತಾಡನ ಮಾಡಿದರು. ನಂತರ ಗುರುಭಕ್ತ ಮಹೇಶ್ವರ ಜಂಗಮರ ಮಹಾಪ್ರಸಾದ ಪ್ರಾರಂಭವಾಯಿತು.

ಸಾಯಂಕಾಲ ಮಹಾಸ್ವಾಮಿಗಳ ಪಲ್ಲಕ್ಕಿ ಮಹೋತ್ಸವ ಪ್ರಾರಂಭವಾಯಿತು. ಸುತ್ತಲೂ ಬೆಳ್ಳಿಯ ತಗಡದಿಂದ ಆಚ್ಛಾದಿತವಾದ ಬಂಗಾರದ ತವರಗಳಿಂದಲೂ ಬಣ್ಣ ಬಣ್ಣದ ಗಾಜಿನ ಗೋಲಕಗಳಿಂದಲೂ ಮುತ್ತು, ರತ್ನ, ಮಾಣಿಕ್ಯಗಳ ಜಾಲರಿಗಳಿಂದಲೂ ಶೃಂಗರಿಸಲ್ಪಟ್ಟವು ಪಲ್ಲಕ್ಕಿಯಲ್ಲಿ ಮಕಮಲದ ಅರಿವೆಯನ್ನು ಹಾಸಿ ರೇಶ್ಮೆಯ ದಿಂಬುಗಳನಿಟ್ಟು ಶ್ರೀ ಗುರು ಚನ್ನವೃಷಭೇಂದ್ರವಾಚಾರ್ಯರನ್ನು ಕೈಹಿಡಿದು ಕರೆತಂದು ಪಲ್ಲಕ್ಕಿಯಲ್ಲಿ ಕೂಡ್ರಿಸಿ ಕೂಡಿದ ಜನ ಜಂಗಳಿಯ ಜಯ ಘೋಷಗಳೊಂದಿಗೆ ಪಲ್ಲಕ್ಕಿ ಮಠದ ಆವರಣವನ್ನು ದಾಟಿತು. ಮುಂದೆ ಊರಿನ ಪ್ರಮುಖ ಬೀದಿಗಳಲ್ಲೆಲ್ಲ ಸರ ದೀಪಗಳನ್ನಿಟ್ಟಿದ್ದರು. ಊರಿನ ಮನೆಮನೆಗಳೆಲ್ಲ ತಳಿರುತೋರಣಗಳಿಂದ ಶೃಂಗರಿಸಲ್ಪಟ್ಟಿದ್ದವು. ಮಾರ್ಗದುದ್ದಕ್ಕೂ ಬಾಳೆಕಂಬಗಳನ್ನು ನಡಲಾಗಿತ್ತು. ಅಲ್ಲಲ್ಲಿ ಧ್ವಜ ಪತಾಕೆಗಳನ್ನು ಹಾರಿಸಲಾಗಿತ್ತು. ವಿಜಯ ಬಾವುಟ ಪಲ್ಲಕ್ಕಿಯ ಮುಂಭಾಗದಲ್ಲಿ ಹಾರಾಡುತ್ತಿತ್ತು. ಕೊಂಬು ಕಹಳೆಗಳು ವಿಜಯ ದುಂದುಭಿಯನ್ನು ಹೀಯಾಳಿಸುವಂತೆ ಭೋರ್ಗರೆಯುತ್ತಿದ್ದವು. ಹಲಿಗೆ ಸನಾದಿಗಳ ಮೇಳಗಳಲ್ಲದೆ ನಾಲ್ಕಾರು ಕರಡಿಮಜಲಿನವರು ತಮ್ಮ ವನಪು ವೈಯಾರಗಳಿಂದ ಬಾರಿಸುತ್ತ ಮುಂದೆ ಸಾಗಿದ್ದರು. ಡೊಳ್ಳಿನವರು ತಮ್ಮ ಎಲ್ಲ ಕಲೆಯನ್ನೂ ತೋರಿಸುತ್ತ ಒಂದೇ ಸವನೆ ಧಿಮಿ ಧಿಮಿ ನಾದ ಮಾಡುತ್ತ ಓಲಾಡುತ್ತಿದ್ದರು. ಇಂತಪ್ಪ ಮಂಗಳ ವಾದ್ಯಗಳೊಡನೆ ಮೆರವಣಿಗೆಯು ಮಠದಿಂದ ಹೊರಟು ಮುಖ್ಯ ಬೀದಿಯನ್ನು ಸೇರಿತು. ನಾನಾ ತರದ ಕಲಾವಿದರು ತಮ್ಮ ಕಲೆಗಳನ್ನು ತೋರಿಸುವದರಲ್ಲಿ ಮಗ್ನರಾಗಿದ್ದರು. ನೂರಾರು ಬಿಚ್ಚುಗತ್ತಿ ವೀರರು ಕತ್ತಿಗಳನ್ನು ಝಳಪಿಸಿ ನಾನಾ ಪ್ರಕಾರ ಕಲಾತ್ಮಕವಾಗಿ ತಿರುಗಿಸುತ್ತಿದ್ದರು. ಕೋಲಾಟಿನವರು ಪದಗಳನ್ನು ಹಾಡುತ್ತ ಕುಣಿಕುಣಿದು ಕೋಲು ಹಾಕುತ್ತಿದ್ದರು. ಕುಮುಟೆ ಕುಣಿಸುವವರು ಇದೆಲ್ಲವನ್ನು ಮರೆತು ತಮ್ಮದೇ ಆದ ಒಂದು ತಾಳಗತ್ತಿನಲ್ಲಿ ತಮ್ಮತಮ್ಮ ಕುಮುಟೆಗಳನ್ನು ಕುಣಿಸುತ್ತಿದ್ದರು. ಅಂಬಾರಿ ಹೊತ್ತ ಆನೆಯಂತೂ

ಎಲ್ಲ ನಾದಗಳನ್ನೂ ಮೀರಿಸಿ ಘೀಳಿಡುತ್ತಿತ್ತು. ಪಲ್ಲಕ್ಕಿಯ ಎಡಬಲಗಳಲ್ಲಿ ಛತ್ರ ಚಾಮರಗಳಂತೂ ರಾಜ ವೈಭೋಗದ ಮೇರೆ ಮೀರಿದೆ ಎಂಬಂಶವನ್ನು ಎತ್ತಿ ತೋರಿಸುತ್ತಿದ್ದವು. ಸಾವಿರಾರು ಜ್ಯೋತಿಗಳಿಂದೊಡಗೂಡಿದ ಆರತಿಗಳನ್ನಿಡಿದ ಚಿಗಿದೆಡೆಯ ಬಾಲೆಯರು ಮಂಗಳಾರತಿಯ ಪದಗಳನ್ನು ಹಾಡುತ್ತ ಹಿಂದೆ ಹಿಂದೆ ಮಂದಗಮನೆಯರಾಗಿ ಬರುತ್ತಿದ್ದರು. ಮೆರವಣಿಗೆ ಹೊರಟು ರಾಜ ಬೀದಿಯಲ್ಲಿ ಬರುವ ಹೊತ್ತಿಗೆ ಕತ್ತಲಾಗಿ ಬಿಟ್ಟಿತ್ತು. ಊರ ತುಂಬೆಲ್ಲಾ ಪ್ರಜ್ವಲಿಸಿ ಬೆಳಗುವ ಸರದೀಪಗಳೇ ಕಾಣುತ್ತಿದ್ದವು. ಬಿಜಲಿಯ ಪ್ರಕಾಶದಲ್ಲಿ ಹೊರಟ ಗುರುಗಳ ಪಲ್ಲಕ್ಕಿಯಂತೂ ಆಕಾಶದ ಚುಕ್ಕಿಗಳಲ್ಲಿಯ ಚಂದ್ರಮನಂತೆ ನೋಡುವವರ ಕಣ್ಣಿಗೆ ತಂಪಾಗಿ ಕಾಣುತ್ತಿತ್ತು. ಪ್ರತಿಯೊಂದು ಮನೆಯ ಮುಂದೂ ಸಾರಣೆ ಮಾಡಿ ರಂಗವಲ್ಲಿ ಯನ್ನು ಹಾಯ್ದು ಹೂಮಾಲೆಯನ್ನಿಡಿದು ಮುತ್ತೈದೆಯರು ಸ್ವಾಮಿಗಳ ಪಲ್ಲಕ್ಕಿ ಆಗಮನವನ್ನೇ ನಿರೀಕ್ಷಿಸುತ್ತ ನಿಂತಿದ್ದರು. ಈ ತೆರನಾಗಿ ಪುರ ಪ್ರಮುಖ ಬೀದಿ ಗಳಲ್ಲಿ ಹಾಯ್ದು ಮೆರವಣಿಗೆ ತಿರುಗಿ ಮಠಕ್ಕೆ ಬಂದಬಳಿಕ ಹೂವಿನ ಹಾಸಿಗೆ ಯನ್ನು ಹಾಸಿ ನಿರ್ಮಿಸಿದ ಆಸನದ ಮೇಲೆ ಮಹಾಸ್ವಾಮಿಗಳನ್ನು ಆಸನಾ ರೂಢರನ್ನಾಗಿಸಿ ಕೀರ್ತನೆ ಭಜನೆಗಳು ಪ್ರಾರಂಭವಾದವು. ಕೋಗಿಲೆಯ ಕಂಠ ವನ್ನೂ ಮೀರಿಸುವ ಸುಶ್ರಾವ್ಯವಾದ ಕಂಠಗಳುಳ್ಳ ಗಾಯಕಿಯರ ಗಾಯನವೂ ದೇವಲೋಕದ ರಂಭಾ ಊರ್ವಶಿಯರಂತೆ ಶೋಭಿಸುವ ದೇವದಾಶಿಯರ ಕುಣಿತ ಗಳೂ ಪ್ರಾರಂಭವಾದವು. ಆದಿಕವಿಗೂ ವರ್ಣಿಸಲಸಾಧ್ಯವಾದ ಇಂಥ ವೈಭವ ಪೂರ್ಣ ಚರಪಟ್ಟಾಧಿಕಾರ ಮಹೋತ್ಸವದ ಸರ್ವ ಕಾರ್ಯಕ್ರಮಗಳೂ ಮುಗಿದ ತರುವಾಯ ಸಂಜೆಯ ಪೂಜೆಗೆ ಹೊತ್ತಾಗಲು ಗುರುಗಳು ಅಂದಿನ ಕಾರ್ಯಕ್ರಮ ಗಳನ್ನು ಮುಗಿಸಿ ಸ್ನಾನ ಮಾಡಿ ಪೂಜೆಯಲ್ಲಿ ತಲ್ಲೀನರಾದರು.

## ಪವಾಡಗಳು

ಚರಪಟ್ಟಾಧಿಕಾರಿ ಮಹೋತ್ಸವ ಮುಗಿದ ತರುವಾಯ ಚನ್ನವೃಷಭೇಂದ್ರರು ಗುರುಸನ್ನಿಧಿಯಿಂದ ಮಹದುಪದೇಶವನ್ನು ಹೊಂದಿ ಸ್ವಯಂ ಗುರುವಾಗಿ ಕರ್ತೃತ್ವ-ಭೋಕ್ತೃತ್ವದ ಸಂಪೂರ್ಣ ಜ್ಞಾನಹೊಂದಿ "ರಜ್ಜುಸರ್ಪ" ನ್ಯಾಯ ದಂತೆ ತನ್ನಲ್ಲಿ ಗುರುವನ್ನು ಕಂಡು ಹಗ್ಗದಲ್ಲಿ ಹಾವು ತೋರಿದಲ್ಲಿ ತಾವೇ ಗುರು ವಾದ ಬಳಿಕ ಅನೇಕಾನೇಕ ಪವಾಡಗಳನ್ನು ಜನತೆಗೆ ತೋರಿಸುತ್ತ ದೇವಲೀಲೆ

ಯಿಂದಿರುತ್ತಿದ್ದರು. ಅಂಥವುಗಳಲ್ಲಿ ಮುಖ್ಯವಾದ ಕೆಲವೊಂದು ಪವಾಡಗಳನ್ನು ಇಲ್ಲಿ ವರ್ಣಿಸಲಾಗಿದೆ. ಗುರುವಿನ ಉರುತರುವಾದ ಮಹಾಮಂತ್ರ ವೀರ್ಯವು ಶಿಷ್ಯನ ಕರ್ಣಯೋನಿಯಲ್ಲಿಳಿದು ಮನವು ಹರ್ಷದಿಂದ ಗರ್ಭತಾಳಿ ಸಮ್ಯಗ್ ಜ್ಞಾನವೆಂಬ ಮಗುವನ್ನು ಪಡೆದು ಸ್ವಹಂ ಗುರುವಾಗಿ ಅಜ್ಞಾನ ಅಂಧಃಕಾರದಲ್ಲಿ ಮುಳುಗಿದ ಶಿಷ್ಯವರ್ಗವನ್ನು ಈ ತೆರನಾಗಿ ಮೇಲೆತ್ತಿ ಉದ್ಧಾರಗೈದಿದ್ದಾರೆ. ಬೇಡಿ ದವರಿಗೆ ಬೇಡಿದಿಷ್ಟಾರ್ಥವನ್ನು ಕೊಟ್ಟು ಕಾಪಾಡಿದ ಸಾಕ್ಷಾತ್ ಶಿವಸ್ವರೂಪಿಗ ಳಾಗಿ ಮೆರೆದಿದ್ದಾರೆ.

## ಗುರುಶಿಷ್ಯರ ಪರಿ

ಸದ್ಗುರುವು ಶಿಷ್ಯರನ್ನು ಉದ್ಧಾರ ಮಾಡುವ ರೀತಿಯು ಮೂರು ತೆರನಾಗಿ ರುವುದು. ನೀರಿನಲ್ಲಿರುವ ಮೀನವು ತಾನು ಹಾಕಿದ ತನ್ನ ತತ್ತಿಯನ್ನು ಪ್ರೇಮ ದೃಷ್ಟಿಯಿಂದ ಒಂದೇ ಸಾರೆ ನೋಡಿದರೆ ಸಾಕು ಆ ತತ್ತಿ ಒಡೆದು ಒಮ್ಮೆಲೇ ಮೀನ ವಾಗಿ ಪರಿಣಮಿಸುವುದಲ್ಲದೆ ಮೀನವಾಗಿ ಸಂಚರಿಸಲು ಪ್ರಾರಂಭಿಸುವುದು. ಇದ ರಂತೆ ಗುರುವು ತನ್ನ ಶಿಷ್ಯನನ್ನು ಒಮ್ಮೆ ಸ್ನೇಹಭಾವದಿಂದ ಪ್ರೇಮ ದೃಷ್ಟಿ ಯುಳ್ಳವನಾಗಿ ನೋಡಿದರೆ ತೀರಿತು ಆತನು ಗುರುವೇ ಆಗುವನು.

"ಗುರುಕಟಾಕ್ಷ ವೇಲೇನೆ ಶಿವೋಭವತಿ ಮಾನವಾ" ಎನ್ನುವಂತೆ ಗುರುವಿನ ಕಟಾಕ್ಷ ಮಾತ್ರದಿಂದ ಶಿವನಾಗುವನು. ಇದು ಪ್ರಥಮ ರೀತಿ ಇದಕ್ಕೆ ಮತ್ಸ್ಯಾಂಡ ನ್ಯಾಯವೆನ್ನುವರು.

ಎರಡನೇದ್ದು ಸಮುದ್ರದೊಳಗೆ ಮನೆ ಕಟ್ಟಿಕೊಂಡು ಜೀವಿಸುವ ಆಮೆಯು ಇಟ್ಟ ತನ್ನ ತತ್ತಿಯನ್ನು ಒಂದೇ ಒಂದು ದಿನ ಮನ ಮುಟ್ಟಿ ತನ್ನ ತತ್ತಿಯ ಧ್ಯಾನ ಮಾಡಿದರೆ ಅದು ಕೂಡಲೇ ಒಡೆದು ಆಮೆಯ ಮರಿಯಾಗಿ ತಿರುಗಾ ಡುವುದು. ಇದರಂತೆ ಪರಮ ಗುರುವು ನಯವಿನಯವುಳ್ಳ ಶಿಷ್ಯನನ್ನು ಅಂತಃ ಕರಣ ಭಾವದಿಂದ ಒಂದೇ ದಿನ ನೆನೆದರೆ ಆತನು ಗುರುಮೂರ್ತಿಯೇ ಆಗುವುದ ರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ ಇದಕ್ಕೆ ಕಮಠಾಂಡ ನ್ಯಾಯವೆನ್ನುವರು.

ಮೂರನೆಯ ಪರಿಯಾವುದೆಂದರೆ ? ಗುರುಗಳು ಶಿಷ್ಯೋತ್ತಮನ ಮಸ್ತಕ ದಲ್ಲಿ ತನ್ನ ವರದ ಹಸ್ತವನಿರಿಸಿ ನೀನಂಜಬೇಡ ಎಂದು ಸ್ಪರ್ಶ ಮಾಡಿದರೆ ಸಾಕು.

ಆ ಶಿಷ್ಯನು ಕೂಡಾ ಗುರುವೇ ಆಗಿ ಪರಿಣಮಿಸುವನು. ವಿಶಾಲವಾದ ಆಕಾಶದಲ್ಲಿ ಸಂಚರಿಸುವ ಪಕ್ಷಿಗಳು ಗೂಡುಗಳಲ್ಲಿ ತತ್ತಿಗಳನ್ನಿಟ್ಟು ತಮ್ಮ ರೆಕ್ಕೆಗಳಿಂದ ಪೋಷಿಸಲು ತತ್ತಿಗಳನ್ನಿಟ್ಟು ತಮ್ಮ ರೆಕ್ಕೆಗಳಿಂದ ಪೋಷಿಸಲು ಅವು ಪಡೆದು ಮರಿಯಾಗಿ ದಿನೇ ದಿನೇ ಬೆಳೆದು ಹಾರಾಡುವವಷ್ಟೆ ? ಇದಕ್ಕೆ ಪಕ್ಷಾಂಡ ನ್ಯಾಯವೆಂದು ಹೆಸರು.

ಈ ಪ್ರಕಾರ ದೃಷ್ಟಿ-ಧ್ಯಾನ-ಸ್ಪರ್ಶಗಳೆಂಬ ಮೂರು ಪ್ರಕಾರದಿಂದ ಪೂಜ್ಯ ಗುರುಗಳು ಶಿಷ್ಯರನ್ನು ಉದ್ಧರಿಸುವರು. ಇದರಂತೆಯೇ ನಮ್ಮ ಗುರು ಚನ್ನವೃಷಭೇಂದ್ರರೂ ಕೂಡಾ ತಮ್ಮ ಶಿಷ್ಯವರ್ಗವನ್ನು ಉದ್ಧಾರಗೈದಿದ್ದಾರೆ ಈಗಲೂ ಮಾಡುತ್ತಿದ್ದಾರೆ. ಇನ್ನು ಮುಂದಾದರೂ ಮಾಡುತ್ತಿರಲೆಂದು ಅವರಲ್ಲಿ ಪ್ರಾರ್ಥಿಸಿ ಅವರ ಪವಾಡಗಳನ್ನು ವಿವರಿಸೋಣ.

## ಬರಡಾದ ಎಮ್ಮೆ ಹಯನ

ಒಂದು ದಿನ ಮಹಾ ಸ್ವಾಮಿಗಳು ಸಿಂದಗಿ ತಾಲೂಕಿಗೆ ಸೇರಿದ ಕರವಿನಾಳದ ಕರಬಸಪ್ಪ ಸಾಹುಕಾರ ಬ್ಯಾಳಿಯವರು ಕರೆದುಕೊಂಡು ಹೋಗಿದ್ದರು. ಮಹಾಶೈವಭಕ್ತರಾದ ಇವರು ತ್ರಿಕರಣ ಪೂರ್ವಕವಾಗಿ ಕರೆದೊಯ್ದು ದಂಪತಿಗಳೀರ್ವರೂ ಭಕ್ತಿ ಭಾವದಿಂದ ಸ್ನಾನಾದಿಪೂಜಗಳನ್ನು ಮಾಡಿಸಿ ಊಟಕ್ಕೆ ಮೃಷ್ಟಾನ್ನ ಭೋಜನ ಮಾಡಿಸಿದ್ದರು. ತ್ರಿಕಾಲ ಪೂಜಾನಿಷ್ಠರಾದ ಗುರುಗಳು ಮುಂಜಾನೆಯ ಶಿವಪೂಜೆಯ ನಂತರ ಊಟ ಮಾಡುತ್ತಿರಲಿಲ್ಲ ಹಣ್ಣು ಹಾಲುಗಳನ್ನು ಸ್ವೀಕರಿಸುವ ರೂಢಿಯಿತ್ತು. ಮಹಾಪೂಜಾ ಸಮಾರಂಭ ಮುಗಿದೊಡನೆ ದಂಪತಿಗಳು ಊಟ ಮಾಡಬೇಕೆಂದು ಬೇಡಿಕೊಂಡರು. ಆದರೆ ಗುರುಗಳು ಅದಕ್ಕೆ ಒಪ್ಪದೇ ಕುಡಿಯಲು ಹಾಲು ಬೇಡಿದರು. ಗುರುಮೂರ್ತಿಯನ್ನು ತೃಪ್ತಿಪಡಿಸಲೂ ಆಗದೇ ಒಪ್ಪಲೂ ಆಗದೇ ದಂಪತಿಗಳು ತೊಳಲಾಡುತ್ತಿದ್ದರು. ವಾಕ್ಯಸಿದ್ಧಿ ಪುರುಷರಾದ ಅವರನ್ನು ಹೇಗೆ ಸಮಾಧಾನ ಪಡಿಸಬೇಕೆಂಬುದೇ ತಿಳಿಯಲಿಲ್ಲ. ಅಂದಂತೆಯೇ ಆಗುವ ಅವರ ಬಾಯಿಂದ ಮತ್ತಾವ ವಾಕ್ಯ ಹೊರಬೀಳುವುದೋ ಎಂದು ಗಾಬರಿಗೊಂಡರು. ಇದು ಉಭಯ ಸಂಕಟಕ್ಕಿಟ್ಟುಕೊಂಡಿತು ಇತ್ತ ಕೆರೆ ಅತ್ತ ಭಾವಿಯಂತಾಯಿತು ಅವರ ಸ್ಥಿತಿ. ಏಕೆಂದರೆ

ಮನೆಯಲ್ಲಿ ಹೈನವಿರಲಿಲ್ಲ. ಹಿಂಡದ ಆಕಳು ಎಮ್ಮೆಗಳೇ ಇದ್ದವು. ಒಂದಂತೂ ಬರಡಾದ ಎಮ್ಮೆ ಸೊಕ್ಕಿಕೊಂಡು ನಿಂತಿತ್ತು. ಮತ್ತೊಬ್ಬರ ಮನೆಗೆ ಆಕಳನ್ನು ಓಡಿಸಿದ್ದರು. ಕೇಳಿದೊಡನೆಯೇ ಹಾಲು ಬರದ್ದನ್ನು ಗಮನಿಸಿದ ಗುರುಗಳು ಏನೆಂದು ವಿಚಾರಿಸುತ್ತ ಹೊರಗೇ ಬಂದು ಬಿಟ್ಟರು. ಯಾಕೋ ಕರಬಸ್ಯಾ ! ಹಾಲ ಬರಲಿಲ್ಲಲ ? ಅಂದದ್ದಕ್ಕೆ ನಡುಗುತ್ತ ಸಾಹುಕಾರ ಇಂತೆಂದು ನುಡಿದನು. ಅಪ್ಪಾಅವರೆ ! ಮನೆಯಲ್ಲಿ ಹೈನವಿಲ್ಲ ಮತ್ತೊಬ್ಬರ ಮನೆಗೆ ಹಾಲು ತರಲು ಕಳಿಸಿರುವೆ ತರುವುದರಲ್ಲಿ ಸ್ವಲ್ಪ ವಿಲಂಬವಾಗಿದೆ ಕ್ಷಮಿಸಬೇಕೆಂದು ಕರಜೋಡಿಸಿ ನಿಂತನು. ಗುರುಮೂರ್ತಿಯ ದೃಷ್ಟಿ ಆ ಬರಡೆಮ್ಮೆಯ ಮೇಲೆ ಹರಿಯಿತು. ಕೂಡಲೇ ಸಾಹುಕಾರನ ಧರ್ಮಪತ್ನಿಗೆ ಹಿಂಡುವಂತೆ ಆಜ್ಞಾಪಿಸಿದರು. ಗುರು ವಾಕ್ಯಕ್ಕೆ ಮರು ಉತ್ತರ ಕೊಡುವ ಎದೆಗಾರಿಕೆ ಯಾರಲ್ಲಿಯೂ ಇರಲಿಲ್ಲ. ಅವ ರಂದಂತೆಯೇ ಆಗುತ್ತಿರುವದರಿಂದ ಯಾರೂ ಎದುರು ಮಾತನಾಡುತ್ತಿರಲಿಲ್ಲ. ಅನಿವಾರ್ಯ ಪ್ರಸಂಗವಾದ್ದರಿಂದ ಆ ಮಹಾಸಾಧ್ವೀಮಣಿ ಒಂದು ತಂಬಿಗೆ ತೆಗೆದು ಕೊಂಡು ಬಂದು ಬೆನ್ನು ಚಪ್ಪರಿಸಿ ಹಿಂಡಲು ಕುಳಿತಳು. ಆ ಕ್ಷಣವೇ ಗೊಡ್ಡೆಮ್ಮೆ ತೊರೆ ಬಿಟ್ಟು ನಾಲ್ಕೂ ಮೊಲೆಗಳನ್ನು ತುಂಬಿಕೊಂಡು ನಿಂತಿತು. ಬರ್ರ ಬರ್ರ ಎಂಬ ಸಪ್ಪಳದೊಂದಿಗೆ ದೊಡ್ಡ ಗಡಿಗೆ ಹಾಲನ್ನೇ ಕರೆಯಿತು; ಎಲ್ಲರೂ ಗಾಬರಿ ಗೊಂಡು ಅದನ್ನೇ ನೋಡುತ್ತ ನಿಂತರು. ಅಂದಿನಿಂದ ಅನು ಹಿಂಡುವ ಎಮ್ಮೆ ಯಾಗಿ ಪರಿಣಮಿಸಿತು.

## ನೀರು ತುಪ್ಪಕ್ಕೆ ಪರಿವರ್ತಿಸಿದ್ದು

ಒಮ್ಮೆ ಚನ್ನವೃಷಭೇಂದ್ರ ಗುರುಗಳು ಕೆಲ್ಲೂರ ಎಂಬ ಗ್ರಾಮಕ್ಕೆ ಬಸವ ಪುರಾಣದ ಮಂಗಲ ಕಾರ್ಯಕ್ಕೆ ಹೋಗಿದ್ದರು. ಅಲ್ಲಿಯ ಭಕ್ತ ಜನಸ್ತೋಮ ಮಹಾಸ್ವಾಮಿಗಳನ್ನು ಕಂಡು ಪರಮಾನಂದ ಗೊಂಡಿದ್ದರು. ಇವರ ಮಹತ್ವ ಗಳನ್ನು ಕೇಳಿ, ಕಂಡರಿತು. ಭಯಭಕ್ತಿಯಿಂದ ಶಿರಬಾಗಿ ನಮಿಸುತ್ತ ಅವರ ದಿವ್ಯ ತೇಜಸ್ಸನ್ನು ಮನಸಾರೆ ಕಣ್ತುಂಬ ನೋಡಿ ಹರ್ಷಗೊಂಡಿದ್ದರು. ಬ್ರಹ್ಮ ತೇಜಸ್ಸಿನಿಂದ, ತಪಸ್ಸಿನಿಂದ ತುಂಬಿದ ಕಳಾಪೂರಿತ ದಿವ್ಯವದನದ ಮುಂದೆ ನೋಡಿ ಮಾಡಿದ ಗೊಂಬೆಗಳಂತೆ ಎಲ್ಲರೂ ವರ್ತಿಸುತ್ತಿದ್ದರು. ಮಹಾಸ್ವಾಮಿ ಗಳ ಶಿವಪೂಜಾ ಮುಗಿದ ಬಳಿಕ ಗಣಂಗಳು ಊಟಕ್ಕೆ ಕುಳಿತರು. ಜಂಗಮ ಪಂಕ್ತಿಯೊಡನೆಯೇ ಮಹಾಸ್ವಾಮಿಗಳ ಊಟೋಪಚಾರವೂ ನಡೆಯಿತು.

ಸಕಾಲಕ್ಕೆ ತುಪ್ಪ ಬಂದು ಇದಗಿಸೇ ಇದ್ದಾಗ ಜನರೆಲ್ಲ ಗಾಬರಿಗೊಂಡರು. ಸನಿಹ ದ ಒಂದು ಸಂತೆಯಾಗುವ ದೊಡ್ಡ ಊರಿಗೆ ಐದು ಕೊಡ ತುಪ್ಪ ತರಲು ಕಳಿಸಿದ್ದರು. ಗಣಂಗಳ ಪಂಕ್ತಿ ಚಾಲೂ ಆಗಬೇಕಾಗಿತ್ತು. ಆದರೆ ತುಪ್ಪದವ ಬಾರದೇ ಇದ್ದಾಗ ಹೇಗೆ ಮಾಡಬೇಕೆಂದು ಎಲ್ಲರೂ ಗಾಬರಿಯಿಂದ ಚಡಪಡಿಸ ಹತ್ತಿದರು. ವಿಷಯ ತಿಳಿದ ಗುರುಗಳು ಕೂಡಲೇ ಆ ಮನೆಯ ಮಾಲೀಕನನ್ನು ಕರೆದು ಪಾದೋದಕ ಕೊಟ್ಟು ಐದು ಜನರನ್ನು ಕೊಡದೊಂದಿಗೆ ಅಲ್ಲಿಯೇ ಸಮೀಪದಲ್ಲಿರುವ ಭಾವಿಯೊಂದಕ್ಕೆ ಕಳಿಸಿದರು. ಗಂಗಾದೇವಿಗೆ ಸುಮಂಗಲೆಯರು ಪೂಜೆ ಮಾಡಿ ಗುರುವಿನ ಪಾದೋದಕ ಭಾವಿಯಲ್ಲಿ ಹಾಕಿ ಜೈ ! ! ಚನ್ನವೃಷಭೇಂದ್ರ ಮಹಾರಾಜಕೀ ಜೈ ಎಂಬ ಝೇಂಕಾರದೊಂದಿಗೆ ಐದು ಕೊಡ ನೀರು ಜಗ್ಗಿ ತಂದು ಗಣಂಗಳಿಗೆ ಉಣಬಡಿಸಲು ಅದು ಶ್ರೇಷ್ಠವಾದ ತುಪ್ಪವಾಗಿ ಪರಿಣಮಿಸಿ ಘಮಘಮ ವಾಸನೆ ಬರುತ್ತಿತ್ತು. ಪೂಜ್ಯ ಗುರುಗಳ ಹಾಗೂ ಜಂಗಮಸ್ತೋಮದ ಊಟ ಮುಗಿದ ಬಳಿಕ ಪ್ಯಾಟಿಯಿಂದ ತಂದ ತುಪ್ಪ ಹೇರಿಕೊಂಡು ಕುದುರೆಯಾಳುಗಳು ಬಂದವು. ಕೂಡಲೇ ಗುರುಗಳು ಭಾವಿಯಿಂದ ತುಪ್ಪ ತಂದವರನ್ನು ಕೂಗಿ ಹೇಳಿದ್ದರಂತೆ "ಗಂಗಮ್ಮನಿಂದ ತುಪ್ಪ ಎರವಲಾಗಿ ತಂದಿದ್ದೇನೆ ಇದನ್ನು ಆ ಮಹಾತಾಯಿಯ ಉಡಿಯಲ್ಲಿ ಹಾಕಿಬರ್ರಿ" ಎಂದು ಅಪ್ಪಣೆ ಕೊಟ್ಟಾಗ ಆ ಕೊಡಗಳನ್ನು ಹೊತ್ತು ಒಯ್ದು ಅದೇ ಭಾವಿಯಲ್ಲಿ ಪೂಜೆ ಮಾಡಿ ಐದು ಕೊಡ ತುಪ್ಪ ಸುರುವಲಾಗಿ ತುಪ್ಪದ ಬದಲಿ ನೀರು ಭಾವಿಯಲ್ಲಿ ಬೀಳುವುದನ್ನು ಕಂಡು ಎಲ್ಲರೂ ಬೆಕ್ಕಸಬೆರಗಾಗಿ ಬೆರಳು ಕಚ್ಚಿ ನೋಡುತ್ತ ದಿಂಬ್ಮೂಢರಾಗ ನಿಂತು ಬಿಟ್ಟರು.

ಸಮುದ್ರಗಳು ನದಿಗಳ ಕೂಡುವಿಕೆಯನ್ನು ಬಯಸದಿದ್ದರೂ ಸ್ವಾಭಾವಿಕವಾಗಿ ಕೂಡುವಂತೆ ಶಿವಾಚಾರ ಸಂಪನ್ನನಾದ ಶಿವಯೋಗೀಶ್ವರನು ಇಚ್ಛೆ ಪಡದಿದ್ದರೂ ಶಿವನು ಅದನ್ನು ಪೂರೈಸಿಕೊಡುವಂತೆ ಇಚ್ಛಾ ಮಾತ್ರದಿಂದ ನೀರು ತುಪ್ಪವಾಗಿ ತುಪ್ಪ ನೀರಾಗಿ ಪರಿವರ್ತನೆ ಹೊಂದಿದವು. ಕೋಟಿ ಸಲ ಜಪ, ತಪ, ಧ್ಯಾನ, ಒಂದೇ ಒಂದು ಸಲ ಮಹಾಲಿಂಗದಲ್ಲಿ ಲೀನವಾಗುವುದು ಅದಕ್ಕೆ ಸಮನಾಗಿದೆ. ಬೀಜದಲ್ಲಿ ಮರ ಹೇಗೆ ಅಡಕವಾಗಿರುತ್ತದೋ ಹಾಗೆ ಮಹಾಲಿಂಗದಲ್ಲಿ ಸರ್ವವೂ ಅಡಕವಾಗಿರುತ್ತದೆ. ಆ ಲಿಂಗದಲ್ಲಿ ಲೀನವಾದಾಗ ಶಿವಾನಂದ

ಸುಪೂರ್ಣ ಶಿವನೇ ತಾನಾಗಿ ಪರಿವರ್ತಿಸಿ ಶಿವಯೋಗಿಯು ಲಿಂಗೈಕ್ಯ ಭಾವನ್ನುಳ್ಳ ವನಾಗಿರುವುದರಿಂದ ಭಾವನೆಚ್ಚೆ ಮಾತ್ರದಿಂದಲೇ ನೀರು ತುಪ್ಪವಾಯಿತು. ಅದರಂತೆ ಹಣಕೊಟ್ಟು ಖರೀದಿಸಿ ತಂದ ತುಪ್ಪ ನೀರಾಗಿ ಪರಿವರ್ತಿಸಿ ಗಂಗಾ ಮಾತೆಯ ಕಡ ತಂದ ನೀರನ್ನು ಕಡ ಕೊಟ್ಟ ಮಹಾಮಹಿಮಾಶಾಲಿ ಯೋಗೀ ಶ್ವರರನ್ನು ಎಷ್ಟು ಬಣ್ಣಿಸಿದರೂ ಕಡಿಮೆಯೇ. ಎರಡು ನಾಲಿಗೆಯುಳ್ಳ ಆದಿಶೇಷ ನಿಗೂ ಅಸಾಧ್ಯವಾದ ಶಿವಸ್ತುತಿ ಯಃಕಶ್ಚಿತ ನರನಾದ ನನ್ನಿಂದ ಅದು ಹೇಗೆ ಸಾಧ್ಯವಾದೀತು ?

## ಕೀರ್ತಿ ಧ್ವಜ

ಈ ಪ್ರಕಾರವಾಗಿ ಶ್ರೀಚನ್ನವೃಷಭೇಂದ್ರ ಯೋಗೀಶ್ವರರ ಇನ್ನೂ ಹಲ ವೊಂದು ಮಹತ್ವದ ಸಣ್ಣ ಪುಟ್ಟ ಪವಾಡಗಳು ಜರಗುತ್ತಲೇ ಇದ್ದವು. ಮಹಾ ಸ್ವಾಮಿಗಳ ಕೀರ್ತಿ ಸುತ್ತ-ಮುತ್ತಲಿನ ಹಳ್ಳಿ ಪಟ್ಟಣಗಳಲ್ಲಿ ಗ್ರಾಮ-ಗ್ರಾಮಗಳಲ್ಲಿ ಹಬ್ಬಿ ಸುವಾಸನೆಯಂತೆ ಪರಿಮಳ ಬೀರಿತು. ಅವರ ದೈವೀಶಕ್ತಿಯ ಮುಂದೆ ಎಲ್ಲ ಸಾಮಾನ್ಯಶಕ್ತಿಗಳೂ ಕಳೆಗುಂದಿ ಅವರಿಗೆ ತಲೆಬಾಗಿದವು. ಈ ಪುಣ್ಯ ಪುರುಷನ ಸಚ್ಚಾರಿತ್ರ್ಯವನ್ನು ಕೇಳಿ ಸುತ್ತಲು ನಾಡಿನ ಮೂಲೆ ಮೂಲೆಗಳಿಂದ ಜನರು ಬರುತ್ತಲೇ ಇದ್ದರು. ಗುರುಗಳ ಒಂದು ಮಹತ್ವ ಸಂಕೇತವೇನೆಂದರೆ "ಕಾಂಚಾಣಂ ಕಾರ್ಯಸಿದ್ಧಿ" ಎಂಬಂತೆ ಮೊದಲಿಗೇ ಶುಭಾ-ಅಶುಭ ಶಕುನ ಅವರ ದೃಷ್ಟಿಯಲ್ಲಿಯೇ ಹೊರಬೀಳುತ್ತಿತ್ತು. ಯಾವುದೇ ಒಂದು ರೋಗಿಯ ನ್ನಾಗಲಿ ಪಿಶಾಚಿಗ್ರಸ್ತರಾಗಲಿ, ಕುರುಡ ಕುಂಟರಾಗಲಿ, ಹೆಳವ ಮೂಕರನ್ನಾಗಲಿ, ಯಾರನ್ನೇಯಾಗಲಿ ಕರೆತರುವಾಗಲೇ ಅವರ ದೈವದ ಬಲಾಬಲ ಹೊರ ಬೀಳು ತ್ತಿತ್ತು. ಸ್ವಾಮಿಗಳು ನಿತ್ಯದಂತೆ ಬೆಳಗಿನ ಜಾವದ ಪೂಜೆಯನ್ನು ತೀರಿಸಿ ಕೊಂಡು ಗುರುಮಠದ ಹತ್ತಿರವಿದ್ದ ಪಡಶಾಲೆಯಲ್ಲಿ ಮಂಚದ ಮೇಲೆ ಮೃದು ಹಾಸಿಗೆಯ ಮೇಲೆ ಆಸನಾರೂಢನಾಗಿದ್ದಾಗ ತಲಬಾಗಿಲಲ್ಲಿಯೇ ಕರೆತರುವ ರೋಗಿಯ ಮೇಲೆ ಗುರುಬಸವಾರ್ಯರ ದೃಷ್ಟಿಹರಿಯುತ್ತಿತ್ತು. "ಯಾಕೋ ಇವನ್ಯಾಕ ಕರಕೊಂಡು ಬಂದ್ರಿ ? ಇವಳನ್ಯಾಕೆ ಕರೆತಂದ್ರಿ ? ಬನ್ರಿ ಕೂಡ್ರಿ ಎಂಬ ಪ್ರಶ್ನೆ ಅವರ ಬಾಯಿಯಿಂದ ಬಂದರೆ ಅದೇ ಅಮೃತವಾಣಿಯಾಗಿ ಹೊರ ಹೊಮ್ಮುತ್ತಿತ್ತು. ರೋಗಿಯ ರೋಗ ಏನೇ ಇದ್ದರೂ ಪರಿಹಾರವಾಯಿತೆಂದೇ

ತಿಳಿಯಬೇಕು. ಕೂಡಲೇ ಎದುರಿಗಿದ್ದ ಬೂದಿಯನ್ನು ಒಂದು ಕರಿದಾರವನ್ನೂ ಮಂತ್ರಿಸಿಕೊಟ್ಟು ಕಳಿಸುತ್ತಿದ್ದರು. ಎಂಥಾ ಭಯಾನಕ ದೊಡ್ಡ ದೊಡ್ಡ ರೋಗಗಳಿದ್ದರೂ ಅದರಿಂದಲೇ ಗುಣ ಮುಖವಾಗುತ್ತಿದ್ದವು. ಭಯಂಕರ ಭೂತ ಪ್ರೇತ ಪಿಶಾಚಿಗಳು ಕೂಡಾ ಅಷ್ಟರಿಂದಲೇ ಓಡಿ ಹೋಗುತ್ತಿದ್ದವು. ಚರಪಟ್ಟಾಧಿಕಾರಿಗಳ ದೃಷ್ಟಿ ತಾಕಿದರೆ ಸಾಕು ಭೂತಪ್ರೇತ ಪಿಶಾಚಿಗಳು ಹೇಳ ಹೆಸರಿಲ್ಲದೇ ಓಡಿ ಹೋಗುತ್ತಿದ್ದವು. ಅಲ್ಲದೆ ಅವರ ಕೈವಶವಾಗಿ ಅವರು ಹೇಳಿದಂತೆ ಕೇಳುತ್ತಿದ್ದರು.

**"ಗುರು ಕಟಾಕ್ಷ ಮಾತ್ರೇಣ ಶಿವೋಭವತಿ ಮಾನವಾಃ"**

ಎಂಬಂತೆ ಪೂಜ್ಯರ ದೃಷ್ಟಿ ಭಕ್ತರ ಮೇಲೆ ಬಿದ್ದೊಡನೆ ಅವರ ಇಷ್ಟಾರ್ಥವು ನೆರವೇರುತ್ತಿತ್ತು. ಕುರುಡರಿಗೆ ಕೇವಲ ಅವರ ಪಾದೋದಕ ಕಣ್ಣಲ್ಲಿ ಹಾಕಿಕೊಂಡು ಹೊಟ್ಟೆಯಲ್ಲಿ ತೆಗೆದುಕೊಳ್ಳುವುದರಿಂದಲೇ ಗುಣ ಹೊಂದಿದೆ. ಮಹಾ ರೋಗಗಳಿಗೂ ಅಷ್ಟೇ ಅವರ ಸ್ನಾನದ ನೀರನ್ನು ಹೊಟ್ಟೆಯಲ್ಲಿ ತೆಗೆದು ಕೊಳ್ಳುವುದರಿಂದ ಮೂರೇ ಮೂರು ತಿಂಗಳೊಳಗಾಗಿ ಸಾಯುವಂತಾದ ಕುಷ್ಟ ಹಾಗೂ ಮಹಾರೋಗಿಗಳು ಗುಣ ಹೊಂದಿದ್ದಾರೆ. ಆದರೆ ಅವರಿಂದ ಹೊರ ಬೀಳುವ ಅಶುಭ ಸೂಚನೆ ಏನೆಂದರೆ ರೋಗಿಯು ತಲಬಾಗಿಲಲ್ಲಿ ಬರುತ್ತಿರುವಾಗಲೇ ಛೀ ! ಛೀ ! ಛೀ ! ! ಅದನ್ನ ತರಬ್ಯಾಡ್ರಿ ನಡ್ರಿ ನಡ್ರಿ ತಗೊಂಡು ಹೋಗಿರಿ ಆ ಕಡೆ ! ಇಷ್ಟು ಅವರ ಬಾಯಿಯಿಂದ ಹೊರಬಂದಿತಿಲ್ಲೋ ತೀರಿತು. ಕೂಡಲೇ ಒಯ್ಯಲೇಬೇಕು. ಎದರು ಪಿಟ್ಟೆಂದು ಮಾತನಾಡುವಂತೆಯೇ ಇಲ್ಲ. ಮಾತಾಡಿದರೆ ಒಂದು ಹೋಗಿ ಮತ್ತೊಂದು ಕೆಡಕು ಕಾದಿರುತ್ತದೆಂದು ಎಲ್ಲರೂ ಬಲ್ಲರು. ಹೀಗಿರುವುದರಿಂದ ಯಾರಿಗೂ ಎದರು ನುಡಿಯುವ ಎದೆಗಾರಿಕೆಯೇ ಇರಲಿಲ್ಲ. ಅವರು ತಿರುಗಿ ಹೋದ ಕೂಡಲೇ ಆಗಲಿ, ಮೂರು ದಿನಗಳೊಳಗಾಗಿಯೇ ಯಾಗಲಿ, ಅಥವಾ ಹನ್ನೊಂದು ದಿನಗಳೊಳಗಾಗಿಯಾಗಲಿ ಹೆಚ್ಚೆಂದರೆ ಒಂದು ತಿಂಗಳೊಳಗಾಗಿ ತಿರುಗಿ ಹೋದ ರೋಗಿ ಸಾಯುತ್ತಿತ್ತು. ಈ ತೆರನಾಗಿ ಅವರು ಮೊದಲೇ ಶುಭಾ ಶುಭ ಶಕುನಗಳನ್ನು ನುಡಿಯುತ್ತಿದ್ದರು. ಚರಪಟ್ಟಾಧಿಕಾರಿಗಳಿಂದ ಪರಿಹಾರವಾದ ರೋಗಗಳು ಮಹತ್ವದ ಕಾರ್ಯಗಳು ಒಂದೇ ? ಎರಡೇ ? ಹೇಳಲು ಸಾಧ್ಯವಾದಷ್ಟು ಇವೆ. ನನಗೆ ತಿಳಿದ ಮಟ್ಟಿಗೆ ಇಲ್ಲಿ

ವರ್ಣಿಸಲಾಗಿದೆ. ಮಹಾರೋಗ, ಕುಷ್ಟರೋಗ, ಹುಣ್ಣುಗಳು, ಕೇಶಕೋಡೆ ಗಳು, ಉರಿ ಮೊದಲಾದ ಅನೇಕ ನಮೂನೆಯ ಮಾನವ ರೋಗಗಳು ಬತ್ತಿದ ಭಾವಿಗೆ ನೀರು, ಕಡಿಮೆ ಬಿದ್ದ ಪ್ರಸಾದ ಹೆಚ್ಚಿಸುವುದು ವೀರ ಸಿಂಹಾಸನವೇರಿದ್ದು ತ್ರಿಮೂರ್ತಿ ರೂಪ ತೋರಿದ್ದು, ಶಿವದೀಕ್ಷೆ ಕೊಟ್ಟಿದ್ದು, ಫಲಸಂತಾನ ಕೊಟ್ಟಿದ್ದು, ಪಿಶಾಚೋಚ್ಚಾಟನ, ತೇರು ಎಳೆಸಿದ್ದು ಅನೇಕಾನೇಕ ಭಯಂಕರವಾದ ಮಹತ್ವದ ಪವಾಡಗಳನ್ನು ಲೀಲಾಜಾಲವಾಗಿ ಮಾಡಿ ತೋರಿಸಿದ್ದಾರೆ.

ಒಮ್ಮೆ ಗುರುಗಳು ಭಾವಿಯ ಜಳಕ ತೀರಿಸಿಕೊಂಡು ಬರುತ್ತಿರುವಾಗ ಮಾರ್ಗ ಮಧ್ಯದಲ್ಲಿ ಒಂದು ಹೆಣ್ಣು ದೆವ್ವ ಸ್ತ್ರೀರೂಪ ಧರಿಸಿ ಬಂದು ನಮಸ್ಕರಿಸಿ ತಂತೆ, ಯಾರು ನೀನು ? ಎಂದು ವಿಚಾರಿಸಿದಾಗ ಅದೇ ಊರಿನ ಒಬ್ಬ ಸತ್ತ ಹೆಣ್ಣು ಮಗಳ ಹೆಸರು ಹೇಳಿತಂತೆ. "ಯಲಾ ನಿನ್ನೌನ" ಎಂದು ಗುರುಗಳು ನುಡಿಯುವದೊಂದೆ ತಡ ಓಡಿ ಹೋಯಿತಂತೆ. ಇದರಂತೆ ಅನೇಕ ಭೂತಗಳು ಸ್ವಾಮಿಗಳ ಸೇವೆ ಮಾಡಿದ್ದುಂಟು.

ಇವರ ಕೀರ್ತಿಯ ಹೆಸರು ಕೇಳಿ ಮಾಡಗಿಯಿಂದ ಸತ್ಯ ಶರಣರಾದ ಬಸ ಯ್ಯನವರು (ಈಗ ಶಹಾಪೂರದಲ್ಲಿ ಚರಬಸವ ಅಂತಾ ಅವರ ಗದ್ದುಗೆ ಇರು ವದು) ಬಂದು ಮಹಾಸ್ವಾಮಿಗಳಿಂದ ಗುರುಬೋಧ ಪಡೆದು ಸಂಸಾರದ ಜಂಜ ಡದಿಂದ ಕಡೆಗೆ ಇರಹತ್ತಿದರಂತೆ ಅಲ್ಲದೆ ಯಾವಾಗಲೂ ಮಾಗಣಗೇರಿಗೆ ಬರುತ್ತ ಹೋಗುತ್ತ ಇದ್ದರು. ಪ್ರತಿ ಶ್ರಾವಣ ಮಾಸಕ್ಕಂತೂ ತಪ್ಪದೇ ಸೇವೆ ಗೈಯುತ್ತ ಶ್ರಾವಣದ ಕಾರ್ಯಕ್ರಮಗಳಲ್ಲಿ ಈಶ ಸೇವೆ ಮಾಡುತ್ತ ಇರುತ್ತಿದ್ದರು. ಎಲ್ಲ ಭಕ್ತಾದಿಗಳು ಕೂಡಿಕೊಂಡು ಪ್ರತಿ ಶ್ರಾವಣಕ್ಕೊಮ್ಮೆ ಬಸವ ಪುರಾಣ ತಿಂಗಳ ಅಮವಾಸಿಗಿಗೆ ಜಂಗಮಾರಾಧನೆ ಮೆರವಣಿಗೆ ಮೊದಲಾದ ದೊಡ್ಡ ಉತ್ಸವಗಳೊಂದಿಗೆ ಭರ್ಜರಿ ಖರ್ಚು ಮಾಡುತ್ತಿದ್ದರು. ಈ ಒಂದು ತಿಂಗಳಂತೂ ಗುರುಗಳ ಪಾದ ಪೂಜಾ ಸಮಾರಂಭ ಘನವೈಭವ ಪೂರಿತವಾಗಿ ನೆರವೇರುತ್ತಿತ್ತು ಬಸಯ್ಯನವರು ಸುಮ್ಮನೆ ಕುಳಿತುಕೊಳ್ಳದೇ ನಾರಿನಿಂದ ಹಗ್ಗ, ಜಾಳಿಗೆ, ಚಿಕ್ಕ ದಾವೆ ಮೊದಲಾದವುಗಳನ್ನು ಸಾಕಷ್ಟು ಹೊಸೆಯುತ್ತಿದ್ದರು. ಅವು ಈಗಲೂ ಮಠದಲ್ಲಿ ಅವನ್ನು ಕಾಣಬಹುದು. ಬಸಯ್ಯನವರು "ಕಾಯಕವೇ ಕೈಲಾಸ" ಎಂಬಂತೆ ಕಾಯಕದಿಂದಲೇ ಉಪಜೀವನ ಸಾಗಿಸುತ್ತಿದ್ದರು. ಅವರ ಗದ್ದುಗೆ ಶಹಾಪೂರದಲ್ಲಿರುವದು.

ಇದೇ ರೀತಿ ಕೆಂಭಾವಿಯ ಹಿರೇಮಠದ ಕಂತಯ್ಯ ಸ್ವಾಮಿಯು ನಿತ್ಯದಲ್ಲಿ ಕಾಯಕಮಾಡಿ ಬಂದ ಅತಿಥಿಗಳಿಗೆ ಪ್ರಸಾದಕೊಟ್ಟು ತಾನೂ ಉಣ್ಣುತ್ತಿದ್ದನು. ಒಮ್ಮೆ ಗುರುಗಳಲ್ಲಿಗೆ ಬಂದು ನನಗೆ ಉಪದೇಶ ಮಾಡಬೇಕೆಂದು ಬೇಡಿಕೊಂಡರು. ಆಗ ಗುರುಗಳು ಅವನ, ಆಚಾರ, ವಿಚಾರ, ನಯ ವಿನಯ ಭಕ್ತಿ ಇವುಗಳೆಲ್ಲ ವನ್ನು ಪರೀಕ್ಷಿಸಿ ಕಂತಪ್ಪನಿಗೆ ಉಪದೇಶವನ್ನು ಮಾಡಿ ಕಳಿಸಿದರು. ಈಗ ಕಂತಯ್ಯಸ್ವಾಮಿಯ ಗದ್ದುಗೆ ಕಡಿವಾಳದಲ್ಲಿರುವದು.

ಒಮ್ಮೆ ಮಹಾಸ್ವಾಮಿಗಳು ಪುರಾಣದ ನಿಮಿತ್ಯವಾಗಿ ಪರ ಗ್ರಾಮಕ್ಕೆ ಒಂದು ತಿಂಗಳ ಮಟ್ಟಿಗೆ ಹೋಗಿದ್ದರು. ಇಲ್ಲಿ ಮನೆಯಲ್ಲಿ ಅವರ ತಾಯಿಯ ವರಿಗೆ ಆರಾಮವಿರಲಿಲ್ಲ. ವಯಸ್ಸು ಹೋಗಿ ಹಣ್ಣಾಗೊಗಲು ಇಳಿಬಿದ್ದು ನಡು ಬಾಗಿದ ಅವರು ಇನ್ನೆಷ್ಟು ದಿನವಿರಲು ಸಾಧ್ಯ ? ಕಡೆಯಕಾಲ ಸಮೀಪಿಸಿತು. ಮಹಾಸ್ವಾಮಿಗಳು ಬರುವುದು ಇನ್ನೂ ಒಂದು ವಾರ ಇರುವಾಗಲೇ ಮುದುಕಿಗೆ ಮಾತು ನಿಂತವು. ಇಹಲೋಕದ ಸಂಪರ್ಕ ತಪ್ಪಿತು. ಕೇವಲ ಗುರುಮೂರ್ತಿ ಯನ್ನು ನೆನೆಸುತ್ತ ಜೀವ ಹಿಡಿದುಕೊಂಡಿತ್ತು. ಈ ಸುದ್ದಿ ಕೂಡಲೇ ಗುರು ಗಳಿಗೆ ಮುಟ್ಟಿತು. ಆದರೂ ಅವರು ಬರಲಿಲ್ಲ. ತಮ್ಮ ಕೆಲಸ ಮುಗಿದ ಬಳಿಕವೇ ನಾಗಣಗೇರಿಗೆ ತಿರುಗಿ ಬಂದರು. ಒಂದು ವಾರ ಕಾಲವಾದರೂ ಮುದುಕಿ ಜೀವ ಹಿಡಿದಿದ್ದು ಸ್ವಾಮಿಗಳು ಬಂದೊಡನೆಯೇ ಅವರ ಪಾದೋದಕ ಸ್ವೀಕಾರ ಮಾಡಿ ಹೋಗುವೆ ಚೆನ್ನಾ ಎಂದು ಹೇಳಿ ಜೀವಬಿಟ್ಟಳು. ತಂದೆ ತಾಯಿಗಳೀ ರ್ವರೂ ಲಿಂಗೈಕ್ಯರಾಗಿ ಕೈಲಾಸ ಸೇರಿದರು.

ಆಗ ಮನೆಯಲ್ಲಿ ಶ್ರೀಗುರು ಚನ್ನ ವೃಷಭೇಂದ್ರರ ಜೊತೆಗೆ ಅವರ ತಂಗಿ ಗುರುಲಿಂಗಮ್ಮನವರು ಇರುತ್ತಿದ್ದರು. ಇನ್ನೂಳಿದ ತಮ್ಮಂದಿರು ಬೇರೆಯಾಗಿ ತಮ್ಮ ತಮ್ಮ ಹೆಂಡರು ಮಕ್ಕಳೊಂದಿಗೆ ವಾಸವಾಗಿದ್ದರು. ಮಠದಲ್ಲಿ ಸ್ವಾಮಿ ಗಳು ಹಾಗೂ ತಂಗಿ ಗುರುಲಿಂಗಮ್ಮನವರು ಇರುತ್ತಿದ್ದರು. ಗುರುಲಿಂಗಮ್ಮ ನವರು ಬಾಲ್ಯಾವಸ್ಥೆಯಲ್ಲಿಯೇ ವೈಧವ್ಯವನ್ನು ಸ್ವೀಕರಿಸಿ ಮನೆಯಲ್ಲಿಯೇ ಕುಳಿತಿದ್ದರು. ಗುರುಗಳ ಊಟೋಪಚಾರದ ವ್ಯವಸ್ಥೆಯಂತೂ ಇವರಿಗೇ ಸೇರಿದ್ದು ಮುಕ್ತ ಮನಸ್ಸಿನಿಂದ ಗುರುಗಳ ಸೇವೆ ಮಾಡುತ್ತ ಅವರು ಕಾಲ ಕಳೆ ಯುತ್ತಿದ್ದರು.

## ನೀರಿನ ದೀಪ

ಹೀಗಿರುತ್ತಿರಲು ಒಂದು ದಿನ ಗುರುಗಳ ಶಿಷ್ಯರಾದ ಕಾಚಾಪೂರದ ಗುರುಲಿಂಗಪ್ಪಗೌಡ ಬಿರಾದಾರ ಇವರು ತಮ್ಮ ಪುತ್ರ ಭೀಮರಾಯನ ಲಗ್ನದಲ್ಲಿ ಶರಣಬಸವೇಶ್ವರ ಪುರಾಣ ಹಚ್ಚಿದ್ದರು. ಪುರಾಣದ ಮಂಗಲ ಕಾರ್ಯಕ್ಕೂ ಹಾಗೂ ಮಗನ ಲಗ್ನದ ಕಾರ್ಯಕ್ಕೂ ಗುರುಗಳನ್ನು ಬರಮಾಡಿಕೊಂಡಿದ್ದರು. ಪುರಾಣ ಹಾಗೂ ಲಗ್ನದ ಸಂಭ್ರಮದ ಮನೆಯಲ್ಲಿಯೇ ಭಯ ಭಕ್ತಿಯಿಂದ ಗದ್ದುಗೆಯನ್ನು ಹಾಕಿ ನಮಸ್ಕರಿಸಿ ತಮ್ಮ ಯಾವತ್ತು ಕಷ್ಟ ಸುಖಗಳನ್ನು ಗುರುಮೂರ್ತಿಯ ಮುಂದೆ ತೋಡಿಕೊಂಡರು. ಈ ಪರಮ ಭಕ್ತನ ಮನಸ್ಸನ್ನು ಸಮಾಧಾನ ಪಡಿಸುತ್ತ ಕೆಲವೊಂದು ಹಿತ ವಚನಗಳನ್ನು ಹೇಳಿದರು. ನಶ್ವರವಾದ ಈ ದೇಹ ಕಾಮ, ಕ್ರೋಧ, ಮದ, ಮತ್ಸರ, ಲೋಭ, ಮೋಹಗಳೆಂಬ ಷಡ್ಗುಣಗಳನ್ನು ಹೊಂದಿ ವಿಷಮಯ ಸಂಸಾರವನ್ನು ಕಟ್ಟಿ ವಿಷಜ್ವಾಲೆಗಳನ್ನೇ ಕಾರುತ್ತ ಮಾನವ ಭಯಂಕರವಾದ ಪಾಪಕೃತ್ಯಗಳನ್ನು ಎಸಗುತ್ತ ನರಕ ಸಮಾನವಾದ ಈ ಜೀವನದುದ್ದಕ್ಕೂ ಹೊರಳಾಡುತ್ತ ಅನೇಕ ಕಷ್ಟ ಸಹಿಷ್ಣುಗಳನ್ನುಣ್ಣುತ್ತ ಅಪಾರವಾದ ದುಃಖಕ್ಕೀಡಾಗಿ, ತಾನು ತನ್ನದು, ಹೆಂಡತಿ, ಮಕ್ಕಳು, ಮನೆಮಾರು, ಬದುಕುಬಾಳುವೆ, ವ್ಯಾಪಾರ, ಒಕ್ಕಲುತನ, ಅಧಿಕಾರ, ವಿದ್ಯೆ, ವಾರ್ತೆ, ಕೀರ್ತಿ, ಊಟನಿದ್ರೆ, ವಿಷಯ ಸುಖ, ಸಮಾಜ, ಅಜ್ಞಾನ ಧರ್ಮ, ನೀತಿ, ಪ್ರೇಮ, ಸಹಕಾರ, ಉಪಕಾರ, ನೆಲ, ನೀರು, ಗಾಳಿ, ಗಿಡ ಮರ, ಹೆಣ್ಣು, ಗಂಡು ಈ ಮೊದಲಾದ ಎಲ್ಲಾ ವಿಷಯಗಳಲ್ಲಿ ಸಿಲುಕಿ ವಿಪರೀತ ಕಷ್ಟದಲ್ಲಿ ಸಿಕ್ಕು ನರಳಾಡುತ್ತ ಗಾಯಗೊಂಡ ಹುಳದಂತೆ ಒದ್ದಾಡುವುದಕ್ಕಿಂತ ಸಂಸಾರದಲ್ಲಿದ್ದರೂ ಇಲ್ಲದಂತೆ ಇರಬೇಕು. ಯಾವಪ್ರಕಾರ ಕಮಲವು ಸರೋವರದಲ್ಲಿ ಇದ್ದರೂ ಸಹ ನೀರಿನಿಂದ ಹೇಗೆ ನಿರ್ಲಿಪ್ತವಾಗಿರುವದೋ ಅದರಂತೆ ಸಂಸಾರದಲ್ಲಿದ್ದರೂ ಕೂಡಾ ಸಂಸಾರದಿಂದ ನಿರ್ಲಿಪ್ತನಾಗಿರಬೇಕು. ಸಂಸಾರದ ಬಗ್ಗೆ ಅಕ್ಕ ಮಹಾದೇವಿ ಸುಂದರವಾಗಿ ಹೇಳಿದ್ದಾಳೆ. -

"ಸಂಸಾರವೆಂಬ ಹಗೆಯಯ್ಯ ತಂದೆ
ಎನ್ನ ವಂಶ ವಂಶ ತಪ್ಪದೆ ಅರಿಸಿಕೊಂಡು ಬರುತ್ತಿದೆಯಯ್ಯ !

ಎನ್ನ ಪಸರುಸಿ ಯರಸಿ ಹಿಡಿದು ಕೊಳ್ಳುತ್ತಿದೆಯಯ್ಯ ।
ನಿಮ್ಮ ಮರೆಹೊಕ್ಕೆ ಕಾಯಯ್ಯ ।
ಎನ್ನ ಭಿನ್ನ ಪವನವಧಾರ, ಚನ್ನಮಲ್ಲಿಕಾರ್ಜುನಾ"

ಸಂಸಾರ ಚಕ್ರನ ತಿರುಗುಣಿ ಮಡುವಿನ ಸುಳಿಯಲ್ಲಿ ಸಿಕ್ಕವರಿಗೆ ಭವಾಂತರಗಳು ಬರುವದು ಸಹಜವಷ್ಟೆ. ಆದ್ದರಿಂದ ಈ ಸಂಸಾರ ನಮಗೆ ವೈರಿಯಾಗಿದೆ. ಇದು ಎನ್ನ ಪಂಸ ಪರಂಪರಾಗತವಾಗಿ ಬೆನ್ನತ್ತಿ ಅರಿಸಿಕೊಂಡು ಬರುತ್ತಿದೆ ಹಿಡಿದುಕೊಳ್ಳುತ್ತಿದೆ. ನಿಮ್ಮಲ್ಲಿ ಶರಣು ಹೋಗುವೆನು, ನನ್ನ ಬಿನ್ನಪವನು ಕೇಳಿ ನನ್ನನ್ನು ಕಾಪಾಡು ತಂದೆ ಎಂದಿದ್ದಾಳೆ.

"ಅಗಸರ ಸೀರೆಗೆ ಅಗಸ ತಡಬಡಗೊಂಬಂತೆ
ಹೊನ್ನೆನ್ನದು, ಹೆಣ್ಣೆನ್ನದು, ಮಣ್ಣೆನ್ನದು ಎಂದು
ನೆನೆ ನೆನೆದು ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆನಯ್ಯ
ಚನ್ನಮಲ್ಲಿಕಾರ್ಜುನಯ್ಯ"

ಸೃಷ್ಟಿಯ ಸರ್ವ ವಸ್ತುಗಳೂ ಶಿವನವು ಎಂಬುದನ್ನು ಮರೆತು ಹೊನ್ನು, ಹೆಣ್ಣು, ಮಣ್ಣುಗಳು ನನ್ನವೆಂದು ಹೇಳುವ ಮಾನವನು ಅಗಸನಂತೆ ಇರುವನು. ಯಾಕಂದರೆ ಅಗಸನು ಬೇರೆಯವರ ಸೀರೆಗಳನ್ನು ತೊಳೆಯಲಿಕ್ಕೆ ತಂದಾಗ ಅವನ್ನೇ ತನ್ನ ಹೆಂಡತಿಗೆ ಉಡಿಸಿ ಇನ್ನೊಬ್ಬ ಅಗಸನೊಡನೆ ಚಪಲದ ಮಾತುಗಳನ್ನಾಡುವಂತೆ ಹೊನ್ನು, ಹೆಣ್ಣು, ಮಣ್ಣುಗಳು ನನ್ನದೆಂದು ತಿಳಿದು ಶಿವನನ್ನರಿಯದ ಪಾಡು ನನ್ನದಾಗಿದೆ ತಂದೆ ಕಾಪಾಡು ಎಂದು ಹೇಳಿದ್ದಾಳೆ. ಅಣ್ಣ ಬಸವಣ್ಣನಂತ "ಸರ್ವಂ ಜಗನ್ಮಿಥ್ಯಾ" ಎಂದು ಹೇಳುತ್ತ ಎಲ್ಲವೂ ಕಾರಣ ಮಾತ್ರ ಕಾರಣೀಭೂತನಾದ ನೀನು ಕಡೆಗೇ ಇರಬೇಕು. ಹೇಗೆಂದರೆ ಕೊಡುವವನು ಶಿವ ಮಾಡುವವನು ಶಿವ, ತೆಗೆದುಕೊಳ್ಳುವವನು ಶಿವ, ಯಾವ ರೀತಿ ಮಳೆ ಬರುವಾಗ ಅದೆಷ್ಟೋ ನೀರ ಗುರುಳೆಗಳು ಏಳುವವು ಅವುಗಳೆಲ್ಲದರಲ್ಲಿಯೂ ಕಾಣುವ ನಿರ್ಭಯಲಾದ ಆಕಾಶವೊಂದೇ ಗುರುಳೆಗಳು ಒಡೆದು ಛಿದ್ರವಾಗಿ ಹೋದಾಗ ಆಕಾಶವೊಡೆದು ಛಿದ್ರವಾಗುವುದೇ ? ಇಲ್ಲ ಹಾಗೆಯೇ ಆತ್ಮನಾದರೂ ಇರುವನು. ನಾವೆಲ್ಲ ಕೋಟಿ ಕೋಟಿ ಜನ ನೀರ ಗುರುಳೆಗಳಿದ್ದಂತೆ ನಮ್ಮೆಲ್ಲರಲ್ಲಿಯೂ ಕಾಣುವ ಆತ್ಮನು ಒಂದೇ ಯಾವಾಗಲೂ ಶಾಶ್ವತವಾಗಿ

ಇರುವ ಪರಮ ಆತ್ಮ ಹಿಂದೂ ಇತ್ತು. ಈಗಲೂ ಇದೆ. ಮುಂದೂ ಇರುತ್ತದೆ. ಹೀಗೆ ಚಿರಂತನವಾದ ಆತ್ಮ ಚಿಂತನೆಯಲ್ಲಿಯೇ ಕಾಲ ಕಳೆಯಬೇಕು. ನಾನು ಯಾರು ? ಯಾತಕ್ಕಾಗಿ ಬಂದೆ ? ಏನು ಮಾಡಬೇಕು ? ಎಂಬುದನ್ನು ಅರಿತರೆ ಸಾಕು. ಎಲ್ಲಾ ಮಾಡುವವ ಅವನೆ ನಿನ್ನ ಸರ್ವಸ್ವವೆಲ್ಲವೂ ಅವನವು ಅಣು ರೇಣು ತೃಣಕಾಷ್ಟಗಳಲ್ಲಿಯೂ ಅಡಕವಾದ ಆತ್ಮನಿಂದಲೇ ಎಲ್ಲವೂ ನಡೆಯುತ್ತದೆ. ನೀನು ನಿಮಿತ್ಯ ಮಾತ್ರ ನಿನ್ನ ಕರ್ತವ್ಯವನ್ನು ಮಾತ್ರ ನೀನು ಮರೆಯಬೇಡ. ಹುಟ್ಟಿ ಬಂದಿರುವೆ ! ಅರಿಯದೇ ಹೆಂಡತಿ ಮಕ್ಕಳನ್ನು ಪಡೆದಿರುವಿ ಅವರ ಹಾಗೂ ನಿನ್ನ ಬದುಕುವ ದಾರಿಯನ್ನು ಹುಡುಕು. ಅವಕ್ಕೆ ಬೇಕಾಗುವುದನ್ನು ಸುಮಾರ್ಗದಿಂದ ಸಾಗಿಸು. ಈಗ ಹೊಲದಲ್ಲಿ ರಾಬಮಾಡಿ ಬರುತ್ತೀ ಅಂದರೆ ಬತ್ತಲು ಭೂಮಿ ಹದಮಾಡಿ ಬರುತ್ತಿ ? ಮಳಿ ನಿನ್ನದಲ್ಲ ದೇವರು ಕೊಡುತ್ತಾನೆ. ಹಾಗೆಯೇ ಹಸಿ ಆದದ್ದನ್ನು ಕಂಡು ಬಿತ್ತಿ ಬರುತ್ತಿ. ಅಲ್ಲಿಯೇ ಕುಳಿತು ಬೆಳೆಮಾಡಿ ಬೆಳೆಸಿ ಕಾಳು ಮಾಡುವುದು ನಿನ್ನ ಕೆಲಸವಲ್ಲ ಅದು ದೇವರದು. ಹಾಗೆಯೇ ಕಾರಣ ಮಾತ್ರ ನೀನು ಕೆಲಸ ದೇವರದು. ಇದರಂತೆ ತಿಳಿದು ಆದದ್ದೆಲ್ಲ ಒಳ್ಳೆಯದೇ ಎಲ್ಲವೂ ಅವನದೇ ಎಂದು ತಿಳಿದು ಸುಖವನ್ನು ಬಯಸದೇ ದುಃಖವನ್ನೂ ಬಯಸದೇ ನಿರ್ಲಿಪ್ತನಾಗಿ ಯಾವುದನ್ನೂ ಹಚ್ಚಿಕೊಳ್ಳದೇ ಬಾಳುವೆ ಸಾಗಿಸುತ್ತ ಗುರು ಹಿರಿಯರಲ್ಲಿ ಜಂಗಮರಲ್ಲಿ ಭಯ ಭಕ್ತಿಯನ್ನು ತೋರಿಸುತ್ತ ಗುರು ಹಿರಿಯರಲ್ಲಿ ಆದರವುಳ್ಳವನಾಗಿ ಸದಾ ಲಿಂಗಾಂಗವುಳ್ಳವನಾಗಿ ಆತ್ಮಚಿಂತನೆಯಲ್ಲಿ ಕಾಲಕಳೆಯುತ್ತ ದಿನ ನಿತ್ಯದ ಕರ್ಮಗಳನ್ನಾಚರಿಸುತ್ತ ಕರ್ತವ್ಯನಿಷ್ಠನಾಗಿರು. ಅಂದರೆ ಸುಖವಾಗಿ ಬಾಳಬಹುದು. ಎಂದು ಹೇಳುತ್ತಿದ್ದಂತೆಯೇ ಪುರಾಣ ಮಂಗಲದ ಸಮಯವಾಗಲು ಗುರುಗಳು ಎದ್ದು ಹೋಗಿ ಪುರಾಣದ ಗದ್ದುಗೆಯ ಮೇಲೆ ಆಸೀನರಾದರು. ಆಗಲೇ ಅಲ್ಲಿ ಕುಳಿತ ಪುರಾಣಿಕರು ತಮ್ಮ ಸುಸ್ರಾವ್ಯವಾದ ಕಂಠದಲ್ಲಿ ಪುರಾಣದ ಮಂಗಲ ಅಧ್ಯಾಯವನ್ನು ಓದಲು ಪ್ರಾರಂಭಿಸಿದರು. ಸಂಗೀತ ಮೇಳದವರು ರಾಗಬದ್ಧವಾಗಿ ತಾಳ ಲಯಗಳೊಡನೆ ಮಧುರ ಸ್ವರ ಹೊರಡಿಸುತ್ತಿದ್ದರು. ನೆರೆದ ಜನಸ್ತೋಮ ಜಯ ಜಯಕಾರ ಮಾಡುತ್ತಿರುವಾಗ ಅಧ್ಯಾಯದ ಸಾರಾಂಶ ಹೇಳಲನುವಾದರು. ಈ ಪ್ರಕಾರ ಪುರಾಣ ಹೇಳುತ್ತಿರುವಾಗ ಮುಂದಿಟ್ಟ ನಂದಾದೀವಿಗೆಯಲ್ಲಿ ಎಣ್ಣೀ ತೀರಿ ದೀಪ ನಂದುವಂತಾದಾಗ ಗುರುಗಳು ಅಲ್ಲಿಯೇ ಇಟ್ಟ

ನೀರನ್ನೇ ಹಣತೆಯಲ್ಲಿ ಹಾಕಿದರು. ಆಗ ನೀರು ಎಣ್ಣೆಯಾಗಿ ಪರಿವರ್ತನೆ ಹೊಂದಿ ನೀರಿನಿಂದ ತುಂಬಕೊಂಡ ಹಣತೆ ತಾಸೆರಡು ತಾಸು ಪುರಾಣ ಮಂಗಲ ವಾಗುವವರಿಗೂ ಝಗಿ ಝಗಿಸುತ್ತ ಉರಿಯಿತು. ಆ ಮನೆಯ ಯಜಮಾನರು ಪುರಾಣಕ್ಕೆ ಆಗಮಿಸಿದ ಸುತ್ತ ಮುತ್ತಲಿನ ಜನರು ಮೊದಲಾದ ಪುರಾಣಿಕರೂ ನೋಡಿ ಬೆರಗಾದರು. ನಂತರ ಮಹಾ ಗುರುಗಳು ಪೂಜೆ ಊಟ ತೀರಿಸಿ ಕೊಂಡು ಊರಿಗೆ ಬರುವಂತವರಾದರು.

ಇದೇ ಪ್ರಕಾರ ಒಮ್ಮೆ ಗುರುಗಳು ತಮ್ಮ ಭಕ್ತನಾದ ಖಾನಾಪೂರದ ಮಡಿವಾಳಯ್ಯ ಸ್ವಾಮಿಗಳ ಮನೆಗೆ ಹೋಗಿದ್ದರು. ಅವರು ಪ್ರೀತ್ಯಾದರಗಳಿಂದ ಗುರುಗಳನ್ನು ಬರಮಾಡಿಕೊಂಡು ಬಡತನದಲ್ಲಿಯೇ ಚಿಕ್ಕದಾದ ಮನೆಯಲ್ಲಿ ಊರಿಗೆ ಹಿರಿಯಮತದವನಾಗಿ ಭಯ ಭಕ್ತಿಯಿಂದ ಗದ್ದುಗೆಯನ್ನು ಹಾಕಿ ನಮ ಸ್ಕರಿಸಿ ಕುಳಿತುಕೊಂಡರು. ಗುರುಗಳ ನಂಬಿಗೆಯ ಭಕ್ತನಾದ ಮಡಿವಾಳಯ್ಯನ ಸುಖ ದುಃಖಗಳನ್ನು ವಿಚಾರಿಸಿದರು. ಆಗ ಮಧ್ಯಾಹ್ನದ ಪೂಜೆ ವೇಳೆಯಾದ್ದ ರಿಂದ ಗುರುಗಳು ಬಹಳ ಹೊತ್ತು ಮಾತನಾಡದೇ ಸ್ನಾನಕ್ಕೆದ್ದರು. ಇತ್ತ ಸತಿ ಪತಿಗಳಿಬ್ಬರೂ ಮಡಿಯಿಂದ ಗುರುಗಳ ಶಿವಪೂಜಾ ಸಾಮುಗ್ರಿಗಳನ್ನು ಸಜ್ಜು ಗೊಳಿಸುತ್ತ ಗದ್ದುಗೆಯನ್ನು ಸಿದ್ಧಪಡಿಸಿ ನಂದಾದೀವಿಗೆಯನ್ನು ಮುಡಿಸಿ ಇಟ್ಟರು. ಗುರುಗಳು ಯಥಾ ಪ್ರಕಾರವಾಗಿ ಬಂದು ಪೂಜೆಗೆ ಕುಳಿತರು. ಅವರ ಎದುರಿ ನಲ್ಲಿಯೇ ಮಡಿವಾಳಯ್ಯನವರು ಕುಳಿತುಕೊಂಡರು. ಗುರುಗಳು ಲಿಂಗಾಂಗ ಸಾಮರಸ್ಯವನ್ನು ಹೊಂದಿ ಜೀವವನ್ನು ಶಿವನಲ್ಲಿ ಐಕ್ಯಗೊಳಿಸಿ ಕುಳಿತುಬಿಟ್ಟರು. ಇತ್ತ ಎಣ್ಣೆ ತೀರುತ್ತ ಬಂದಿತು. ನಂದಾದೀವಿಗೆ ಪುನಃ ಎಣ್ಣೆ ಹಾಕಲು ಮನೆ ಯಲ್ಲಿ ಎಣ್ಣೆಯೇ ಇರಲಿಲ್ಲ. ದೀವಿಗೆ ನಂದುವದನ್ನು ತಿಳಿದು ಅಲ್ಲಿಯೇ ಇದ್ದ ಒಂದು ತಂಬಿಗೆಯಲ್ಲಿಯ ಪೂಜಾ ನೀರನ್ನೇ ಹಾಕಿಬಿಟ್ಟರು. ಹಣತೆ ತುಂಬಿದ ನೀರು ಪೂಜಾ ಮುಗಿಯುವವರಿಗೂ ದೀಪ ಪ್ರಜ್ವಲಿಸುತ್ತಲೇ ಇತ್ತು. ಗುರು ಗಳ ಪೂಜೆ ಮುಗಿದು ಊಟ ಮುಗಿದು ದಕ್ಷಿಣೆ ಸ್ವೀಕರಿಸಿ ಹೊರಗೆ ಬಂದರು. ಆದರೂ ದೀಪ ಉರಿಯುತ್ತಿತ್ತು. ಮಡಿವಾಳಯ್ಯನವರಿಗೆ ಗಾಬರಿಯಾಗಿ ದೀಪ ಹೇಗೆ ಉರಿಯುತ್ತದೆ? ಎಂದು. ನಿಶ್ಚಿಂತರಾಗಿ ಸ್ವಾಮಿಗಳು ಭಕ್ತನನ್ನು ಸಂತುಷ್ಟ ಗೊಳಿಸಿ ಹೊರಟು ಊರಿಗೆ ಬರುವಂತವರಾದರು. ಮಡಿವಾಳಯ್ಯ ಈ ವೈಚಿ

ತ್ರ್ಯವನ್ನು ಕಣ್ಣಾರೆ ಕಂಡು ಗುರುಗಳ ಅಗಾಧ ಲೀಲೆಯನ್ನು ಮನಸಾರೆ ಹೊಗಳಿದರು.

## ಪ್ರಸಾದ ಬೆಳೆಸಿದ್ದು

ಕರವಿನಾಳದಲ್ಲಿ ಪೂಜ್ಯ ಗುರುಗಳ ಸಮಕ್ಷಮ ಒಮ್ಮೆ ಅನ್ನಛತ್ರ ಏರ್ಪಡಿಸಿದ್ದರು. ದೊಡ್ಡ ದೊಡ್ಡ ಕಡಾಯಿಗಳಲ್ಲಿ ಸಜ್ಜಕ ಮಾಡಿ ಕಟ್ಟಿಹಾಕಿದ್ದರು. ಸುತ್ತಲಿನ ಹಳ್ಳಿಯ ಜನರು ಬಂದು ಆ ಉತ್ಸವದಲ್ಲಿ ಪಾಲ್ಗೊಂಡಿದ್ದರು. ಮುಂಜಾನೆ ಜಂಗಮರಾಧನೆ ಊಟೋಪಚಾರ ಮುಗಿದ ಬಳಿಕ ಸಂಜೆಯವರೆಗೆ ಬಿಡದೆ ನಾಲ್ಕೈದು ಸಾವಿರ ಜನರು ಊಟ ಮಾಡಿತು. ಸಾಯಂಕಾಲವಾಗುತ್ತ ಬಂತು ಸಾಯಂಕಾಲದ ಸ್ವಾಮಿಗಳ ಶಿವಪೂಜೆ ಲಿಂಗನ ಮಹಾರುದ್ರಾಭಿಷೇಕ ಮುಗಿದ ನಂತರ ಪ್ರಸಾದ ವಿತರಣೆಯೂ ನಡೆಯಬೇಕಾಗಿತ್ತು. ಗುರುಗಳು ಪೂಜೆಗೆ ಕುಳಿತಾಗ ಚನಬಸಪ್ಪ ಎಂಬೊಬ್ಬ ಭಕ್ತಾಗ್ರಣಿ ಬಂದು ಸ್ವಾಮಿಗಳಿಗೆ "ಇನ್ನೂ ಜನ ಸಾಕಷ್ಟಿದ್ದಾರೆ ಮಹಾರುದ್ರಾಭಿಷೇಕದ ಪ್ರಸಾದಕ್ಕಾಗಿ ಕಾದು ಕುಳಿತಿದೆ ಸಂಜೆಯ ಊಟಕ್ಕೆ ಸಜ್ಜಕ ಕಡಿಮೆ ಬೀಳುತ್ತದೆ ಹೇಗೆ ಮಾಡಬೇಕು ಎಂದು ತನ್ನ ಕಳವಳ ವ್ಯಕ್ತಪಡಿಸಿದನು. ಇನ್ನೂಳಿದ ಭಕ್ತವೃಂದ ಕೂಡಲೇ ಕಡಾಯಿ ಏರಿಸೋಣ ಎಲ್ಲ ಪೂಜೆಗಳೂ ಮುಗಿಯುವುದರೊಳಗೆ ಸಜ್ಜಕ ಕಡೆಗೆ ಮಾಡಬಹುದು ಎಂದು ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದಾಗ ಸುಮ್ಮನೆ ಕುಳಿತ ಮಹಾಸ್ವಾಮಿಗಳು ತಮ್ಮ ಪಾದೋದಕ ತೆಗೆದು ಚನ್ನಬಸಪ್ಪನ ಕೈಯಲ್ಲಿ ಕೊಡುತ್ತ ಹೋಗು ಇದನ್ನು ಪ್ರಸಾದದ ಕಟ್ಟಿಗೆ ಹೊಡೆದು ಆ ಕೋಲಿಯ ಬಾಗಿಲು ಭದ್ರಪಡಿಸಿ ಬಿಡು ಒಮ್ಮೆಲೇ ಊಟಕ್ಕೆ ಕೊಡ್ರುವ ಮುಂದೆ ತೀಪು ನೀಡಲು ಪ್ರಾರಂಭಿಸಿರಿ ಎಂದು ಅಪ್ಪಣೆ ಕೊಡಿಸಿದರು. ಅವರ ಆಜ್ಞಾನುಸಾರ ಮಾಡಿ ಸಂಜೆಗೆ ಎರಡು ಮೂರು ಸಾವಿರದಷ್ಟು ಜನರ ಊಟ ಮುಗಿಸಲಾಯಿತು. ಕೇವಲ ಒಂದು ಸಾವಿರ ಜನಕ್ಕೆ ಕಡಿಮೆ ಬೀಳುವ ಪ್ರಸಾದ ಎರಡು ಮೂರು ಸಾವಿರಕ್ಕೂ ಮಿಕ್ಕಿ ಜನ ಊಟ ಮಾಡಿದರೂ ಸಜ್ಜಕ ತೀರದೇ ಹಾಗೇ ಉಳಿದಿತ್ತು. ಈ ವೈಚಿತ್ರ್ಯವನ್ನು ಕಂಡು ಜನ ಬೆರಗಾದರು. ಸ್ವಾಮಿಗಳ ಮಹಿಮೆಗೆ ತಲೆಬಾಗಿ ಅವರ ಘನತೆಯನ್ನು ಹೊಗಳುತ್ತ ತಮ್ಮ ತಮ್ಮ ಗ್ರಾಮಕ್ಕೆ ತೆರಳಿದರು.

# ಮಹಾರೋಗ ನಿವಾರಣೆ

ಮೂಗಣಗೇರಿಯಲ್ಲಿಯೇ ಚಂದ್ರಾಮಪ್ಪ ದಾನಾಗೋಳ ಎಂಬವನು ಮಹಾರೋಗ ಭಯಂಕರ ಆಕಾರ ಹೊಂದಿ ತಿರುಗುತ್ತಿದ್ದನು. ಊರ ಜನಕ್ಕೆಲ್ಲ ಬೇಡವಾಗಿ ಊರ ಹೊರಗೆ ಒಂದು ಗುಡಿಸಲು ಹಾಕಿ ಇಟ್ಟಿದ್ದರು. ಅವರ ತಂದೆ-ತಾಯಿಯವರು ಅನೇಕ ದೊಡ್ಡ ದೊಡ್ಡ ಡಾಕ್ಟರಿಗೆ ತೋರಿಸಿದರು. ಆದರೂ ಗುಣ ಹೊಂದಲಿಲ್ಲ. ಅನೇಕ ತರದ ದೇಶಿ ಔಷಧೋಪಚಾರ ಮಾಡಿದರೂ ಸಹ ಕಡಿಮೆಯಾಗಲಿಲ್ಲ ಆ ರೋಗ ತಗಲಿ ಹತ್ತು ಹನ್ನೆರಡು ವರ್ಷ ಸಂದಿಸಿದ್ದವು ಎಲ್ಲ ಕಡೆಗೂ ತೋರಿಸಿ ರೋಗ ಹೋಗದೆ ಇದ್ದಾಗ ನಿರಾಶೆಗೊಂಡು ಸುಮ್ಮನೆ ಕುಳಿತಿದ್ದನು, ನನ್ನ ಕರ್ಮಕ್ಕೆ ಹತ್ತಿದ್ದೆಂದು ಸುಮ್ಮನಾಗಿದ್ದನು. ಕ್ರಮೇಣ ದೇಹದ ಕೈಕಾಲುಗಳ ಬೆರಳುಗಳು ಕಡಿದು ಬೀಳುವಂತಾದವು. ನನಗೆ ಮರಣವೇ ಪ್ರಾಪ್ತವಾಯಿತೆಂದು ಮರಣಶಯ್ಯೆಯಲ್ಲಿ ಮಲಗಿದ್ದಾಗ ಯಾವುದೋ ಮಿಂಚೊಂದು ಮಿಂಚಿದಂತಾಗಿ ಮನ ಚೇತರಿಸಿಕೊಂಡಿತು. ಎದುರಿಗೆ ಚನ್ನ ವೃಷಭೇಂದ್ರ ಗುರುಗಳು ಬಂದು ನಿಂತು ತಮ್ಮ ಜಳಕದ ನೀರನ್ನು ಕೊಟ್ಟಂತೆಯೂ ತಾನು ತೆಗೆದುಕೊಂಡು ಭಕ್ತಿಯಿಂದ ಕುಡಿದು ಮೈಮೇಲೆ ಹಾಕಿ ಕೊಂಡಂತೆಯೂ ಆಗಲು ಕೂಡಲೇ ಎದ್ದು ಕುಳಿತು ನೋಡಿಕೊಳ್ಳಲು ರೋಗ ನಿವಾರಣೆಯಾಗಿ ಮೊದಲಿನಂತೆ ದೇಹವೆಲ್ಲ ಲಕ್ಷಣವಾಗಿ ಕಂಡಂತೆಯೂ ಆಗಲು ವಿಸ್ಮಯನಾಗಿ ಗಡಬಡಿಸಿ ಎದ್ದು ನೋಡುತ್ತಾನೆ. ಅಲ್ಲಿ ಯಾವುದೂ ಇಲ್ಲ. ಮನಸ್ಸು ಮಾತ್ರ ಚೇತರಿಸಿಕೊಂಡಿತ್ತು. ಚಂದ್ರಾಮಪ್ಪನು ವಿಚಾರ ಪರವಶನಾಗಿ ಕುಳಿತನು. ಹೊತ್ತು ಏರಿದ್ದು ಸೂರ್ಯ ಪ್ರಕಾಶ ಪ್ರಖರವಾದಾಗ ಮಾತ್ರ ತಿಳಿಯಿತು. ಹಾಗೆ ಎದ್ದು ಊರ ಕಡೆಗೆ ಬಳಕುತ್ತ ಹೊರಟನು. ಸೀದಾ ಹೊರಟು ಗುರುಗಳ ಮಠವನ್ನು ಹೊಕ್ಕು ಅದೇ ಆಗ ಅವರು ಸ್ನಾನ ಮಾಡುತ್ತಿದ್ದರು. ಬಚ್ಚಲ ಮೋರೆಯಿಂದ ಬಂದ ನೀರನ್ನು ಭಯಭಕ್ತಿ ಪೂರ್ವಕವಾಗಿ ನಯ ನಾಜೂಕಿನಿಂದ ತೆಗೆದುಕೊಂಡು ಸ್ವೀಕರಿಸಿ ನಂತರ ಮೈಮೇಲೆ ಹಾಕಿಕೊಂಡು ತನ್ನ ಸ್ಥಳಕ್ಕೆ ಬಂದನು. ಇದರಂತೆಯೇ ಅದೇ ಹೊತ್ತಿಗೆ ಪ್ರತಿನಿತ್ಯ ಒಂದು ತಪ್ಪದೇ ಸ್ನಾನದ ನೀರನ್ನು ಸ್ವೀಕರಿಸುತ್ತ ಹೊರಟನು. ಬರಬರುತ್ತ ಕ್ರಮಾನುಸಾರ ಅವನ ಮೈಮೇಲಿನ ಗಾಯ ಟಬಕಿಗಳೆಲ್ಲ ಮಾಯ್ದು ಚರ್ಮ

ಮೊದಲಿನಂತೆ ಆಕಾರ ಹೊಂದ ತೊಡಗಿತು. ಕೈಕಾಲುಗಳ ಬೆರಳುಗಳು ಚಿಗಿತು ಸರ್ವಾಂಗ ಸುಂದರನಾಗಿ ತೋರ ಹತ್ತಿದನು. ಮೂರು ನಾಲ್ಕು ತಿಂಗಳ ಅವಧಿ ಮುಗಿಯುವದರೊಳಗಾಗಿ ಹದಿನಾರು ವರ್ಷದ ಹರಿಯದ ತಾರುಣ್ಯವುಕ್ಕುವ ಹುಡುಗನಂತೆ ಕಂಗೊಳಿಸುತ್ತಿದ್ದನು. ಇದನ್ನು ಕಂಡು ಊರಿಗೆ ಊರೇ ಏನಿದು ವಿಚಿತ್ರ ? ಇವನ ರೋಗ ನಿವಾರಣೆಯಾಗಲು ಏನು ಕಾರಣ ? ಇದರ ವಳಗುಟ್ಟೇನು ಎಂದು ಯಾರೂ ತಿಳಿಯದಾದರು ತನ್ನ ಎಲ್ಲ ರೋಗ ನಿವಾರಣೆಯಾದ ಬಳಿಕ ಒಂದು ದಿನ ತನ್ನ ಗುಡಿಸಲನ್ನು ಸುಟ್ಟು ಮನೆಗೆ ಬಂದ ಹೆಂಡತಿ ಮಕ್ಕಳನ್ನು ಕೂಡಿಕೊಂಡನು. ಸತಿಸುತರಿಗಾದ ಆನಂದ ಅಷ್ಟಿಷ್ಟಲ್ಲ ಅವನ ಬಾಯಿಂದಲೇ ರೋಗ ನಿವಾರಣೆಯ ಗುಟ್ಟನ್ನು ಅರಿತು ಒಂದು ಒಳ್ಳೆಯ ಶುಭದಿನದಂದು ಗುರುಗಳನ್ನು ವಿಜೃಂಭಣೆಯಿಂದ ಕರೆದೊಯ್ದು ಮಹಾ ಪೂಜೆ ಮಾಡಿಸಿ ದಕ್ಷಿಣೆಯನ್ನಿತ್ತು ಕಳಿಸಿಕೊಟ್ಟನು. ಆಗಲೇ ಊರಜನಕ್ಕೆಲ್ಲ ಅವನ ಗುಟ್ಟು ಒಯಲಾಗಿ ಸ್ವಾಮಿಗಳಲ್ಲಿ ಅನ್ಯನ ಭಕ್ತಿಭಾವದಿಂದ ಅವರಿಗೆ ಆದರ ಸತ್ಕಾರ ಮಾಡತೊಡಗಿದರು.

## ಭೂತ ಪ್ರೇತಗಳ ನಿವಾರಣೆ

ಶಿವಯೋಗಿಗಳ ಯೋಗ ಸಾಧನೆಯ ಅಪ್ರತಿಮ ಕೀರ್ತಿಯನ್ನು ನಾನಾ ತರದ ರೋಗಿಗಳು ತಮ್ಮ ರೋಗ ನಿವಾರಣಾರ್ಥವಾಗಿ ಬಂದು ಹೋಗುತ್ತಿದ್ದರು. ಯಾರ್‍ಯಾರು ತಮ್ಮ ನೈವಾನುಸಾರ ಗುರುಗಳಿಂದ ಗುಣ ಹೊಂದಿ ಅವರ ದೇವತ್ವವನ್ನು ಕೊಂಡಾಡುತ್ತ ಮುಖಸ್ತುತಿ ಮಾಡುತ್ತ ಹೊರಟು ಹೋಗುತ್ತಿದ್ದರು. ಭೂತ ಪ್ರೇತ, ಬ್ರಹ್ಮರಾಕ್ಷಸ ಮಾರಿಗ್ರಸ್ತರಂತೂ ಅನೇಕ ಜನರು ಬರುತ್ತಿದ್ದರು. ಗುರುಗಳ ದೃಷ್ಟಿ ಇಂಥವರ ಮೇಲೆ ಹರಿದರೆ ಸಾಕು ಅವರ ಮೈಯಿಂದ ಸಕಲ ವಿಧ ಪೀಡೆಗಳು ಕಡೆಗಾಗಿ ಓಡಿ ಹೋಗುತ್ತಿದ್ದವು. ಅಲ್ಲದೆ ಸ್ವಾಮಿಗಳು ಯಾವುದಾದರೂ ಕೆಲಸ ಹೇಳಿದರೆ ಮಾಡಿ ಹೋಗುತ್ತಿದ್ದವು. ಮಠ ಅಂಗಳದ ಕಸಗೂಡಿಸುವುದು, ಕೈಕಾಲುಗಳ ಸೇವೆ ಮಾಡುವುದು ಹಣ್ಣು-ಹಂಪಲ, ಕಾಯಿ, ಹೂ-ಪತ್ರಿಗಳನ್ನು ತಂದು ಕೊಡುವುದು ನೀರು ತಂದು ಹಾಕುವುದು ಇವೆ ಮೊದಲಾದ ಅನೇಕಾನೇಕ ಕೆಲಸಗಳನ್ನು ಮಾಡಿಹೋಗು ಎಂದಾಗ

ಆಯಾ ಕೆಲಸಗಳನ್ನು ಮಾಡಿ ಹೋಗುತ್ತಿದ್ದವು. ಇಂಥಾ ಅನೇಕ ಘಟನೆಗಳನ್ನು ಕಿವಿಯಾರೆ ಕೇಳಿ ಕಣ್ಣಾರೆ ಕಂಡವರು ಇನ್ನೂ ಇದ್ದಾರೆ. ಒಂದು ಕರಿದಾರ ಮಂತ್ರಮಾಡಿ ಹಾಕಿದರೆ ಸಾಕು ಎಂಥೆಂಥಾ ರೋಗವಾದರೂ ನಿವಾರಣೆಯಾದ ಕಥೆಗಳು ಅದೆಷ್ಟೋ ಇವೆ. ಜನಗಳ ಕಷ್ಟಗಳಲ್ಲಿ ಭಾಗಿಯಾಗಿ ಅವರ ನಿತ್ಯ ಜೀವನದಲ್ಲಿ ಬೆರೆತು ಸುಖ-ದುಃಖಗಳನ್ನು ವಿಚಾರಿಸಿ ಸಂಸಾರಿಗಳಲ್ಲಿ ಸಂಸಾರಿಯಂತೆಯೇ ಇದ್ದು ಸನ್ಯಾಸಿಯಲ್ಲಿ ಸನ್ಯಾಸಿಯಂತೆಯೇ ಇದ್ದು ಚರಪಟ್ಟಾಧ್ಯಕ್ಷರಲ್ಲಿ ಅವರಂತೆಯೇ ಇದ್ದು ಬದುಕಿ ದಿವ್ಯಜ್ಯೋತಿಯನ್ನು ಬೆಳಗಿಸಿ ಕೋಟಿ ಸೂರ್ಯ ಪ್ರಕಾಶದಂತೆ ಪ್ರಜ್ವಲಿಸಿ ನಂದಿದ ದೀಪದ ಬೆಳಕಿನಲ್ಲಿಯೇ ಇಂದೂ ಸಹಿತ ಜನನಡೆದು ಕೊಳ್ಳುತ್ತಿದ್ದಾರೆ. ಅವರ ಗದ್ದುಗೆಗೆ ನಡೆದುಕೊಂಡರೆ ಸಾಕು ಭಕ್ತರ ಇಷ್ಟಾರ್ಥಗಳು ಈಡೇರುವುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಒಮ್ಮೆ ನನ್ನ ಹೆಂಡತಿಗೆ ಜಡ್ಡು ಜೋರಾಗಿತ್ತು ಎಲ್ಲಿ ತೋರಿಸಿದರು ನೆಟ್ಟಗೆ ಆಗಲಿಲ್ಲ. ಬೇಸತ್ತು ಮಾಗಣಗೇರಿಯ ಮಠಕ್ಕೆ ನೂತನ ಸ್ವಾಮಿಜೀಯವರನ್ನು ಕಂಡು ನನ್ನ ಅಳಲನ್ನು ತೋಡಿಕೊಂಡೆನು. ಆಗ ಸ್ವಾಮಿಜೀಯವರು ಗುರುಗಳ ಗದ್ದಿಗೆಯ ಮೇಲೆ ಭಾರ ಹಾಕಿ ನಡೆಯಿರಿ ನಿಮಗೆ ಒಳ್ಳೆಯದು ಮಾಡುವನೆಂದು ಅಪ್ಪಣೆ ಕೊಡಿಸಿದರು ಅದರಂತೆ ನಾನು ನನ್ನ ಊರಿಗೆ ಹೋಗುವಾಗ ಗುರುಗಳ ಗದ್ದಿಗಿಗೆ ನಮಸ್ಕಾರ ಮಾಡಿ ಎಲ್ಲಾ ಭಾರ ಅವರ ಮೇಲೆ ಹಾಕಿ ಧೂಪಾರತಿಯಲ್ಲಿರುವ ಭೂದಿಯನ್ನು ತೆಗೆದುಕೊಂಡು ಹೋದೆನು. ನನ್ನ ಹೆಂಡತಿಗೆ ಪ್ರತಿ ದಿವಸ ನೀರಿನಲ್ಲಿ ಆ ದಾರ ಕಲಿಸಿ ಕುಡಿಯಲು ಕೊಡುತ್ತಿರಲಾಗಿ ಕೆಲವು ದಿವಸಗಳಲ್ಲಿ ರೋಗ ಸಂಪೂರ್ಣ ಹೋಯಿತು. ಅಂದೇ ನನ್ನ ಹೆಂಡತಿಯನ್ನು ಬದುಕಿಸಿದಂತಹ ಮಹಾತ್ಮರ ಜೀವನ ಚರಿತ್ರೆ ಬರೆಯಲು ಪ್ರಾರಂಭ ಮಾಡಿದೆನು.

## ನೀರಿಲ್ಲದ ಭಾವಿಗೆ ಗಂಗೆಯನ್ನು ತಂದದ್ದು

ಕಲಬುರ್ಗಿ ಜಿಲ್ಲೆಯ ಲಖಣಾಪೂರ ಎಂಬ ಗ್ರಾಮದಲ್ಲಿ (ಗೊಬ್ಬರಗಿ-ಲಖಣಾಪೂರ) ಒಮ್ಮೆ ಬಸವ ಪುರಾಣಾರ್ಥವಾಗಿ ಕ್ರಿಯಾ ಮೂರ್ತಿಗಳನ್ನಾಗಿ ನಮ್ಮ ಚರಪಟ್ಟಾಧಿಕಾರಿ ಚನ್ನವೃಷಭೇಂದ್ರರನ್ನು ಕರೆದೊಯ್ದಿದ್ದರು. ಆ

ಊರಲ್ಲಿ ಒಂದು ಪ್ರಮುಖ ಸಮಸ್ಯೆ ಏನಂದರೆ ನೀರಿನದು. ಊರಿಂದ ಬಹು ದೂರದಿಂದ ಕುಡಿಯಲು ನೀರು ತರುತ್ತಿದ್ದರು. ಪುರಾಣವೆಂದರೆ ನೀರಿನ ಅವಶ್ಯಕತೆಯೇ ಬಹಳ ಮುಖ್ಯವಾದದ್ದು. ಏಕೆಂದರೆ ಬರು ಹೋಗುವ ಜನ ಬಹಳ ಆದರಲ್ಲೂ ದೊಡ್ಡ ಪ್ರಮಾಣದಲ್ಲಿ ಪುರಾಣ ಮಾಡಬೇಕೆಂದು ಆ ಊರವರೆಲ್ಲರೂ ನಿಶ್ಚಯಿಸಿದ್ದಾಗಿದೆ. ಬಹಳ ವರ್ಷಗಳಿಂದಲೂ ಈ ನೀರಿನ ಅಡೆ-ತಡೆಗಳಿಂದಲೇ ಪುರಾಣ ನಿಂತು ಹೋಗಿತ್ತು. ಅದಕ್ಕಾಗಿ ಈಗ ಹೇಗೆ ? ಎಂಬ ಸಮಸ್ಯೆ ಬೃಹದಾಕಾರವಾಗಿ ಎಲ್ಲರನ್ನೂ ಕಾಡತೊಡಗಿತು ಈ ಪ್ರಶ್ನೆ ಗುರುಗಳ ಕಿವಿಯ ವರೆಗೂ ಮುಟ್ಟಿತು. ಆಗ ಗುರುಗಳು ನೀವು ಏನೂ ಚಿಂತಿಸುವ ಕಾರಣವಿಲ್ಲ. ನಾಳೆ ನೀರಿಲ್ಲದ ಭಾವಿಗೆ ಹೋಗೋಣವೆಂದು ಅಪ್ಪಣೆ ಕೊಡಿಸಿದರು. ಅದಕ್ಕೆ ಊರ ಪ್ರಮುಖರು ಒಡಂಬಟ್ಟು ಮರುದಿನ ಗೌಡ, ಗಣಾಚಾರಿ, ಕುಲಕರ್ಣಿಗಳನ್ನೊಳಗೊಂಡು ಬಾಜಿ, ಭಜಂತ್ರಿ, ಡೊಳ್ಳು, ಕಹಳೆ, ಸುಮಂಗಲೆಯರ ಸಮೇತರಾಗಿ ಮಂಗಳ ವಾದ್ಯಗಳನ್ನು ಊದಿಸುತ್ತ ಬಾರಿಸುತ್ತ ಅದೇ ಊರಿನ ನೀರಿಲ್ಲದ ಭಾವಿಗೆ ಹೋಗಿ ನೆಲ ಅಗಿಯಲು ಹಾರಿ,ಗುದ್ದಲಿ, ಸಲಿಕೆಗಳನ್ನು ತಂದು ಭಾವಿಯ ತಳಕ್ಕೆ ಎಲ್ಲರೂ ಆಗಮಿಸಿ ಭೂತಾಯಿಯ ಹಾಗೂ ಅಗಿಯುವ ಸಾಮಾನುಗಳಿಗೆ ಪೂಜೆಯನ್ನು ಮಾಡಿ, ಸ್ವಾಮಿಗಳ ಅಮೃತ ಹಸ್ತದಿಂದ ಭೂಮಿಗೆ ಸ್ಪರ್ಶಮಾಡಿ ಇಲ್ಲಿ ಅಗೆಯಲು ನೆರೆದ ಜನರಿಗೆ ಹೇಳಿದರು. ಎರಡು ಫೂಟು ಆಳದ ಒಂದು ತಗ್ಗನ್ನು ತೋಡಿಸಿದರು. ಕೂಡಲೇ ನೀರು ರಭಸದಿಂದ ಬರಲು ಪ್ರಾರಂಭವಾಯಿತು. ಇದನ್ನು ನೋಡಿ ನೆರೆದ ಜನರು ಹರ್ಷದಿಂದ ಜೈಜೈಕಾರ ಹಾಕತೊಡಗಿದರು. ನಂತರ ಗಂಗೆಗೆ ಪೂಜೆ ಪುನಸ್ಕಾರ ಮಂಗಳಾರುತಿ ಮಾಡಿ ಗುರುಗಳ ಪಾದೋದಕ ಭಾವಿಯಲ್ಲಿ ಹಾಕಿ ಐದು ಕೊಡ ನೀರನ್ನು ತುಂಬಿಸಿದರು. ಆ ಐದು ಕೊಡಗಳು ಐದು ಜನ ಮುತ್ತೈದೆಯರೊಡನೆ ಮೆರವಣಿಗೆಯಿಂದ ಪುರಾಣ ಪ್ರಾರಂಭದ ಮನೆಗೆ ಬಂದಿತು. ಅಂದಿನಿಂದಲೇ ನೀರು ತರಲು ಪ್ರಾರಂಭಿಸಿದವರು ಒಂದು ತಿಂಗಳವರೆಗೆ ಪುರಾಣ ನಡೆದು ಮಂಗಲ ಸಮಯಕ್ಕೆ ಮೂರು ನಾಲ್ಕು ದಿನಗಳವರೆಗೆ ಜನ ಜಾತ್ರೆಯೇ ನೆರೆದಿತ್ತು. ಆದರೂ ಆ ಗುಂಡದ ನೀರು ಸರಿಯಲಿಲ್ಲ. ನೀರು ಮಾತ್ರ ಯಾವಾಗಲೂ ಅಷ್ಟೇ ಇರುತ್ತಿತ್ತು. ಇಡೀ ಊರಿಗೆ ಊರೇ ನೀರು ಅಲ್ಲಿಯೇ ತರುತ್ತಿದ್ದರು. ಊರವರನ್ನೊರತು ಪಡಿಸಿ ಬಂದು ಹೋಗುವ ಜನರೂ ಕೂಡಾ ಅದನ್ನು ನೋಡಿ ಬೆರಗಾ

ದರು. ಇದು ಸಾಮಾನ್ಯವಾದ ವೈಚಿತ್ರ್ಯವಲ್ಲ ದೈವೀಶಕ್ತಿಯೇ ಮೂರ್ತಿವೆತ್ತು ನಿಂತಿದೆ ಎಂದು ಜನ ಕೊಂಡಾಡುತ್ತಿದ್ದರು. ಮುಂದೆ ಪುರಾಣ ಮಂಗಲದ ದಿನ ಜಂಗಮಾರಾಧನೆಯಾದ ಬಳಿಕ ಬಸಯ್ಯ ಮುತ್ತ್ಯಾ ಅವರನ್ನು ಕರೆದು ಬಾರಪಾ ಬಸಯ್ಯಾ ಜಂಗಮರಿಗೆ ದಕ್ಷಿಣೆ ಕೊಡು ಎಂದು ಹೇಳಿ ಒಂದು ಕೆಂಪು ಜೋಳಿಗೆ ಯನ್ನು ಸಿದ್ಧಪಡಿಸಿ ಅದರಲ್ಲಿ ತಮ್ಮ ಸ್ವಹಸ್ತದಿಂದ ಎಂಟು ಆಣೆಯ ಗಾಡಿ ಯೊಂದನ್ನು ಹಾಕಿ ಕೊಟ್ಟರಂತೆ. ನಿನಗೆ ಎಷ್ಟು ಕೊಡಬೇಕೆಂದು ಅನಿಸು ವುದೋ ಅಷ್ಟನ್ನು ಕೊಡು ಎಂದು ಹೇಳಿದರಂತೆ. ಬಸಯ್ಯನವರು ಪ್ರತಿ ಜಂಗಮ ನಿಗೂ ಎಂಟು ಆಣೆಯಂತೆ ದಕ್ಷಿಣೆ ಕೊಟ್ಟರೂ ಇನ್ನೂ ಜೋಳಿಗೆಯಲ್ಲಿ ಎಂಟು ಆಣೆ ಗಾಡಿಯೊಂದು ಹಾಗೇ ಇತ್ತಂತೆ. ನೂರಾರು ಜಂಗಮರು ಉಂಡು ದಕ್ಷಿಣೆ ಪಡೆದು ತೃಪ್ತರಾಗಿ ಹೋದರು. ಇದೊಂದು ಅಲ್ಲಿ ತೋರಿದ ಎರಡನೇ ಪವಾಡ.

ಸಾಕ್ಷಾತ್ ಪರಶಿವನೇ ಸ್ವಾಮಿಗಳ ರೂಪದಲ್ಲಿ ನಮ್ಮೆಲ್ಲರ ಉದ್ಧಾರಗೈ ಯ್ಯಲು ಜನ್ಮತಾಳಿ ಬಂದಿರುವನೆಂದು ಜನ ನಂಬಿದರು. ಅವರಿಂದ ಸಾಧ್ಯವಾ ದಷ್ಟು ಲಾಭ ಪಡೆಯಬೇಕೆಂದು ಎಲ್ಲರೂ ಪ್ರಯತ್ನಪಡುತ್ತಿದ್ದರು. ಅವರಿಂದ ಗುರೂಪದೇಶ ಪಡೆದವರಂತೂ ಲೆಕ್ಕವಿಲ್ಲದಷ್ಟು ಜನ ನೆರೆದವರೆಲ್ಲ ಮಹಾಸ್ವಾಮಿ ಗಳ ನಾಮಸ್ಮರಣೆ ಮಾಡುತ್ತ ಹಿಂದಿರುಗಿದರು.

## ವೀರ ಮಂಟಪ

"ಸ್ವಹಂ ಬ್ರಹ್ಮಮಯಂ" ಎಂದು ಬರೀ ಶಾಸ್ತ್ರವನ್ನೋದಿ ಅನುಭವವಿಲ್ಲದೇ ಬಾಯಿಂದ ಬ್ರಹ್ಮನೆಂದು ನುಡಿಯುವ ಮಾಯಾಮೋಹಿಗಳಿಗೆ ಬ್ರಹ್ಮಜ್ಞಾನವಾ ಗುವ ಬಗೆ ಹೇಗೆ ? ತಾನು ಬ್ರಹ್ಮನೆಂದರಿಯದೆ ಸರ್ವವೂ ಬ್ರಹ್ಮಮಯವೆಂದು ಬಗೆಯದೇ ದ್ವೈತಭಾವನೆಯಲ್ಲಿ ಮುಳುಗಿದವನು ಭವಸಾಗರವನ್ನು ದಾಟುವ ಬಗೆಯಾದರೂ ಹೇಗೆ ? ಇಂತಪ್ಪ ಗಾಢಾಂಧಕಾರದಲ್ಲಿ ಮುಳುಗಿದ ಅಜ್ಞಾನೀ ಜನರಿಂದಲೇ ತುಂಬಿದ ಮದ್ದರಕಿ ಗ್ರಾಮದಲ್ಲಿ ( ತಾಲೂಕ ಶಹಾಪೂರ ಜಿಲ್ಲಾ ಗುಲ್ಬರ್ಗಾ ) ಮೂರು ತಿಂಗಳ ಬಸವ ಪುರಾಣ ಹಚ್ಚಿದ್ದರು. ಆ ಪುರಾಣದ ಮಂಗಲ ಸಮಯದಲ್ಲಿ (63) ಅರವತ್ತು ಮೂರು ಮಂಟಪಗಳನ್ನು ಸ್ಥಾಪಿಸಿ ದರು. ಅವರ ಅದ್ದೂರಿಯ ಮಂಟಪ ಪೂಜೆಯಲ್ಲಿ ಅಜ್ಞಾನದ ಅಂಧಕಾರದಲ್ಲಿ

ಮುಳಗಿದ ಜನ ಮಹಾಶಿವಯೋಗಿಗಳಿಗೆ ಒಂದು ಅಪಚಾರವೆಸಗಿದರು. ಯೋಗಿಗಳ ಸತ್ವಪರೀಕ್ಷೆಯನ್ನೇ ನಡೆಸಿದರು. ಪರಬ್ರಹ್ಮ ಸ್ವರೂಪನಾದ ಶಿವಯೋಗಿಯ ದರ್ಶನ-ಸ್ಪರ್ಶನ ಸಂಭಾಷಣಗಳಿಂದ ಪಾಪಕರ್ಮವೆಲ್ಲ ನಿರ್ಮೂಲವಾಗುವುದು. ದೇಹವೆಂಬ ಟ್ರಕ್ಕಿಗೆ ಜೀವಾತ್ಮನೇ ಕರ್ತನು ಚತುಃಕರಣಗಳೇ ಗಾಲಿಗಳು ಇಂದ್ರಿಯಂಗಳೇ ತಿರುಗುತ್ತಿರುವ ಚಕ್ರಗಳು. ವಿಷಯಗಳೆಂಬ ಎಣ್ಣೆಯನ್ನು ಹಾಕಿ ಅಹಂಕಾರವೆಂಬ ಉರಿಯನ್ನು ಹಚ್ಚಿ ಮನವೆಂಬ ಚಾಲಕನು ಟ್ರಕ್ಕಿನೊಡೆಯನ ಭಯವಿಲ್ಲದೇ ಮನಬಂದ ಕಡೆಗೆ ಮಯ್ಯಲು ವೇಗಾತಿರೇಕದಿಂದ ಟ್ರಕ್ಕು ಎಂಬ ವಡಲು ವಡೆದು ಪುಡಿ ಪುಡಿಯಾಗಿ ಹುಟ್ಟು ಸಾವುಗಳೆಂಬ ಕಟ್ಟಡವಿಯಲ್ಲಿ ಆ ವಡಲ ಒಡೆಯನನ್ನು ಕೆಡವಿ ದುಃಖಕ್ಕೆ ಗುರಿಪಡಿಸುವುದು. ಕಾರಣ ಮನವೆಂಬ ಚಾಲಕನನ್ನು ಮೊದಲೇ ತನ್ನ ಸ್ವಾಧೀನಕ್ಕಿಟ್ಟುಕೊಂಡರೆ ಯಾವ ಬಾಧೆಯೂ ಬರಲಾರದು. ಈ ಉದ್ದೇಶದಿಂದಲೇ ಶ್ರೀ ಗುರುವಿನ ಸಂದರ್ಶನ ಮಾಡಿಕೊಂಡು ಸದ್ಬೋಧೆಯನ್ನು ಕೇಳಬೇಕು.

ಇದೆಲ್ಲವನ್ನೂ ಮರೆತು ಮದ್ದರಕಿಯ ಪುರವಾಸಿಗಳು ತಮ್ಮ ಗಾಡಾಂಧಕಾರದಲ್ಲಿ ತಮ್ಮ ತಪ್ಪನ್ನೇ ಮುಂದು ಮಾಡಿಕೊಂಡು ಅಸತ್ಯವನ್ನೇ ಸತ್ಯವೆಂದು ಸಾಧಿಸಿದರು. ಮಂಟಪ ಮೂರ್ತಿಗಳಾಗಿ ಹರಗುರು ಚರಪಟ್ಟಾಧ್ಯಕ್ಷರೂ ಹಾಗೂ ನಿರಂಜನ ಮೂರ್ತಿಗಳೂ ಕೂಡಿ ಅರವತ್ತು ಮೂರು ಮಂದಿ ಮಹಾಸ್ವಾಮಿಗಳು ಆಗಮಿಸುವವರಿದ್ದರು. ಅವರಲ್ಲಿ ನಮ್ಮ ಕಥಾನಾಯಕರಾದ ಶ್ರೀ ಚರಪಟ್ಟಾಧ್ಯಕ್ಷ ಗುರುಚನ್ನವೃಷಭೇಂದ್ರ ಮಹಾಶಿವಯೋಗಿಗಳೂ ಒಬ್ಬರು. ಮಂಟಪ ಪೂಜೆಯ ಮೊದಲನೆಯ ದಿನವೇ ಎಲ್ಲ ಅರವತ್ತು ಮೂರು ಮಂದಿ ಪುರಾತನರು ಬಂದು ಸೇರಬೇಕಾಗಿತ್ತು. ಆದರೆ ಮಾಗಣಗೇರಿಯ ಗುರುಗಳು ಮಾತ್ರ ಅಂದೇ ಬೆಳಗಿನ ಜಾವದಲ್ಲಿ ಎದ್ದು ಹೋದರಾಯಿತೆಂದು ಬಿಟ್ಟಿದ್ದರು. ಅದರಂತೆ ಮಂಟಪ ಪೂಜೆಯ ದಿನವೇ ಪೂಜಾ ಸಮಾರಂಭಕ್ಕೆ ಸರಿಯಾಗಿ ಅವರೂ ಹೋಗಿ ಅಲ್ಲಿಗೆ ಸೇರಿಕೊಂಡರು. ಆದರೆ ಅಲ್ಲಿಯ ಮಹಾಪೂಜೆಯ ವೈಖರಿಯೇ ಬೇರೆಯಾಗಿತ್ತು. ಮಹಾಸ್ವಾಮಿಗಳ ಜೊತೆಯಲ್ಲಿ ಮಾಡಗಿ ಬಸಯ್ಯತಾತನವರೂ ಇದ್ದರು.

ಅಲ್ಲಿಯ ಪುರ ಪ್ರಮುಖರಲ್ಲಿಯೇ ಅಗ್ರಗಣ್ಯನಾದ ಊರ ಗೌಡನು ತನ್ನ ಬುದ್ಧಿವಂತಿಕೆಯನ್ನು ಅಜ್ಞಾನ ಮಾರ್ಗದಲ್ಲಿ ನಡೆಸಿ ಮಹಾ ಜ್ಞಾನಿಯಂತೆ ಅದನ್ನೇ ನಿಜವೆಂದು ಅತೀ ಹೆಮ್ಮೆಯಿಂದ ಒಂದು ವಿಶೇಷ ಖಡ್ಗದ ಮಂಟಪ ವನ್ನು ಏರ್ಪಡಿಸಿದ್ದನು. ಇದವೇ ವೀರ ಮಂಟಪ ಪುರಾತನ ವೈದಿಕ ವೀರಶೈವ ಮತಸ್ಥರಲ್ಲಿ ಪೂಜ್ಯರಾದ ನಡೆ, ನುಡಿ, ಆಚಾರ, ವಿಚಾರ, ಶೀಲ ಸಹಿಷ್ಣುತೆ, ಬ್ರಹ್ಮಚರ್ಯ, ಇಂದ್ರಿಯ ನಿಗ್ರಹ, ಗುರುಪೂಜೆ ಹರಸೇವೆಯಲ್ಲಿ ಮಿಗಿಲಾದ ಶಿವ ಸ್ವರೂಪಿಗಳಾದ ಅಷ್ಟಾವರಣಗಳಲ್ಲಿ ಮಿಂದು ಷಟಸ್ಥಲಗಳನ್ನು ಗಸ್ಟುಗೆಯನ್ನಾಗಿಸಿ ಕೊಂಡು ಪಂಚಾಚಾರಗಳ ಪೂಜೆಗೈಯ್ಯುವ ಪಂಚಾಚಾರ್ಯಾನುವರ್ತಿಗಳಾಡ ಮಹಾಮಹಾಮಹಿಮಾ ಪುರುಷರಾದ ಶಿವಯೋಗಿಗಳ ಸತ್ಯಾಂಶವನ್ನೇ ಕಂಡು ಹಿಡಿಯಲು ಆಹ್ವಾನಿಸುವಂತೆ ಆ ಮಂಟಪ ನಿರ್ಮಾಣವಾಗಿತ್ತು. ನೆಲದಿಂಡ ಹನ್ನೆರಡು ಫೂಟು ಅಗಲವಾದ ಒಂದು ವೇದಿಕೆಯನ್ನು ನಿರ್ಮಿಸಿ ಅದಕ್ಕೆ ಏರಿ ಹೋಗಲು ನಿಶ್ಶಣಿಕಿಯಂತೆ ಎರಡು ಕಂಬಗಳನ್ನು ನೆಡಲಾಗಿತ್ತು. ನಂತರ ಸಾವಿ ರಾರು ಹರಿತವಾದ ಖಡ್ಗಗಳನ್ನು ತರಿಸಿ ಅವುಗಳ ಹದನಾದ ಮುಖ ಮೇಲೆ ಮಾಡಿ ಏಣಿಯಂತೆ ಕಟ್ಟಿದ ಎರಡೂ ಕಂಬಗಳಿಗೆ ಅಡ್ಡವಾಗಿ ಖಡ್ಗದಿಂದ ಏಣಿ ಗಳನ್ನು ಕಟ್ಟಿದ್ದರು. ವೇದಿಕೆಯ ಮೇಲೆ ಆರಾರು ಇಂಚಿಗೆ ಒಂದರಂತೆ ಅವೇ ಖಡ್ಗಗಳನ್ನು ಕಟ್ಟಿ ಕುಳಿತುಕೊಳ್ಳಲು ಆಸನ ಮಾಡಿದರು. ಇಷ್ಟಾದ ನಂತರ ವಲ್ಲಿ ಎಲ್ಲಾ ಸ್ವಾಮಿಗಳಿಗೂ ತಿಳಿಸಲಾಯಿತು.

ಅರವತ್ತು ಮೂರು ಮಂಟಪಗಳಲ್ಲಿ ಒಂದನ್ನು ಅಗ್ರಪೂಜೆಯ ಮಂಟಪವ ನ್ನಾಗಿ ಪರಿವರ್ತಿಸಿದ್ದರು. ಬಸವ ಪುರಾತನವಲ್ಲಿ ಅರವತ್ತು ಮೂರು ಮಂಡಿ ಶಿವಶರಣರಲ್ಲಿ ಅಲ್ಲಮನು ಹೇಗೆ ಶ್ರೇಷ್ಠನೋ ಹಾಗೆ ಇಲ್ಲಿಯೂ ಅವರವರ ಹೆಸರು ಗಳ ಮೇಲೆಯೇ ಪುರಾತನ ಮಂಟಪಗಳು ನಿರ್ಮಾಣಗೊಂಡಿದ್ದವು. ಅರವತ್ತೆ ರಡು ಮಂದಿ ಸ್ವಾಮಿಗಳಲ್ಲಿ ಒಬ್ಬರೂ ಮಂಟಪದ ಸಮೀಪ ಸುಳಿಯಲಿಲ್ಲ. ಎಲ್ಲರೂ ಒಂದೊಂದು ಮಂಟಪ ಹಿಡಿದು ಪೂಜೆಗೆ ಕುಳಿತುಕೊಂಡರು. ಈ ಮಂಟಪವೇರಲು ಒಬ್ಬರೂ ಬಾರದಿರುವುದನ್ನು ಕಂಡು ಎಲ್ಲ ಪುರ ಪ್ರಮುಖರೂ ವಿಮುಖರಾಗಿ ನಿಂತಿರುವಾಗಲೇ ಮಹಾಸ್ವಾಮಿಗಳಾದ ಶ್ರೀಗುರು ಚನ್ನವೃಷ ಭೇಂದ್ರರು ತಮ್ಮ ಕುದುರೆಯನ್ನೇರಿ ಅರವತ್ತು ಮೂರನೆಯವರಾಗಿ ಅಲ್ಲಿಗೆ

ಆಗಮಿಸಿದರು. ಎಲ್ಲ ಮುಖಂಡರೂ ಓಡುತ್ತ ಬಂದು ಕುದುರೆಯನ್ನು ಹಿಡಿದು ಸ್ವಾಮಿಗಳವರನ್ನು ಕೆಳಗೆ ಇಳಿಸಿಕೊಂಡು ನಮಸ್ಕರಿಸಿ ಬಹು ಆದರ ಸತ್ಕಾರ ಗಳಿಂದ ಬರಮಾಡಿಕೊಂಡರು. ಬಂದು ನೋಡುತ್ತಾರೆ ಎಲ್ಲ ಅರವತ್ತೆರಡೂ ಮಂಟಪಗಳಲ್ಲಿ ಶಿವಯೋಗಿಗಳು ಕುಳಿತುಕೊಂಡಿದ್ದಾರೆ. ಇನ್ನುಳಿದ ಒಂದು ಮಂಟಪವಂತೂ ಹಾಗೆ ಉಳಿದುಕೊಂಡಿದೆ. ಗುರುಗಳು ಕ್ಷಣ ಹೊತ್ತು ವಿಚಾರಿ ಸಿಕೊಂಡು ಇದು ಸರ್ವಹರ ಗುರುಚರಮೂರ್ತಿಗಳ ಸತ್ವ ಪರೀಕ್ಷೆಯೆಂದರಿತು ಹತ್ತಿರವೇ ನಿಂತುಕೊಂಡಿರುವ ಬಸಯ್ಯನವರಿಗೆ "ಏನಪಾ ಬಸಯ್ಯಾ ? ನಿನ್ನ ಅಭಿಪ್ರಾಯ ಏನದ" ? ಎಂದು ಅಂದದ್ದಕ್ಕೆ ಬಸಯ್ಯನವರು ಹೀಗೆಂದರು. "ಶಿವ ಸ್ವರೂಪಿಗಳಾದ ಗುರು ಮಹಾಂತರೂ ಆದ ತಾವೇ ನನಗೆ ಕೇಳಿದರೆ ಏನೆಂದು ಹೇಳಲಿ ತಂದೆ ಈಗ ವಿಚಾರಿಸಲು ಸಮಯವೂ ಉಳಿದಿಲ್ಲ. ಮಂಟಪಗಳ ಪೂಜೆಗೆ ಹೊತ್ತಾಗಿದೆ ನೀವು ತಡಮಾಡದೇ ಇದೇ ಎದುರಿಗಿರುವ ವೀರ ಮಂಟಪ ವನ್ನು ಏರಿ ಶಿವಾರ್ಚನೆ ಕೈಕೊಳ್ಳಿರಿ" ಎಂದು ನುಡಿದರು. ಕೂಡಲೇ ಯೋಗಿ ವರ್‍ಯರು ಬಾಳೆ ಎಲೆಗಳನ್ನು ತರಲು ಅಪ್ಪಣೆ ಕೊಡಿಸಿದರು. ತತ್‌ಕ್ಷಣದಲ್ಲಿ ಖಡ್ಗ ಗಳ ಮೇಲೆ ಬಾಳೆ ಎಲೆಗಳನ್ನು ಹರವಿ ಸರಾಗವಾಗಿ ಪ್ರತಿ ಖಡ್ಗದ ಏಣಿಯ ಮೇಲೂ ಹೆಜ್ಜೆಯನ್ನಿಟ್ಟು ಏರಿ ಖಡ್ಗದಿಂದಲೇ ನಿರ್ಮಾಣವಾದ ವೇದಿಕೆಯ ಮೇಲೆ ಪದ್ಮಾಸನಾರೂಢರಾಗಿ ಕುಳಿತು ಶಿವಾರ್ಚನೆಯಲ್ಲಿ ಮೈಮರೆತರು "ಶರಣ ರೊಡನೆ ಮರೆತು ಸರಸ ನಾಡಿದರೆ ಸುಣ್ಣದ ಕಲ್ಲು ಕಟ್ಟಿಕೊಂಡು ಮಡುವ ಬಿದ್ದಂತೆ ಅಲ್ಲಿ ನೆರೆದ ಹತ್ತು ಸಾವಿರಕ್ಕೂ ಮಿಕ್ಕಿದ ಜನಸ್ತೋಮ ಇದನ್ನು ಕಂಡು ದಿಂಙ್ಮೂಢರಾಗಿ ಏನೂ ತೋಚದೆ ಬೆರಗಾಗಿ ತಮ್ಮ ಸಂಪೂರ್ಣ ಲಕ್ಷವನ್ನು ಸ್ವಾಮಿಗಳತ್ತ ಹರಿಸಿ ನೋಡುತ್ತ ನಿಂತರು. ಕಾಲಲ್ಲಿಯೇ ಹಾವು ಹರಿದರೂ ಅರಿವಿಲ್ಲದಂತೆ ನಿಂತು ಬಿಟ್ಟಿದ್ದರು. ಎಲ್ಲಿ ಸ್ವಾಮಿಗಳಿಗೆ ಏನಾಗುವುದೋ ಎಂಬ ಭಯದಿಂದ ಕಂಪಿಸುತ್ತಿದ್ದರು. ಎಲ್ಲರಿಗೂ ಗುರುಗಳು ಖಡ್ಗಗಳ ಮೇಲೆಯೇ ಕಾಲಿರಿಸಿ ಹೋಗಿ ಅವುಗಳಿಗಾನಿಸಿಯೇ ಕುಳಿತಂತೆ ತೋರುತ್ತಿತ್ತು. ಆದರೆ ನಿರ್ಮಾಪಕನಾದ ಗೌಡನಿಗೆ ಹಾಗೆ ತೋರಲಿಲ್ಲ. ಗುರುಗಳು ಏರುವಾಗಲೂ ಅಲ್ಲಿ ಹೋಗಿ ಕುಳಿತು ಕೊಂಡಾಗಲೂ ಏಣಿಯಿಂದ ಹಾಗೂ ಆಸನದಿಂದ ಆರು ಇಂಚು ಎತ್ತರವಾಗಿ ಹೋಗಿ ಕುಳಿತುಕೊಂಡಂತೆ ಕಾಣುತ್ತಿತ್ತು. ಖಡ್ಗಗಳಿಗೆ ಮುಟ್ಟದಂತೆಯೇ ಮಹಾ ಶಿವಯೋಗಿಗಳು ಏರಿಹೋಗಿ ಪೂಜಾರ್ಚನೆ ಮಾಡಿ

ಕೊಳ್ಳುತ್ತಿರುವುದನ್ನು ಕಂಡು ಗೌಡನಂತೂ ಇಹಲೋಕವನ್ನೇ ಮರೆತು ವಿಚಾರ ಪರವಶನಾಗಿ ಸ್ಮೃತಿ ತಪ್ಪಿನಿಂತುಕೊಂಡಿದ್ದನು. ಶಿವಪೂಜೆ ಸಾಂಗಗೊಂಡ ಬಳಿಕ ಗೌಡನನ್ನುದ್ದೇಶಿಸಿ ಗುರುಗಳು ಇಂತೆಂದರು- ಏನಪಾ ಗೌಡ ? ನೋಡಿ ದೆಯಾ ಪೂಜೆಯನ್ನು ಎಂದು ಕೇಳಿದ್ದಕ್ಕೆ ನೋಡಿದೀನ್ರಿ ಎಂದು ಉತ್ತರಿಸುವಾಗ ಗೌಡನ ಬಾಯಿಯಿಂದ ಮಾತುಗಳು ತಡವರಿಸುತ್ತಾ ಬಂದವು. ನಿನ್ನಿಚ್ಛೆಯಂತೆ ನೋಡಿಯಾದ ಮೇಲೆ ಮುಂದೆ ಮತ್ತೇನು ನೋಡುವುದಿದೆ ಎಂದು ಅನ್ನುತ್ತ ಗುರುಗಳು ಕೆಳಗಿಳಿದು ಬಂದು ಗೌಡನನ್ನುದ್ದೇಶಿಸಿ "ಈ ಖಡ್ಗ ಮಂಟಪ ಯಾರು ಮಾಡಿರುವರೋ ಅವರ ವಂಶ ನಿರ್ವಂಶವಾಗಲಿ" ಎಂದು ಶಾಪ ಕೊಡುವಂತವ ರಾದರು. ನೆರೆದ ಸಮೂಹವೆಲ್ಲ ಜೈಜೈಕಾರದೊಂದಿಗೆ ಹರುಷಗೊಂಡು ಕುಣಿದು ಕುಪ್ಪಳಿಸಿ ಹಾರಾಡುತ್ತ ಮಹಾಜಂಗಮಯೋಗಿ ಚನ್ನವೃಷಭೇಂದ್ರರರನ್ನು ಮುತ್ತಿಕೊಂಡರು. ಶಾಪಗ್ರಸ್ಥನಾದ ಗೌಡನು ಪ್ರಾಣಾಂತ್ಯ ಸಂಕಟದಿಂದ ನೋಳಾಡಿ ಹೊರಳಾಡಿ ಮಹಾಸ್ವಾಮಿಗಳವರ ಪಾದದ ಮೇಲೆ ಬಿದ್ದು ಶಾಪ ಹಿಂದಕ್ಕೆ ತೆಗೆದು ಕೊಳ್ಳಿರಿ ಎಂದು ಅನಂತ ರೀತಿಯಿಂದ ಬೇಡಿಕೊಂಡನು ಅವನ ಕಳವಳಿಯ ಧ್ವನಿ ಸ್ವಾಮಿಗಳ ಕರುಣೆಯ ಕರ್ಣ ಪಟಲದ ಮೇಲೆ ಅಪ್ಪಳಿಸಲೇ ಇಲ್ಲ. ಕೊಟ್ಟ ಶಾಪವು ಹಿಂದಕ್ಕೆ ತೆಗೆದುಕೊಳ್ಳಲಿಕ್ಕೆ ಬರುವದಿಲ್ಲವೆಂದು ಹೇಳಿ ಉಟೋಪಚಾರಕ್ಕೂ ಕಾಯದೇ ಕುದುರೆಯನ್ನೇರಿ ಹೊರಟರು. ಮಾರ್ಗ ಮಧ್ಯ ದಲ್ಲಿ ಲಕಣಾಪೂರದ ಜಾನಪ್ಪಗೌಡರು ತಮ್ಮ ಹೊಲದಲ್ಲಿ ಕೆಲಸ ಮಾಡಿಸುತ್ತಿ ದ್ದರು. ಸ್ವಾಮಿಗಳವರು ಬರುತ್ತಿರುವದನ್ನು ನೋಡಿ ಅವರಲ್ಲಿಗೆ ಹೋಗಿ ಭಯ ಭಕ್ತಿಯಿಂದ ನಮಸ್ಕರಿಸಿ ನನ್ನ ಮನಿಗೆ ತಾವು ದಯಮಾಡಿಸಿ ಸರ್ವರನ್ನು ಸುಮಿತ್ರರನ್ನಾಗಿ ಮಾಡಬೇಕೆಂದು ಬೇಡಿಕೊಂಡಾಗ ಗೌಡರ ಮನಿಗೆ ಹೋಗಿ ಸ್ನಾನ ಪೂಜಾದಿಗಳನ್ನು ತೀರಿಸಿಕೊಂಡು ಮರುದಿವಸ ಮಾಗಣಗೇರಿಗೆ ಬರುವಂತ ವರಾದರು.

ಶಾಪ ಆದಂದಿನಿಂದಲೂ ಇಲ್ಲಿಯವರಿಗೆ ಮದ್ದರಿಕಿಯ ಗ್ರಾಮದ ಹೊಲಗಳು ಉತ್ತಮವಾಗಿದ್ದರೂ ಅನ್ನವಿಲ್ಲದಂತಾಗಿದೆ.

# ಭವಿಷತ್ಕಾಲದ ಕಂಟಕ ತೋರಿದ್ದು

ಮಾಗಣಗೇರಿಯಲ್ಲಿ ಮಲ್ಲಪ್ಪಗೌಡ ಅಣ್ಣಣಗೋಳ ಎಂಬವರ ಮನೆಯಲ್ಲಿ ಒಮ್ಮೆ ರುದ್ರಾಭಿಷೇಕ ನೆರವೇರಿತು. ರುದ್ರದ ಜಿನ್ನ ತೀರಿದ ತರುವಾಯ ಪುನಃ ಗುರುಮೂರ್ತಿಯನ್ನು ಮಂಗಳ ವಾದ್ಯಗಳಿಂದೊಡಗೂಡಿದ ಮೆರವಣಿಗೆಯಲ್ಲಿ ಕರೆ ತಂದು ಮಠಕ್ಕೆ ಮುಟ್ಟಿಸಬೇಕೆಂದು ಸರ್ವ ಸನ್ನಾಹದೊಂದಿಗೆ ಮೆರವಣಿಗೆ ಹೊರ ಟಿತು. ಮೆರವಣಿಗೆ ಅವರ ಮನೆಯಿಂದ ಹೊರಟು ಮಠಕ್ಕೆ ಮುಟ್ಟಲು ಸೀದಾ ದಾರಿಯ ಮಧ್ಯದಲ್ಲಿ ಮರೆಪ್ಪಗೋಳ ಎಂಬುವರ ಮನೆಯ ಮುಂದೆ ಚಪ್ಪರ ಹಾಕಿದ್ದರು. ಆ ಚಪ್ಪರದ ಬುಡದಲ್ಲಿ ಹಾಯಬೇಕಾಗುತ್ತಿತ್ತು. ಅದೇ ಮನೆಯ ಹಿಂಬದಿ ಹಾಯ್ದು ಬರುವ ದಾರಿ ಸುತ್ತುವರಿದು ಬಂದು ಮಠ ಸೇರುತ್ತಿತ್ತು. ಬಾಜಿ ಭಜಂತ್ರಿಗಳೊಡನೆ ಸರ್ವ ಮಂಗಳ ವಾದ್ಯಗಳನ್ನೊಳಗೊಂಡು ಮುತ್ತೈದೆ ಯರ ಕಳಸಗಳೂ ಸೇರಿ ನೂರಾರು ಜನ ಊರ ಪ್ರಮುಖರು ಮಹಾಸ್ವಾಮಿಗಳ ಜೊತೆಯಲ್ಲಿ ಹೊರಬಿದ್ದರು. ಹಟಾತ್ತನೆ ಮೆರವಣಿಗೆ ತಡೆಯಲು ಗುರುಗಳು ಅಪ್ಪಣೆ ಕೊಡಿಸಿದರು. ಅವರ ಇಚ್ಛಾನುಸಾರ ಎಲ್ಲರೂ ತಟಸ್ಥನಿಂತುಕೊಂಡರು ಆ ಮಾರ್ಗವನ್ನು ಬಿಟ್ಟು ಸುತ್ತುವರಿದು ಬರುವ ಮಾರ್ಗದತ್ತ ಎಲ್ಲರೂ ಹೊರಳ ಬೇಕೆಂದು ಆದೇಶವಿತ್ತರು. ಯಾವುದನ್ನು ತಿಳಿಯದ ಜನ ಸ್ವಾಮಿಗಳು ಹೀಗೇಕೆ ಹೇಳುತ್ತಿದ್ದಾರೆ. ಸೀದಾ ದಾರಿಯನ್ನು ಬಿಟ್ಟು ಈ ಸುತ್ತುವರಿದ ದಾರಿಯಲ್ಲಿ ಹಾಯುವುದೇಕೆ ಎಂದು ಗುಜು ಗುಜು ನುಡಿಯುತ್ತ ನಿರ್ವಾಹವಿಲ್ಲದೇ ದಾರಿ ಕ್ರಮಿಸಹತ್ತಿದರು. ಮತ್ತೆ ಮೆರವಣಿಗೆ ಮುಂದೆ ಸಾಗಿತು. ಆ ಚಪ್ಪರದ ಮನೆ ಬಹಳ ಸಣ್ಣದಾಗಿದ್ದು. ಹಿಂಬದಿಯ ಗೋಡೆಗೆ ಹತ್ತಿಯೇ ಆ ದಾರಿ ಹೋಗುತ್ತಿತ್ತು. ಮೆರವಣಿಗೆಯು ಸುತ್ತುವರೆದು ಮಠ ತಲುಪಬೇಕಾಗಿತ್ತು. ಅತ್ತ ಮನೆಯ ಮುಂದಿನ ಚಪ್ಪರ ಧೊಪ್ಪ ಎಂಬ ಭಯಾನಕ ಶಬ್ದ ಕೇಳಿ ಬಂತು ಅದರೊಂದಿಗೆ ಹೊಗೆಯಂತೆ ಧೂಳು ದಿಗ್ಗದಿಗಂತದಲ್ಲಿ ಮೇಲೇರತೊಡಗಿತು. ಹೊಗೆ ಬಾಂಬಿನಂತೆ ಮೇಲೇಳುತ್ತಿರುವ ಧೂಳನ್ನು ನೋಡಿ ಆ ಭಯಂಕರವಾದ ಶಬ್ದವನ್ನು ಕೇಳಿ ಏನೋ ಅನಾಹುತ ಸಂಭವಿಸಿರಬಹುದೆಂದು ಮೆರವಣಿಗೆಯಲ್ಲಿ ಪಾಲ್ಗೊಂಡ ಜನ ಜಂಗುಳಿ ಗಾಬರಿಯಾಗಿ ಸ್ವಾಮಿಗಳತ್ತ ನೋಡತೊಡಗಿದರು. ಆ ಮನೆಯ ಮುಂದಿನ ಚಪ್ಪರ ಕುಸಿದು ಬಿದ್ದಿದೆ ಹೋಗಿ ನೋಡಿಬನ್ನಿ ! ಎಂದು

ಗುರುಗಳು ಅಂದಾಗ ಓಡಿಹೋಗಿ ನೋಡಲಾಗಿ ಅದರಂತೆಯೇ ನಡೆದಿತ್ತು. ಮೆರವಣಿಗೆ ಚಪ್ಪರದ ಬುಡದಲ್ಲಿ ಸರಿಯಾಗಿ ಬರುವುದಕ್ಕೂ ಅದು ಕುಸಿದು ಬೀಳುವುದಕ್ಕೂ ಸರಿ ಬೀಳುತ್ತಿತ್ತು. ಇಂಥಃದನ್ನು ತಪ್ಪಿಸಿದ ಸ್ವಾಮಿಗಳ ಆಗಾಧ ದೃಷ್ಟಿಯ ಮಹಿಮೆಯನ್ನು ನೋಡಿ ಜನ ಗಾಬರಿಯಾದರು. ಅವರ ಬ್ರಹ್ಮತೇಜಸ್ಸಿನ ಜ್ಞಾನ ದೃಷ್ಟಿಯ ಮುಂದೆ ಎಲ್ಲರೂ ತಲೆಬಾಗಿ ಗುರುವರ್ಯರನ್ನು ಬಾಯಿತುಂಬಾ ಕೊಂಡಾಡುತ್ತ ಮಹಿಮೆಯನ್ನು ಹೊಗಳುತ್ತ ಬಂದು ಮಠ ವನ್ನು ಮುಟ್ಟಿದರು.

ಗುರು ಚನ್ನವೃಷಭೇಂದ್ರ ಮಹಾ ಚರಪಟ್ಟಾಧ್ಯಕ್ಷರು ಇನ್ನೂ ಅಗಾಧ, ಅಮೋಘ, ಅಘಟಿತ, ಅಪ್ರತಿಮ, ಅನಂತ ಮಹಿಮೆಗಳ ದೃಷ್ಟಿಕೋನವುಳ್ಳವ ರಾಗಿದ್ದರು. ಫಾಲನೇತ್ರನ ರೌದ್ರ ದೃಷ್ಟಿಯನ್ನೇ ಹೊಂದಿದ್ದರು. **ಶಿವನ ಮೂರನೆಯ ಕಣ್ಣಿನಲ್ಲಿದ್ದ ಶಕ್ತಿ ಇವರ ಜ್ಞಾನ ಚಕ್ಷುವಿನಲ್ಲಿತ್ತು.** ಜ್ಞಾನ ಜ್ಯೋತಿ ಅತ್ಯಮೂಲ್ಯವಾದ ಕೋಟಿಸೂರ್ಯ ಪ್ರಕಾಶದಂತೆ ಹೊಳೆ ಯುತ್ತ ಹೊರ ಹೊಮ್ಮುತ್ತಿತ್ತೆಂದು ಕಣ್ಣಾರೆ ಕಂಡವರು ಇನ್ನೂ ಇದ್ದಾರೆ. ಒಮ್ಮೆ ಮಾಗಣಗೇರಿಯ ಗೊಲ್ಲಾಳಪ್ಪಗೌಡ ಹದಗಲ್ಲ ಎಂಬವರು ತಮ್ಮ ಪೂರ್ವಾ ರ್ಜಿತ ಊರಾದ ಕುದರಗುಂಡ ಎಂಬ ಗ್ರಾಮಕ್ಕೆ ಪ್ರತಿವರ್ಷ ಹೋಗುವ ಹಾಗೆ ಗುರುಗಳನ್ನು ಕರೆದುಕೊಂಡು ಹೋಗಿದ್ದರು. ಇವರ ಮನೆಯಲ್ಲಿಯೇ ಎಡ ಭಾಗದ ಅರ್ಧ ಮನೆಯಲ್ಲಿ ಗೌಡನ ಭಾಂದವರಲ್ಲಿಯೇ ಒಬ್ಬನಾದ ಮಲ್ಕಪ್ಪ ಗೌಡ ಪಾಟೀಲ ಎಂಬಾತನೊಬ್ಬ ವಾಸವಾಗಿದ್ದನು. ಒಂದೇ ಪಡಸಾಲೆಯ ಲ್ಲಿಯೇ ಇಬ್ಭಾಗ ಮಾಡಿಕೊಂಡು ಒಂದೇ ತಲಬಾಗಿಲಿನಿಂದ ತಿರುಗಾಡುತ್ತಿದ್ದರು. ಗುರುಗಳ ಮಹತ್ವದ ಕಾರ್ಯಗಳನ್ನು, ನೈಜವಾದ ಪವಾಡಗಳನ್ನು ಕೇಳಿ ಅರಿತ ಮಲ್ಕಪ್ಪಗೌಡ ಪ್ರಸಾದಿಕನಾಗಬೇಕೆಂದು ತಿಳಿದು ಗುರುಗಳಿಂದ ಅಭಯ ಹಸ್ತ ಪಡೆಯುವುದಕ್ಕಾಗಿ ಬಯಸಿ 'ಒಂದು ದಿನ ಗುರುಗಳಿಗೆ ಬಿನ್ನ ಹೇಳಿದನು. ಗುರುಗಳು ಅಲ್ಲಿಗೆ ಬಂದ ಮರುದಿನವೇ ಈ ಬಿನ್ನ ನಡೆಯಿತು. ಮಧ್ಯಾಹ್ನ ಹನ್ನೆರಡು ಘಂಟೆಯೊಳಗಾಗಿ ಪೂರ್ತಿ ಅಡಿಗೆಯ ವ್ಯವಸ್ಥೆ ಮುಗಿಸಿಕೊಳ್ಳುವೆ. ಮಧ್ಯಾಹ್ನದ ಪೂಜೆ ನಮ್ಮ ಮನೆಯಲ್ಲಿಯೇ ನಡೆಯಬೇಕು ಹಾಗೂ ನನಗೆ ತಮ್ಮ ಅನುಗ್ರಹ ದೊರೆಯಬೇಕೆಂದು ಬಿನ್ನವಿಸಿಕೊಂಡಿದ್ದನು. ಆ ಭಕ್ತನ

ಅನುಮತಿಯ ವೇಳೆಗೆ ಗುರುಗಳು ಮುಂಜಾನೆಯ ಪೂಜೋಪಹಾರ ತೀರಿಸಿ ಕೊಂಡು ಕುಳಿತಿದ್ದರು. ಹೊತ್ತು ಏರುತ್ತ ಏರುತ್ತ ಬಂದಂತೆಲ್ಲ ಬಿಸಿಲಿನ ಬೇಗೆ ಯಿಂದ ಗುರುಗಳಿಗೆ ಕುದಿಯ ಛಾಯೆ ಬಡಿಯ ತೊಡಗಿತು. ಬಿಸಿಲಿನ ಪ್ರಖರ ಹೆಚ್ಚಾಯಿತು. ಕುಳಿತಲ್ಲಿಂದಲೇ ಮಲ್ಕಪ್ಪಗೌಡನ ಕಾರ್ಯಚರಣೆಗಳನ್ನೆಲ್ಲ ವೀಕ್ಷಿ ಸುತ್ತಿದ್ದರು. ಆವನು ಆ ಹೊತ್ತಿಗೆ ತನ್ನ ಸ್ನಾನವನ್ನು ತೀರಿಸಿಕೊಂಡು ಊರ ಲ್ಲಿಯ ಇದ್ದ ಬಿದ್ದ ದೇವರುಗಳಿಗೆಲ್ಲ ಹೋಗಿ ಬರಹತ್ತಿದನು. ಊರಲ್ಲಿಯ ಪ್ರತಿ ದೇವರಿಗೂ ನೈವೇದ್ಯ ಕಳಿಸಹತ್ತಿದನು. ನಮ್ಮ ವೀರಶೈವ ಧರ್ಮದಲ್ಲಿ-

**ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ।**
**ತತ್ತೃಪ್ತ್ಯಾ ತನ್ಮಯಂ ವಿಶ್ವಂ ತೃಪ್ತಿಮೇತಿ ಚರಾಚರಂ॥**

ಶಿವಯೋಗಿಯಾದ ಜಂಗಮರನ್ನು ಮೊದಲು ಉಣಿಸಿ ನಂತರ ದೇವರಿಗೆ ನೈವೇದ್ಯ ಹಿಡಿಯಬೇಕು. ಶಿವಯೋಗಿಗೆ ತೃಪ್ತಿ ಪಡಿಸದೆ ಶಿವನಿಗೆ ನೈವೇದ್ಯ ಹಿಡಿಯಬಾರದು.

ಅಲ್ಲದೆ ಸ್ವಾಮಿಗಳ ಎದುರಿನಲ್ಲಿಯೇ ಈ ಓಡಾಟ ನಡೆಯಿತು. ಇದರ ಬಗ್ಗೆ ಗೊಲ್ಲಾಳಪ್ಪಗೌಡರು ಆಗಾಗ ಎಚ್ಚರಿಕೆ ಕೊಟ್ಟರೂ ಅದನ್ನು ಲೆಕ್ಕಿಸಲಿಲ್ಲ. ಗುರುಗಳ ಪೂಜೆಯ ವೇಳೆ ಮೀರುತ್ತಿದೆ. ಬೇಗ ಪೂಜೆಯ ಸಿದ್ಧತೆಯಾಗಲಿ ಎಂದು ಎಷ್ಟು ಹೇಳಿದರೂ ಕೇಳದೆ ತನ್ನದೇ ಆದ ಕಲ್ಲು ದೇವರ ಭಕ್ತಿಯನ್ನೇ ಆಚರಣೆಯಲ್ಲಿ ತಂದನು. ಲಕ್ಕವ್ವ, ಮರಗವ್ವ, ದ್ಯಾಮವ್ವ, ಸಿದ್ದಯ್ಯ, ಸಿಂಗಯ್ಯ, ಹುಸೇನಸಾಬ ಎಂದೆಲ್ಲ ಊರ ದೇವರಿಗಳಿಗೆಲ್ಲ ಹೋಗಿ ಬರುತ್ತ ನೈವೇದ್ಯ ಕಳಿಸುತ್ತ ಕುಳಿತನು. ಇದರಿಂದಾಗಿ ಗುರುಗಳು ಉದ್ರೇಕಗೊಳ್ಳ ಹತ್ತಿದರು. ಇಷ್ಟಲ್ಲದೆ ಗುರುಗಳ ಎದುರಿನಲ್ಲಿಯೇ ಸ್ವತಃ ತಾನು ಕೈಯಲ್ಲಿ ನೀರು ಭಸ್ಮಗಳನ್ನು ಹಿಡಿದು ಪಡಶಾಲೆಯಲ್ಲಿ ನಿರ್ಮಿಸಿಕೊಂಡ ಕಲ್ಲಿನ ಹಿರೋಡೆಪ್ಪನಿಗೆ ಪೂಜೆ ನೆರವೇರಿಸತೊಡಗಿದನು. ಇದನ್ನು ಕಣ್ಣಾರೆ ಕಂಡ ಗುರುಗಳು ಸಿಟ್ಟಿನಿಂದ ಗೊಲ್ಲಾಳ !! ಎಂದು ಗೌಡನನ್ನು ಕೂಗಿದರು. ಗೊಲ್ಲಾಳಪ್ಪಗೌಡ ಓಡಿ ಬಂದು ಭಯ ಭಕ್ತಿಯಿಂದ ಏನಾಗಬೇಕೆಂದು ಗುರುಗಳಲ್ಲಿ ವಿಚಾರಿಸಿದಾಗ, ನನ್ನ ಜಳಕ ಪೂಜಾ ನಿನ್ನ ಮನೆಯಲ್ಲಿಯೇ ಆಗಲಿ ನಡೆ ಎಂದು ಎದ್ದೇಬಿಟ್ಟರು. ಸಿಟ್ಟಿನಿಂದ ಕಂಪಿಸುತ್ತ ಎದ್ದ ಗುರುಗಳ ಕೈಹಿಡಿದು ಗೊಲ್ಲಾಳಪ್ಪಗೌಡ ತನ್ನ

ಸ್ನಾನದ ಮನೆಯತ್ತ ಕರೆದೊಯ್ಯುತ್ತಿರುವಾಗ ಅಲ್ಲೇ ಎದುರಿನಲ್ಲಿ ಹಚ್ಚಿದ ಐದು ಗೋದಿಯ ಚೀಲಗಳು ತೆಪ್ಪೆಯ (ನಿಟ್ಟಿನ) ಮಧ್ಯದಲ್ಲಿಯ ಒಂದು ಚೀಲ ಸಿಡಿದು ಕೆಳಗೆ ಬಿದ್ದುಬಿಟ್ಟಿತು. ಹೀಗೇಕೆಂದು ಗಾಬರಿಗೊಂಡ ಗೌಡ ಗುರುಗಳ ಮುಖ ನೋಡಿದ. ಕೋಪೋದ್ರೇಕದಿಂದ ಗುರುಗಳ ಕಣ್ಣುಗಳು ಪ್ರಖರವಾಗಿ ನೆಟ್ಟ ದೃಷ್ಟಿಯಿಂದ ಆ ಚೀಲಗಳನ್ನೇ ದಿಟ್ಟಿಸುತ್ತಿರುವುದು ಕಂಡುಬಂದಿತು. ಒಂದರ ಮೇಲೊಂದರಂತೆ ಐದು ಚೀಲಗಳ ನಿಟ್ಟು ಇದ್ದಿತು. ಗುರುವರ್ಯರ ರೌದ್ರದೃಷ್ಟಿ ಈ ತೆಪ್ಪೆಯ ಮಧ್ಯದಲ್ಲಿರುವ ಮೂರನೆಯ ಚೀಲದ ಮೇಲೆ ಬಿದ್ದಿತು. ಒಮ್ಮೆಲೇ ಆ ಚೀಲ ಸಿಡಿದು ಹೊರಗೆ ಬಿದ್ದಿತು. ಮಧ್ಯದ ಚೀಲ ಜಗ್ಗಿ ವಗೆದಂತಾಯಿತು. ಗುರುಗಳ ಬದಿಯಲ್ಲಿಯೇ ನಿಂತಿದ್ದ ಗೌಡ ಇದನ್ನು ಪ್ರತ್ಯಕ್ಷ ಕಂಡನು. ಅವರ ದೃಷ್ಟಿಯಲ್ಲಿರುವ ದಿವ್ಯ ತೇಜಸ್ಸನ್ನು ಕಂಡು ಬೆರಗಾದನು. ಈ ಅಗಾಧ ಲೀಲೆಗೆ ತರ ತರ ನಡುಗುತ್ತ ಗೌಡನು ಲಗು ಬಗೆಯಿಂದ ಓಡಾಡಿ ಅವರ ಕೈ ಕೈಯಲ್ಲಿ ಕೆಲಸಮಾಡಿ ಪೂಜೋಪಚಾರಕ್ಕೆ ಅಣಿ ಮಾಡಿಕೊಟ್ಟನು. ಮರುದಿವಸ ಸ್ವಾಮಿಗಳು ತಿರುಗಿ ಮಾಗಣಗೇರಿಗೆ ಹೊರಟಾಗ ಮಾರ್ಗ ಮಧ್ಯದಲ್ಲಿ ಗಾಡಿ ಚಲಿಸುತ್ತಿರುವಾಗ ನಡೆದ ವಿಷಯದ ಬಗ್ಗೆ ಅಂಜುತ್ತಲೇ ಕೇಳಿದನು. ಅವನು ಇನ್ನೂ ಉಳಿದ ಮಗ ! ನನಗೆ ಬಿನ್ನ ಕೊಟ್ಟಿರುವುದು ತಿಳಿಯದೇ ಅಪಚಾರ ಮಾಡಿದ ನನ್ನ ಸಾಮಾನ್ಯರಂತೆ ಕಂಡ ಅವನ ಮೇಲೆಯೇ ಈ ದೃಷ್ಟಿ ಹಾಯಿಸ ಬೇಕೆಂದು ಮಾಡಿದ್ದೆ ಎಂದು ಅಂದು ಸುಮ್ಮನಾದರಂತೆ.

ಇಂಥ ಅಘಟಿತ ಘಟನಾಶಕ್ತಿಯ ದೃಷ್ಟಿಯುಳ್ಳ ಗುರುಮೂರ್ತಿಗಳು ಇಂಥ ಹುದೇ ಇನ್ನೊಂದು ಘಟನೆಯನ್ನು ಇಲ್ಲಿ ಸ್ಮರಿಸಬಹುದು.

ಪೈನೂರ ನಂದಗೇರಿ ಮನೆತದವ ನಿಂಗಪ್ಪ ಸಾಹುಕಾರನು ಆಚಾರ ಶೀಲನು ವಿನಯ ಶೀಲನು ಹರ ಗುರುಗಳಲ್ಲಿ ಭಕ್ತಿಯುಳ್ಳವನಾಗಿದ್ದನು. ಮಠದ ಕಾರಭಾರವೆಲ್ಲ ಅವನೆ ನಡೆಸಿಕೊಂಡು ಹೋಗುತ್ತಿದ್ದನು. ಹೀಗಾಗಿ ಗುರುಗಳಿಗೆ ನಂಬಿಗೆಯ ಭಕ್ತನಾಗಿದ್ದನು. ಒಮ್ಮೆ ಸಾಹುಕಾರನು ಮಠಕ್ಕೆ ಬಂದು ನನಗೆ ಬಹಳ ಅಡಚಣೆಯಾಗಿದೆ ತಾವು ಹೇಗಾದರೂ ಮಾಡಿ ಎರಡು (2000) ಸಾವಿರ ರೂಪಾಯಿ ಕೊಡಬೇಕೆಂದು ಬೇಡಿಕೊಳ್ಳುತ್ತಾನೆ. ನೀವು ಕೊಟ್ಟರೆ ಮಾತ್ರ ನನ್ನ ಮರ್ಯಾದೆ ಉಳಿಯುವದು ಎಂದು ಹೇಳಿದನು. ಕಷ್ಟದಲ್ಲಿರುವ

ಮನುಷ್ಯನಿಗೆ ಸಹಾಯ ಮಾಡುವದು ಮಾನವತಾ ಧರ್ಮ" ಎಂಬಂತೆ ಗುರುವರ್ಯರು ಸೇವಾ ನಿರತನಾದ ಗುರು ಬಸಯ್ಯನಿಗೆ ಹಣಕೊಡಲು ತಿಳಿಸಿದರು. ಆಗಿನ ಕಾಲದ ಎರಡು ಸಾವಿರ ರೂಪಾಯಿ ಬೆಳ್ಳಿಯ ಹಣ ತೆಗೆದುಕೊಂಡು ಹೋಗಿ ತನ್ನ ಅಡಚಣೆಯನ್ನು ಸಾಗಿಸಿ ಉಳಿದ ಹಣದಿಂದ ವ್ಯಾಪಾರ ಮಾಡತೊಡಗಿದನು. ಗುರುಗಳವರ ಆಶೀರ್ವಾದದಿಂದ ದೊಡ್ಡ ಶ್ರೀಮಂತನಾಗಿ ಸುತ್ತಮುತ್ತಲಿನ ಗ್ರಾಮಗಳಿಗೆಲ್ಲ ಲೇವಾದೇವಿ (ಬಡ್ಡಿವೆವಹಾರ) ಮಾಡತೊಡಗಿದನು. ಆಗ ಗುರುವರ್ಯರು ನಿಂಗಪ್ಪ ಸಾಹುಕಾರನಿಂದ ಹಣ ತೆಗೆದುಕೊಂಡು ಬರಲು ಗುರು ಬಸಯ್ಯನಿಗೆ ಕಳಿಸಿದರು. ನಾನು ಆಗಲೆ ಮುಟ್ಟಿಸಿದ್ದೇನೆಂದು ಸುಳ್ಳು ಹೇಳಿ ಕಳಿಸಿದನು. "ವಿನಾಶಕಾಲೇ ವಿಪರೀತ ಬುದ್ಧಿ" ಎನ್ನುವಂತೆ ಅವನ ಮನಸ್ಸು ವಿನಾಶದತ್ತ ಸಾಗತೊಡಗಿತು. ಒಮ್ಮೆ ಮಠಕ್ಕೆ ಬಂದಾಗ ಗುರುಗಳು ಗುರು ಮಠದಲ್ಲಿ ಆಗತಾನೇ ಶಿವಪೂಜಾ ನೆರವೇರಿಸಿ ಊಟ ತೀರಿಸುತ್ತಿದ್ದರು. ಅವನು ಬಂದಿರುವ ಸುದ್ದಿ ಗುರುಗಳ ಕಿವಿಯವರೆಗೂ ಬಂದು ಮುಟ್ಟಿತ್ತು. ಸಮಯ ಕಾಯುತ್ತಿದ್ದ ಗುರುಗಳಿಗೆ ಇದು ಅನಾಯಾಸವಾಗಿಯೇ ಬಂದೊದಗಿದಂತಾಯಿತು. ಸಾಹುಕಾರ ಬಂದ ಸುದ್ದಿ ಗುರುಬಸಯ್ಯ ಬಂದು ಗುರುಗಳಿಗೆ ಅರುಹಿದ ಕೂಡಲೇ ಅವರು ಎಲ್ಲಿರುವನೆಂದು ಕೇಳಿದರು. ಅದಕ್ಕೆ ಗುರುಬಸಯ್ಯನವರು ಇಲ್ಲೆ ಭಾವಿಯ ಬಾಲಗಲ್ಲಿಗೆ ಆನಿಸಿ ನಿಂತುಕೊಂಡಿರುವನೆಂದು ಹೇಳಿದರು. ಮಠದಲ್ಲಿಯೇ ಒಂದು ಭಾವಿ ಇದೆ ಅದರ ಮೂಲೆಯೊಂದು ಗುರು ಮಠಕ್ಕೇ ಎದುರಾಗಿದೆ, ಅದೇ ಮೂಲೆಗೆ ಒಂದು ಆಳೆತ್ತರದ ಬಾಲಗಲ್ಲು ಚಾಪಣೆಯ ಆಕಾರದ್ದು, ನೆಲದಲ್ಲಿ ಒಂದು ನಾಲ್ಕಾಂಶಭಾಗ ಹುಗಿದು ನಿಲ್ಲಿಸಿದ್ದರು. ಅದಕ್ಕೆ ಬೆನ್ನುಕೊಟ್ಟೇ ಸಾಹುಕಾರ ನಿಂತಿದ್ದ. ಸ್ವಾಮಿಗಳಿಗೆ ಸುದ್ದಿ ಮುಟ್ಟಿದ ಕೂಡಲೇ ಸಾಹುಕಾರ ಅಂಜಿ ಅಲ್ಲಿಂದ ಕಾಲ್ಕಿತ್ತು ಊರಿಗೆ ಹೊರಟು ಹೋದ. ಮುಂದೆ ಆರಕ್ಷಣದಲ್ಲಿಯೇ ಸ್ವಾಮಿಗಳು ಊಟ ತೀರಿಸಿ ಬರುತ್ತಿದ್ದಂತೆಯೇ ಸಿಟ್ಟಿನಿಂದ ಎಲ್ಲಿ ? ಆ ಸಾಹುಕಾರ ? ಎಂಬ ಪ್ರಶ್ನೆಯೊಂದಿಗೆ ಅವರ ನೇರ ದೃಷ್ಟಿ ಆ ಬಾಲಗುಂಬಕ್ಕೇ ಬಿದ್ದಿತು. ಕ್ರೋಧ ಮಯ ದಿವ್ಯ ದೃಷ್ಟಿ ಸೋಂಕಿದೊಡನೆಯೇ ಅಂಥ ಭಯಂಕರವಾದ ಬಾಲಗಲ್ಲು ಕಿತ್ತಿಬಿದ್ದಿತು. ಅವನ್ನು ಕಂಡ ಮಠದ ಸಿಬ್ಬಂದಿ, ತಂಗಿ ಗುರುಲಿಂಗಮ್ಮ ಎಲ್ಲರೂ ಗಾಬರಿಯಾದರು. ಕಲ್ಲುನಿಂತ ಜಾಗದಿಂದ ನಾಲ್ಕು ಫೂಟು ಅಂತರದಲ್ಲಿ ಹಾರಿಬಿದ್ದಿತು.

ಒಂದು ವೇಳೆ ಪೈನೂರ ಸಾಹುಕಾರನೇ ಅಲ್ಲಿ ನಿಂತಿದ್ದರೆ ಅವನ ಗತಿ ಏನಾಗುತ್ತಿತ್ತೆಂದು ಊಹಿಸಲೂ ಅಸದಳವಾಯಿತು. ಕೆಲವು ದಿವಸಗಳ ನಂತರ ನಂದಗೇರಿ ಸಾಹುಕಾರನು ಮರಣಹೊಂದಿದ ಸುದ್ದಿ ಗುರುಗಳಿಗೆ ಹೇಳಿ ಕಳಿಸಿದರು. ಗುರುಗಳು ಮತ್ತು ಶಿಷ್ಯನಾದ ಗೊಲ್ಲಾಳಪ್ಪ ಹದಗಲ್ ಮತ್ತಿತರರ ಜೊತೆಗೂಡಿ ಪೈನೂರಕ್ಕೆ ಹೋಗಿ ಸಾಹುಕಾರನ ಹೆಣವನ್ನು ನೋಡಲಾಗಿ ಋಣ ಮುಕ್ತನಾಗದೆ ಸತ್ತಿರುವದರಿಂದ ಇವನಿಗೆ ಮುಕ್ತಿ ಆಗಿಲ್ಲವೆಂದು ಹೇಳಿ ಮಾಗಣಗೇರಿಗೆ ಹೊರಟು ಬಂದರು.

ನಂದಗೇರಿ ನಿಂಗಪ್ಪ ಸಾಹುಕಾರನು ನನ್ನ ಮಕ್ಕಳು ಮೊಮ್ಮಕ್ಕಳು ಕುಳಿತುಕೊಂಡು ತಿಂದರೂ ಸವೆಯಲಾರದಷ್ಟು ಸಂಪತ್ತು ಗಳಿಸಿದ್ದೇನೆ ಎಂದು ಜನರ ಮುಂದೆ ಹೇಳುತ್ತಿದ್ದನಂತೆ ಅವನ ಸಂಪತ್ತು ಅವನು ಇರುವ ಕಾಲದಲ್ಲಿಯೇ ಕ್ಷೀಣಿಸುತ್ತ ಬಂದು ಮಗನಿಂದ ಸಂಪೂರ್ಣ ಹಾಳಾಗಿದೆ. ಕೇವಲ ಹೊಲಗಳು ಮಾತ್ರ ಉಳಿದಿವೆ.

## ಪತಿಯನ್ನು ಕೂಡಿಸಿದ್ದು

ಕರವಿನಾಳ ಸಾಹುಕಾರನ ಮಗಳಾದ ಶಾಂತಾಬಾಯಿ ಎಂಬಾಕೆಯನ್ನು ಕಲಕೇರಿಯ ಹೆಗ್ಗಣ ದೊಡ್ಡಿಯವರ ಮನೆಗೆ ಕೊಟ್ಟಿತ್ತು. ಆಕೆಯ ಗಂಡನ ಹೆಸರು ಈರಗಂಟೆಪ್ಪ. ಯಾವದೋ ಕಾರಣಾಂತರಗಳಿಂದ ಅವಳನ್ನು ಅವಳ ಪತಿ ಬಿಟ್ಟು ಬಿಟ್ಟಿದ್ದ. ಈರಗಂಟೆಪ್ಪನ ತಂದೆ ಮಗನಿಗೆ ಇನ್ನೊಂದು ಮದುವೆ ಮಾಡಿದ. ಆದರೆ ಇದರಿಂದಾಗಿ ಸದಾ ಚಿಂತೆಯಲ್ಲಿ ತವರ ಮನೆಯಲ್ಲಿ ಕಾಲ ಕಳೆಯುತ್ತಿದ್ದಳು. ಸಾಹುಕಾರರ ಆಮಂತ್ರಣದ ಮೇರೆಗೆ ಗುರುಗಳು ಕರವಿನಾಳಕ್ಕೆ ಹೋದಾಗ ಗುರುಗಳ ಸೇವಾಭಾರವು ಶಾಂತಾಬಾಯಿಯೇ ಮಾಡುತ್ತಿದ್ದಳು. ಒಂದು ದಿವಸ ಗುರುಗಳು ಸ್ನಾನ ಮುಗಿಸಿಕೊಂಡು ಬಂದು ನೋಡುತ್ತಾರೆ ಗದ್ದುಗೆ ಹಾಕುವದರಲ್ಲಿ ಅಸ್ತವ್ಯಸ್ತ ಮಾಡಿದ್ದಳು. ಅದನ್ನು ಕಂಡು ಗುರುಗಳು "ಯಾಕವಾ ಶಾಂತಾಬಾಯಿ ಬ್ಯಾಸರಾದಂತಾಗಿದೆ, ಗದ್ದಿಗೆ ಸರಿಯಾಗಿ ಹಾಕಿಲ್ಲ" ಅಂದರು. ಅದಕ್ಕವಳು ದುಃಖಿಸುತ್ತ ಗುರುಗಳೇ ! ನಾನು ಎಷ್ಟು ದಿನ ಅಂತ ತವರ ಮನೆಯಲ್ಲಿ ಕುಳಿತುಕೊಳ್ಳಬೇಕು. ನಿಮ್ಮ ಕೃಪಾಶೀರ್ವಾದ

ಸಿಗುವಲ್ಲಿದ್ದ ನನ್ನ ದುಃಖ ಪರಿಹಾರ ಇಲ್ಲವೇ ? ಎಂದು ಅಂದಳು. ಅದಕ್ಕೆ ಅಪ್ಪಾವರು "ಆಗಲವಾ ಇನ್ನ ನಿನಗಂಡ ಬಂದು ಕರೆದುಕೊಂಡು ಹೋಗುವನು ಎಲ್ಲಾ ಒಳ್ಳೆಯದಾಗುವದು" ಎಂದು ನುಡಿದರು. ಮುಂದೆ ನಾಲ್ಕಾರು ದಿನಗಳ್ಲಿಯೇ ಆಕೆಯ ಗಂಡ ಬಂದು ಕರೆದುಕೊಂಡು ಹೋದನು.

## ದೀಕ್ಷಾ ಪ್ರಕರಣ

ಈ ಪ್ರಕಾರ ತ್ರಿಪುವಿರಹಿತವಾದಂಥ ಸ್ವಯಂ ಜ್ಯೋತಿ ಪ್ರಕಾಶಮಯ ವಾದ ಶಿವನೇ ತಾನು. ಇಂಥಃ ಶಿವಸೃಷ್ಟಿಯಲ್ಲಿ ಪ್ರಾಮುಖ್ಯವಾದ ಸ್ವಸ್ವರೂಪ ಮಂಪವೆಂದು ತಿಳಿದು ಮತ್ತು ಪರಬ್ರಹ್ಮ ಸ್ವರೂಪವು ಸತ್-ಚಿತ್-ಆನಂದ ನಿತ್ಯ ಪರಿಪೂರ್ಣ ನಿರಾಕಾರ ನಿರ್ವಿಕಲ್ಪ ನಿರಾಮಯವೆಂಬುದಾಗಿ ವೇದಾಂತ ಶಾಸ್ತ್ರಗಳ ತಿರುಳು ಎಂಬುದನ್ನು ಮನನ ಮಾಡಿಕೊಂಡು ಇರುತ್ತಿರುವ ಮಹಾ ಸ್ವಾಮಿಗಳಿಗೆ ಒಂದು ಪ್ರಕರಣ ಎದುರಾಗಿ ಊರ ಪ್ರಮುಖರಿಗೂ ಇವರಿಗೂ ವೈಮನಸ್ಸುಂಟಾಯಿತು. ಅದೇ ಊರಿನ ಪಟ್ಟೇದಾರ ಹಾಗೂ ರೈತರಾದ ಮಾಲಿಪಾಟೀಲ ಕೆಂಚಪ್ಪಗೌಡ, ಶಿವಪ್ಪಗೌಡರೆಂಬ ಹಂಗೆಗುರುಬರು ವಾಸವಾಗಿದ್ದರು. ಮಾಲಿಗೌಡರಾದ ಇವರೂ ಕೂಡಾ ಊರ ಪ್ರಮುಖರಲ್ಲಿ ಒಬ್ಬರಾಗಿದ್ದರು. ಒಮ್ಮೆ ಇವರ ಮನಸ್ಸಿನಲ್ಲಿ ಲಿಂಗದೀಕ್ಷೆ ಪಡೆದು ಶಿವಭಕ್ತರಾಗಬೇಕೆಂಬ ಮಹಾದಾಸೆ ಹುಟ್ಟಿತು. ತಮ್ಮ ಈ ಮಹಾದಾಸೆಯನ್ನು ಕೂಲಂಕುಶವಾಗಿ ವಿಚಾರಿಸುತ್ತ ಬಂದರೂ ಅದು ಬೃಹದಾಕಾರವಾದ ಸುಶೇಪತಾಳಿ ಹಾಗೇ ಉಳಿಯುತ್ತಿತ್ತು. ಕೊನೆಗೂ ಗೌಡರು ತಮ್ಮ ಆಕಾಂಕ್ಷೆಯನ್ನು ಮಹಾ ಸ್ವಾಮಿಗಳಾದ ಶ್ರೀ ಚನ್ನವೃಷಭೇಂದ್ರ ಗುರುಗಳಲ್ಲಿ ತೋಡಿಕೊಂಡರು. ಅವರು ನಯ ವಿನಯ ಭಯ ಭಕ್ತಿ ಗುರುವಿನಲ್ಲಿಟ್ಟ ಅಚಲ ಶ್ರದ್ಧೆ ಇವನ್ನೆಲ್ಲ ಮನಗಂಡು ಗುರುಗಳು ಲಿಂಗದೀಕ್ಷೆ ಕೊಡುವದಾಗಿ ಒಪ್ಪಿ ವಚನಕೊಟ್ಟರು. ಶಕೆ 1854 ಅಂಗೀರಸನಾಮ ಸಂವತ್ಸರ ಮಾಘ ಶು|| 10 (ದಶಮಿ) ರೋಜ ಗುರುವಾರ ತಾ|| 5- -1933 ಈ ಶುಭ ದಿನದಂದು ಕೊಡುವುದೆಂದು ನಿಶ್ಚಯವಾಯಿತು. ಇದು ಗಾಳಿಗೆ ಸಿಕ್ಕ ಜ್ವಾಲೆ ಹೇಗೆ ತೀವ್ರಗತಿಯಲ್ಲಿ ಮುಂದೆ ಸಾಗುವುದೋ ಹಾಗೆ ಒನ ಎರಡು ದಿನಗಳಲ್ಲಿ ಊರ ತುಂಬೆಲ್ಲ ಹಬ್ಬಿ ಹರಡಿಕೊಂಡಿತು. ಶ್ರೀಪ

ಜಾತಿಯಲ್ಲಿ ಹುಟ್ಟಿ ಶಿವ ಸಂಸ್ಕಾರವುಳ್ಳ ಬಹು ಅಮೂಲ್ಯ ಮತಸ್ಥರಾದ ನಮ್ಮ ಹೊರತು ಇನ್ನಿತರ ಜಾತಿ ಸಂಘದವರಿಗೆ ಲಿಂಗಧಾರಣೆ ಮಾಡುವುದೆಂದರೆ ಹೊಳೆಯಲೊಡನೆ ಬೇಗಸ್ತನ ಮಾಡಿಸುತಿಯೇ ಶು. ಈ ಹಿಂದೆ ಬಸವಣ್ಣ ಮಾದನಿಗೆ ಬ್ರಾಹ್ಮಣರ ಕನ್ಯೆಯನ್ನು ಕೊಡಿಸಿ ಲಗ್ನ ಮಾಡಿದಕ್ಕೆ ಬಿಜ್ಜಳನ ಕ್ರೌರ್ಯಕ್ಕೆ ಒಳಗಾಗಿ ಬಸವಣ್ಣ ಕಲ್ಯಾಣವನ್ನೇ ಬಿಟ್ಟು ಹೋಗಬೇಕಾಯಿತು. ಇದೇ ರೀತಿ ಕಲಬುರ್ಗಿಯ ಶರಣ ಬಸವೇಶ್ವರನು ಕಡಕೋಳ ಮಡಿವಾಳಪ್ಪನಿಗೆ ಶಿವಾಚಾರ್ಯನಿಂದ ದೀಕ್ಷೆಯನ್ನು ಕೊಡಿಸಿದ ಪ್ರಯುಕ್ತ ಜನ್ಮಸ್ಥಾನವಾದ ಅರಳಗುಂಡಿಗಿಯನ್ನು ಬಿಟ್ಟು ಹೋಗಬೇಕಾಯಿತು. ಅದರಂತೆ ಈ ಕುಲ ಹೀನನಾದ ಕೆಂಚಪ್ಪನಿಗೆ ನಮ್ಮ ಗುರುಗಳು ಲಿಂಗದೀಕ್ಷೆ ಕೊಟ್ಟರೆ ಇವರೂ ಸಹ ನಮ್ಮೂರ ಬಿಟ್ಟು ಹೋಗಬೇಕಾಗುತ್ತದೆ. ನಮ್ಮ ಅನುಮತಿ ಇಲ್ಲದೇ ಅದು ಹೇಗೆ ದೀಕ್ಷೆ ಕೊಡಲು ಒಪ್ಪಿದರು ? ಎಂದು ಇನ್ನಿತರ ಕುಲಶ್ರೇಷ್ಠರೂ ಪುರ ಪ್ರಮುಖರೂ ಒಟ್ಟುಗೂಡಿ ಈ ತೆರನಾಗಿ ಮಾತನಾಡಿಕೊಳ್ಳತೊಡಗಿದರು.. ಇದು ನಮ್ಮ ವೀರಶೈವ ಸಮಾಜದವರಿಗೆ ಅವಮಾನ. ಗುರುಗಳು ಇದನ್ನು ಮಾಡಬಾರದಾಗಿತ್ತು ನಡೆಯಿರಿ ಹೋಗಿ ಹೇಳಿ ಬರೋಣ. ದೀಕ್ಷೆ ಕೊಡುವುದು ಬೇಡವೆಂದು ಹೇಳಿ ಬಂದರಾಯಿತು ನಡೆಯಿರಿ ಎಂದು ಎಲ್ಲರೂ ಮಠದ ಕಡೆಗೆ ಬಂದರು. ಸ್ವಾಮಿಗಳ ಮುಂದೆ ತಮ್ಮೆಲ್ಲರ ವಿಚಾರಗಳನ್ನು ನಿವೇದಿಸಿಕೊಂಡರು. ಆದರೆ ಗುರುಗಳು ಒಪ್ಪಲಿಲ್ಲ. ಈಗಾಗಲೇ ನಾನು ಒಪ್ಪಿ ಮಾತು ಕೊಟ್ಟಿದ್ದೇನೆ ಕೊಟ್ಟ ವಚನ ಪಾಲಿಸಲೇಬೇಕು. ಇದಕ್ಕೆ ನೀವಾರೂ ಕೇಳುವವನು ಬೇಡ, ಹೊರಟು ಹೋಗಿರಿ ! ಎಂದು ನುಡಿದದ್ದಕ್ಕೆ ಎಲ್ಲರೂ ಕೋಪಗೊಂಡು ಎದ್ದು ಹೊರಟರು. ಸ್ವಾಮಿಗಳ ಎದುರು ವಾದಿಸುವಂತಿಲ್ಲ. ಒಂದೇ ಒಂದು ಮಾತು. ಅವರು ಅಂದದ್ದು ನಡೆಯಲೇಬೇಕು. ಅಷ್ಟಕ್ಕೇ ಅವರೆಲ್ಲ ಎದ್ದುಬಂದು ನೋಡೋಣ ಯಾವಾಗ ನಾವು ಹೇಳಿದಕ್ಕೆ ಅಲಕ್ಷ್ಯಮಾಡಿ ತನ್ನದೇ ಸಾಧಿಸುವ ಗುರುಗಳು ಅದು ಹೇಗೆ ದೀಕ್ಷೆಕೊಟ್ಟು ಬರುವರೋ ನೋಡೋಣ ಇವರ ಸಲುವಾಗಿ ಏನು ಬೇಕಾದರೂ ಆಗಲಿ ಹೆಣಗಳು ಸಾಲಾಗಿ ಬಿದ್ದರೂ ಬಿಡುವುದಿಲ್ಲ ತಿಳಿದೇ ಹೋಗಲಿ ಸ್ವಾಮಿಗಳವರ ಶೌರ್ಯ ಎಂದು ಠೊತೊಟ್ಟು ಕುಂತರು.

ಏನನ್ನು ಅರಿಯದ ಗುರುಗಳು ನಿಶ್ಚಯಿಸಿದ ದಿನದಂದು ಸರಿಯಾದ ವೇಳೆಗೆ ಕೆಂಚಪ್ಪಗೌಡನ ಅಗ್ರಹದ ಮೇರೆಗೆ ಅವರ ಮನೆಗೆ ದೀಕ್ಷೆ ಕೊಡಲು ಬಂದರು.

ಸ್ವಾಮಿಗಳ, ಬಂದು ಅವರ ಮನೆ ಸೇರುವುದೇ ತಡ ಅದನ್ನೇ ಕಾಯುತ್ತ ಕುಳಿತ ಪ್ರಮುಖ ವೃಂದವ ಬಡಿಗೆ, ಕೊಡ್ಲಿ ಮುಂತಾದ ಆಯುಧಗಳಿಂದ ಬಂದು ಗೌಡನ ಮನೆಯ ಮುಂದಿನ ತಲಬಾಗಿಲ ಹೊರಗೆ ಕಾಯುತ್ತ ಕುಳಿತರು. ಸ್ವಾಮಿಗಳು ಎಲ್ಲವನ್ನು ತೀರಿಸಿ ಹೊರಗೆ ಬರಲಿ ನಮ್ಮ ಕೈಯಿಂದ ಉಳಿದು ಹೋಗಲಿ ಎನ್ನುತ್ತ ಕುಳಿತುಕೊಂಡರು. ಈ ಸುದ್ದಿ ಒಳಗೆ ಆಸನಾರೂಢರಾದ ಗುರುವರ್ಯರಿಗೂ ಸಮಾಚಾರ ಮುಟ್ಟಿತು. ಇದನ್ನು ಕೇಳಿದ ಗೌಡರು ನಾವೂ ನಮ್ಮ ನಮ್ಮ ಆಯುಧಗಳನ್ನು ಸಿದ್ಧಪಡಿಸುವೆವು. ನಾಲ್ಕಾರು ಆಳ ಮಕ್ಕಳೊಡನೆ ನಾವೆಲ್ಲರೂ ಕೂಡಿ ಅವರೊಡನೆ ಕಾದಾಡಲು ಸಿದ್ಧರಾಗುವೆವು ಎಂದು ಕೆಂಚಪ್ಪಗೌಡರು ಗುಡಗಿದರು. ಸ್ವಾಮಿಗಳು ಅದಕ್ಕೆ ಶಾಂತಚಿತ್ತರಾಗಿ ನೀವು ಸುಮ್ಮನಿರಿ ದೀಕ್ಷಾ ಕಾರ್ಯ ಮುಗಿಯಲಿ ನಾನು ಸ್ವತಃ ಹೊರಗೆ ಅವರೆದುರಿಗೇನೇ ಹಾಯ್ದು ಹೋಗುವೆ ಏನು ಮಾಡುವರೋ ನೋಡುವಾ ಎಂದು ಅಂದದ್ದಕ್ಕೆ ಮರುಮಾತ ನಾಡದೇ ಅವರು ಸುಮ್ಮನಾಗಿ ದೀಕ್ಷೆ ಪಡೆಯಲು ಕುಳಿತುಕೊಂಡರು. ದೀಕ್ಷೆ ತೆಗೆದು ಕೊಂಡವರ ಹೆಸರು ಈ ರೀತಿ ಇರುವದು-

ಕೆಂಚಪ್ಪಗೌಡ, ತಂದಿ ಮೇಲಪ್ಪಗೌಡ ಮಾಲೀ ಪಾಟೀಲ, ಶಿವಪ್ಪ ತಂದಿ ಅಮ್ಮಣ್ಣ, ಸಿದ್ರಾಮಪ್ಪ ತಂದಿ ದೇವಪ್ಪ. ಶಾಸ್ತ್ರೋಕ್ತವಾಗಿ ಪೂಜೋಪಚಾರ ಮಂತ್ರೋಪದೇಶಗಳನ್ನೆಲ್ಲ ಸಾಂಗವಾಗಿ ಮುಗಿಸಿಕೊಂಡು ಸ್ವಾಮಿಗಳು ಅವರಿಂದ ಬೀಳ್ಕೊಟ್ಟು ತೆರೆದ ಬಾಗಿಲದಿಂದಲೇ ಹಾಯ್ದು ಬಂದು ಮಠವನ್ನು ಸೇರಿ ವಿಶ್ರ ಮಿಸಿದರು. ಕಣ್ಣು ಬಿಡದೆ ಕಾಯುತ್ತ ಕುಳಿತ ಪುಂಡರು ಎಷ್ಟೊತ್ತು ಪೂಜಾ ದೀಕ್ಷೆ ಮಾಡುವದು ಸ್ವಾಮಿಗಳು ಒಳಗೆ ಇರುವರೋ ಇಲ್ಲವೋ ನೋಡಿರಿಕಥನಾ ಯಾರಾದರೂ ಒಬ್ಬರು ಹೋಗಿ ಮಠದಲ್ಲಿ ನೋಡಿ ಬರ್ರಿ ಎಂದಾಕ್ಷಣವೇ ಅವರ ಲ್ಲಿಯೇ ಒಬ್ಬ ಓಡಿಹೋಗಿ ಮಠದಲ್ಲಿ ನೋಡಲಾಗಿ ಮಹಾಸ್ವಾಮಿಗಳು ನಗುತ್ತ ಮಠವಲ್ಲಿ ವಿಶ್ರಮಿಸಿದ್ದುದನ್ನು ಕಂಡು ಗಾಬರಿಯಾಗಿ ಓಡೋಡುತ್ತ ಹೋಗಿ ಅವ ರಿಗೆ ತಿಳಿಸಿದನು. ಈ ಸುದ್ದಿಯನ್ನು ಕೇಳಿ ಎಲ್ಲರೂ ಗಾಬರಿಯಾದರು. ಹಾಂ ನಾವೆಲ್ಲ ಕಾಯುತ್ತ ಇಲ್ಲೇ ಕುಳಿತಿದ್ದರೂ ಹೇಗೆ ಹೊರಟು ಹೋದರು ? ಎಂದು ಗುಣು ಗುಣು ಮಾತಾಡುತ್ತ ತಮ್ಮ ತಮ್ಮ ಮನೆಯ ಕಡೆಗೆ ಹೊರಟು ಹೋದರು. ಈ ಮಹಿಮೆಯನ್ನರಿತ ಗೌಡರು ಹಾಗೂ ಊರ ಜನರೆಲ್ಲ ಸಂತು

ಪ್ಪರಾಗಿ ಸ್ವಾಮಿಗಳ ಘನ ಕಾರ್ಯಕ್ಕೆ ಮಹತ್ವ ಕೊಟ್ಟು ಅವರ ಹೆಸರನ್ನು ಕೊಂಡಾಡಿದರು.

ಈ ಪ್ರಕರಣದಿಂದ ಅಪ್ಪಪ್ಪಗೌಡ ಪೋಲಿಸಪನಿ ಎಂಬಾತನು ಸ್ವಾಮಿಗಳಿಗೆ ವಿಮುಖನಾಗಿ ವಿರೋಧಿಯಾದನು. ಅಪ್ಪಪ್ಪಗೌಡ ನಿಷ್ಠಾವಂತ ಶಿವಭಕ್ತ ಆಚಾರಶೀಲ ಶಿವಪೂಜಾ ನಿಷ್ಠನಾಗಿದ್ದನು. ಮೊದ-ಮೊದಲು ಸ್ವಾಮಿಗಳ ಸಹಕಾರಿಯಾಗಿ ಮಠದ ದೇಣಿಗಿಯಾಗಿ ಪ್ರತಿ ಶ್ರಾವಣ ಮಾಸದಲ್ಲಿ ಒಂದು ಚೀಲ ಅಕ್ಕಿ ಕೊಡುತ್ತ ಬಂದಿದ್ದನು. ಪುರ ಪ್ರಮುಖರಲ್ಲಿಯೇ ಅಗ್ರಗಣ್ಯನೂ, ಶಿರಿವಂತನೂ, ಧೈರ್ಯವಂತನೂ, ಸಾಹಸಿಯೂ, ಶಿವೋಪಾಸಕನೂ, ಸ್ವಾಮಿಗಳ ಸಹಚರಿಯಾಗಿ ಗುಪ್ತಾಲೋಚನೆಗಳಲ್ಲಿ ಒಬ್ಬನಾಗಿದ್ದ. ಅಪ್ಪಪ್ಪಗೌಡ ಇದೊಂದು ಘಟನೆಯಿಂದಾಗಿ ಸಿಡಿದು ದೂರವಾದನು. ಊರ ಮುಖ್ಯಸ್ಥರನ್ನೆಲ್ಲರನ್ನೂ ತನ್ನ ಅಂಕಿತದಲ್ಲಿಟ್ಟುಕೊಂಡ ಗೌಡ ಅವರೊಂದಿಗೆ ಮಠದ ದರ್ಶನಕ್ಕೂ ಬಾರದೇ ದೂರವಾಗಿಯೇ ಇರಹತ್ತಿದನು. ಕೊಡುತ್ತಿರುವ ದೇಣಿಗೆಯನ್ನು ನಿಲ್ಲಿಸಿಬಿಟ್ಟನು. ಅಲ್ಲದೆ ತನ್ನ ಸಮಾನಸ್ಥರಾದ ಇನ್ನಿತರ ಸಹಚರರಿಗೂ ಹೋಗದಂತೆ ಮಾಡಿದನು. ಹೀಗಿರುತ್ತ ಒಂದು ದಿನ ಸ್ವಾಮಿಗಳು ಕರ್ನಾಳಕ್ಕೆ ಸಾಹುಕಾರ ಕರಬಸಪ್ಪನ ಮನೆಗೆ ಆಮಂತ್ರಣ ಕೊಟ್ಟ ಪ್ರಯುಕ್ತ ಹೊರಟರು. ಮಾರ್ಗ ಮಧ್ಯದಲ್ಲಿ ಅಪಪ್ಪಗೌಡನ ಹೊಲದಲ್ಲಿ ಹಾಯ್ದು ಹೋಗಬೇಕಾಗುತ್ತಿತ್ತು. ಗುರುಗಳ ಕುದುರೆ ಸವಾರಿ ಹೋಗುವುದನ್ನು ಕಂಡ ಗೌಡ ಓಡುತ್ತ ಬಂದು ಹೊಲದಲ್ಲಿ ಹಾಯಬೇಡವೆಂದು ಹೇಳಿದ ಕೂಡಲೇ ಸ್ವಾಮಿಗಳು ನೆರೆಯ ಹತ್ತಿಯ ಹೊಲದಲ್ಲಿ ಕುದುರೆ ಸಾಗಿಸಿಕೊಂಡು ಹಾಯ್ದು ಹೋದರು. ಆ ವರ್ಷ ಹಾಯ್ದ ಹೊಲದ ಹತ್ತಿ ಹೆಚ್ಚಾಗಿ ಇಳುವರಿ ಕೊಟ್ಟಿತು. ಪ್ರತಿಸಲದಕ್ಕಿಂತಲೂ ಮೂರು ನಾಲ್ಕು ಪಟ್ಟು ಇಳುವರಿ ಹೆಚ್ಚಾಯಿತಲ್ಲದೆ ಹೆಚ್ಚಿನ ಧಾರಣೆಯಿಂದಲೇ ಮಾರಿತು ಅದರಿಂದಾಗಿ ಆ ಹೊಲದ ಮಾಲೀಕ ಇಮ್ಮಡಿ ಲಾಭ ಪಡೆದನು. ಅದೇ ಅಪಪ್ಪಗೌಡನ ಹೊಲದಲ್ಲಿ ಜೋಳದ ಬೆಳೆ ಕುಣಿಯುತ್ತಿತ್ತು. ಮುಂದೆ ತೆನೆ ಹಿರಿದಾಗ ಒಂದು ಜೋಳದ ತೆನೆ ಕಾಣಲಿಲ್ಲ. ಅದರ ಬದಲಾಗಿ ದೆವ್ವಗಾಡಗಿ ತೆನೆಗಳೇ ಹೊರಬಂದವು. ಸಂಪೂರ್ಣ ಹೊಲವೆಲ್ಲ ದೆವ್ವಕಾಡಗಿ ಆಗಿಬಿಟ್ಟಿತು.

ಮುಂದೆ ಕೆಲವು ದಿನಗಳಲ್ಲಿಯೇ ಪಂಗಡ ಮಾಡಿಕೊಂಡು ಕೆಲವೊಂದು ಜನ ಪ್ರಮುಖರನ್ನೊಡಗೊಂಡು ತಮಗಾಗಿ ಒಂದು ಪಟ್ಟದ್ದೇವರ ಮಠವನ್ನೇ

ಸ್ಥಾಪಿಸಿದರು. ಒಬ್ಬ ಪಟ್ಟಾಧಿಕಾರಿಯನ್ನು ತಂದು ಅಧಿಕಾರ ವಹಿಸಿಕೊಟ್ಟು ತಾವೆಲ್ಲ ಅವನ ಶಿಷ್ಯರಾಗಿ ಪರಿವರ್ತಿಸಿದರು, ಅದೇ ಮಠಕ್ಕೆ ಪ್ರತಿವರ್ಷ ವೇಣಿಗಿ ಕೊಡುವುದೂ ಪ್ರಾರಂಭವಾಯಿತು. ಕೆಲವು ವರ್ಷಗಳಾದ ಮೇಲೆ ಆ ಮಠದ ಪಟ್ಟದ್ದೇವರು ಶ್ರೀಶೈಲ ಮಲ್ಲಿಕಾರ್ಜುನನ ದರ್ಶನ ಸಲುವಾಗಿ ಹೋದವರು ಅಲ್ಲಿಯೇ ಸ್ವರ್ಗಸ್ಥರಾಗಿದ್ದಾರೆ. ಇದಲ್ಲದೆ ಮಠದ ಯಾವತ್ತೂ ಜವಾಬ್ದಾರಿಯನ್ನೆಲ್ಲ ವಹಿಸಿಕೊಂಡು ಸಾಗಿಸುತ್ತ ನಡೆದನು ಇತ್ತ ನಮ್ಮ ಕಥಾನಾಯಕರಿಗೆ ಕಟ್ಟಾ ವಿರೋಧಿಗಳಾಗಿ ಮಾರ್ಪಡಿಸಿದರು.

ಇದು ಮಹಾಸ್ವಾಮಿಗಳಿಗೆ ಮನವರಿಕೆಯಾಗುವದೇ ತಡ ಅವಪ್ಪಗೌಡನಿಗೆ ಒಂದು ಭಯಂಕರವಾದ ಚರ್ಮರೋಗ ಅಂಟಿಕೊಂಡಿತು. ಯಾವ ಭೋಗೋಪಭಾಗ್ಯವಿದ್ದರೂ ಅವನ ಪಾಲಿಗೆ ಇಲ್ಲವಾಯಿತು. ಕಟ್ಟುನಿಟ್ಟಾಗಿ ಪತ್ಥ ಮಾಡಬೇಕಾಯಿತು. ಏನು ಮಾಡಿದರೂ ರೋಗ ನಿವಾರಣೆಯ ಮಾರ್ಗ ತ್ಪೋರದಾಯಿತು. ದಿನೇ ದಿನೇ ರೋಗದ ಭಯಂಕರತೆ ಉಲ್ಬಣವಾಗುತ್ತ ಹೊರಟಿತು. ಅಂಗಾಲದಿಂದ ಅಳ್ಳೆತ್ತಿಯವರೆಗೂ ಉರುಪು ಇಟ್ಟಿತು. ಬರ-ಬರುತ್ತ ಆ ಉರುಪು ಮೆಟ್ಟಲು ಮೆಟ್ಟಲಾಗಿ ಹೆಚ್ಚುತ್ತ ಬಂದು ದಿನರಾತ್ರಿವಿಡೀ ಭಯಂಕರವಾಗಿ ಉರಿಯತೊಡಗಿತು. ಗೌಡ ಒದ್ದಾಡತೊಡಗಿದ ಹೊಟ್ಟೆಯಲ್ಲಿ ಉರಿ ಎದ್ದಂತೆ ಭಾಸವಾಗಿ ಅಸಾಧ್ಯ ಹೊರಳುವಿಕೆಯಿಂದ ಮೈ ಹೊಸಿಯುತ್ತ ಬಸವಳಿದು ಹೊಟ್ಟೆಯನ್ನು ನೆಲಕ್ಕೆ ತಿಕ್ಕುತ್ತ ಬಿಸಿಸುಯ್ಯು ತೇಗುತ್ತ ನಿತ್ರಾಣಕ್ಕೆ ಬಂದು ಅರಿವಿಲ್ಲದೇ ನರಳುತ್ತ ಬಿದ್ದುಕೊಂಡನು. ಅನೇಕ ವೈದ್ಯರಲ್ಲಿ ತೋರಿಸಿದರೂ ಔಷಧೋಪಚಾರ ಮಾಡಿದರೂ ಸಹ ಗುಣಮುಖವಾಗಲಿಲ್ಲ. ಸ್ವತಂತ್ರತೆಯನ್ನು ಕಳೆದುಕೊಂಡು ಪರತಂತ್ರನಾಗಿ ಬಿದ್ದುಕೊಂಡನು. ಇದಕ್ಕೂ ಮೊದಲು ರೋಗದ ಅಲ್ಪಾವಧಿಯಲ್ಲಿಯೇ ಧರ್ಮ ಪತ್ನಿ ಸಿಂಗವ್ವಗೌಡತಿ ಸಲಹೆ ಕೊಟ್ಟಿದ್ದಳು. ನೀವು ಚರಪಟ್ಟಾಧ್ಯಕ್ಷರಾದ ಚನ್ನವೃಷಭೇಂದ್ರರನ್ನು ಎದುರು ಹಾಕಿಕೊಳ್ಳುವುದಲ್ಲದೆ ಅವರ ಮಠಕ್ಕೆ ಕೊಡುತ್ತಿರುವ ವೇಣಿಗಿ (ಕಾಣಿಕೆ)ಯನ್ನು ನಿಲ್ಲಿಸಿದ್ದೀರಿ. ಅದಕ್ಕಾಗಿ ಗುರುಗಳಲ್ಲಿಗೆ ಹೋಗೋಣ ತಪ್ಪಾಗಿದೆಯೆಂದು ಕಾಲ ಹಿಡಿದುಕೊಳ್ಳೋಣ ಅವಕ್ಕೆ ಕರುಣಾಸಿಂಧುಯಾದ ಅವರು ತಿರಸ್ಕರಿಸಲಾರರು. ಒಂದು ವೇಳೆ ತಿರಸ್ಕರಿಸಿದರೂ ಅವರ ಪಾದವನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತೇನೆ. ಇದು ನನಗೆ ಒಪ್ಪಿಸಿ ನಡೆಯಿರಿ ನೀವು ಸುಮ್ಮನೇ ಹಿಂಬಾಲಿಸಿರಿ ಎಲ್ಲಾ

ನಾನು ಸರಿಪಡಿಸುವೆ ಎಂದು ಪದೇ ಪದೇ ಗಂಡನಲ್ಲಿ ಬೇಡಿಕೊಂಡರೂ ಹಟವಾದಿಯಾದ ಅಪ್ಪಪ್ಪಗೌಡ ಒಪ್ಪಲಿಲ್ಲ. ನನ್ನ ಪ್ರಾಣ ಹೋದರೂ ಚಿಂತೆಯಿಲ್ಲ ನನ್ನ ಹಣವನ್ನೂ ಕೂಡಾ ಆ ಸ್ವಾಮಿಗೆ ತೋರಗೊಡಲಾರೆ ಎಂದು ಛಲದಂಕಮಲ್ಲ ದುರ್ಯೋಧನನಂತೆ ಹಟಹಿಡಿದು ಬಿಟ್ಟಿದ್ದ. ಆದರೆ ಈಗ ಸ್ವತಂತ್ರತೆಯನ್ನೇ ಕಳೆದುಕೊಂಡಿದ್ದ ಗೌಡ ಅರಿವಿಲ್ಲದೇ ಬಿದ್ದುಕೊಂಡಾಗ ಹೆಂಡತಿಯು ಆಜ್ಞೆಯಂತೆ ಆಳುಮಕ್ಕಳಿಂದ ಹೊತ್ತು ತರಸಿ ಅಪ್ಪಪ್ಪಗೌಡನನ್ನು ಗುರುಮಠದ ಬಾಗಿಲಲ್ಲಿ ಹಾಕಿದರು. ಸ್ವಾಮಿಗಳು ಒಳಗೆ ಶಿವಪೂಜೆಯಲ್ಲಿ ಕುಳಿತಿದ್ದರು. ಇದನ್ನು ಅಡುಗೆಯ ಮನೆಯಿಂದಲೇ ವೀಕ್ಷಿಸಿದ ತಂಗಿ ಗುರುಲಿಂಗಮ್ಮ ಎಲ್ಲವನ್ನು ಅರಿತವಳಾಗಿ ಎದ್ದು ಬಂದು ಆಳುಗಳನ್ನು ಮನೆಗೆ ಕಳಿಸಿ ನಿಂಗಮ್ಮನನ್ನು ಮನೆಯ ಒಳಗೆ ಕುಳ್ಳಿರಿಸಿ ಎಚ್ಚರದಪ್ಪಿ ಬಿದ್ದುಕೊಂಡಿದ್ದ ಅಪ್ಪಪ್ಪಗೌಡನ ದೇಹದ ಮೇಲೆ ಒಂದು ಮಡಿ ವಸ್ತ್ರವನ್ನು ಮುಚ್ಚಿಬಿಟ್ಟರು. ಅಪ್ಪಪ್ಪಗೌಡನೆಂದರೆ ಸಾಕು ಸ್ವಾಮಿಗಳು ಕಿಡಿಕಿಡಿಯಾಗುತ್ತಿದ್ದುದು ತಂಗಿಯವರಿಗೆ ಮನವರಿಕೆಯಾಗಿತ್ತು. ಪೂಜೆಯಿಂದೆದ್ದು ಬರುವಾಗ ಒಮ್ಮೆಲೇ ಗೌಡ ದೃಷ್ಟಿಗೆ ಬಿದ್ದರೆ ಸಿಟ್ಟಿನ ದೃಷ್ಟಿಗೆ ಗುರಿಯಾಗಿ ಮತ್ತೇನು ಅನಾಹುತ ಕಾದಿರುವುದೋ ಯಾರಿಗೆ ಗೊತ್ತು ಎಂದು ಗುರುಲಿಂಗಮ್ಮನವರ ವಿಚಾರ ಅದರಿಂದಲೇ ಅವರು ಸಂಪೂರ್ಣ ವಸ್ತ್ರದಲ್ಲಿ ಮುಚ್ಚಿಬಿಟ್ಟಿದ್ದರು. ಗುರುಗಳು ಪೂಜಾ ಮುಗಿಸಿಕೊಂಡು ಹೊರ ಬರುತ್ತಿದ್ದಂತೆಯೇ ಕಾಲಲ್ಲಿ ಹಾಕಿರುವ ಮನುಷ್ಯಾಕೃತಿಯನ್ನು ಕಂಡು ಗುರುಲಿಂಗಮ್ಮ ! ಯಾರಿವರು ? ಎಂದು ಗದ್ದರಿಸಿದರು. ಗುರುಲಿಂಗಮ್ಮನವರು ಅಂಜುತ್ತ ಅಳುಕುತ್ತಲೇ ತಡವರಿಸುತ್ತ ಅಪ್ಪಪ್ಪಗೌಡ ಎಚ್ಚರದಪ್ಪಿದ್ದಾನಂತೆ ಇಲ್ಲಿ ತಂದು ಹಾಕಿ ಹೋಗಿದ್ದಾರೆ ಎಂದು ಉತ್ತರಿಸಿದರು.

ಈ ಮೊದಲೇ ರೋಗ ಹೆಚ್ಚಿದೆ ಎಂದು ಕೇಳಿದ ಸ್ವಾಮಿಗಳು ಛೆ ! ಛೆ ! ! ಕರೆದುಕೊಂಡು ಹೋಗುವಂತೆ ಹೇಳು ಅಂ ? ಕರೆದುಕೊಂಡು ಹೋಗಲು ಹೇಳು ಅನ್ನುತ್ತ ಪಡಶಾಲೆಯಲ್ಲಿ ವಿಶ್ರಮಿಸಿದರು. ನಂತರ ನಿಂಗಮ್ಮ ಗೌಡತಿ ನಿಧಾನವಾಗಿ ಬಂದು ಗುರುಗಳ ಪಾದ ಗಟ್ಟಿಯಾಗಿ ಹಿಡಿದುಕೊಂಡಳು. ಯಾರು ನೀನು ಇಲ್ಲಿಗೇಕೆ ಬಂದೆ ? ಪಾದವನ್ನು ಬಿಟ್ಟು ಮೊದಲು ತೊಲಗು ಎಂದು ಪಾದವನ್ನು ಹಿಂದಕ್ಕೆ ಎಳೆದುಕೊಂಡು ಗರ್ಜಿಸಿದರು. ನಿಂಗಮ್ಮನು ವಿನೀತಳಾಗಿ ನನ್ನ ಪತಿ ಮಾಡಿದ ಅಪರಾಧವನ್ನು ಮನ್ನಿಸಿ ನನ್ನ ಮಾಂಗಲ್ಯವನ್ನು ಉಳಿಸಿ ಕಾಪಾಡು ತಂದೆ ಎಂದು ಅನಂತ ರೀತಿಯಿಂದ ದುಃಖಿತಳಾಗಿ ಬೇಡಿಕೊಂಡಳು.

"ನೀನೊಲಿದರೆ ಕೊರಡು ಕೊನರುವುದಯ್ಯ
ನೀನೊಲಿದರೆ ಬರಡು ಹಯನಹುದಯ್ಯ
ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯ
ನೀನೊಲಿದರೆ ಸಕಲ ಪಡಿ ಪದಾರ್ಥ ಇದಿರಲಿಪ್ಪವು
ಕೂಡಲ ಸಂಗಮದೇವಾ" ಎನ್ನುವಂತೆ

ಗುರುವಿನ ಕೃಪಾಕಟಾಕ್ಷದಿಂದಲೇ ನನ್ನ ಪತಿ ದೇವರು ಬದುಕಬೇಕು. ಇಲ್ಲವಾದರೆ ನನ್ನ ಪತಿ ಬದುಕಲಾರರು. "ಗುರುಕಟಾಕ್ಷ ವೇದೇನ ಶಿವೋಭವತಿ ಮಾನವಾ" ಎಂಬಂತೆ ಗುರುವಿನ ಕೃಪಾದೃಷ್ಟಿಯಿಂದಲೇ ಎಂಥಾಃ ಮಾನವನಾದರೂ ಸಹ ಶಿವನಾಗುವನು. ಎಂದು ಅಂಗಲಾಚಿ ಸೆರಗೊಡ್ಡಿ ಬೇಡಿಕೊಂಡಳು. ಆಗ ಮಹಾ ಕರುಣಾಸಿಧಿಯಾಗಿರುವ ಗುರು ಮಹಾರಾಜನು ಅವಳ ಬೇಡಿಕೆಯನ್ನು ಮನ್ನಿಸಿ ನಿನ್ನ ಗಂಡನಿಗೆ ಮೂರು ವಾರ ತಿರುಗುವತನಕ ನಾವು ಸ್ನಾನ ಮಾಡಿದ ನೀರನ್ನು ಭಕ್ತಿಯಿಂದ ಕುಡಿಸಿ ಮೈಯೆಲ್ಲಾ ಹಚ್ಚಬೇಕು. ಒಂದು ಕರಿದಾರವನ್ನು ಮಂತ್ರಿಸಿ ಕೊಡುವೆ ಇದನ್ನು ಕಟ್ಟಬೇಕು ಎಂದು ಆಜ್ಞಾಪಿಸಿದರು ಅದೇ ರೀತಿ ಗುರುಗಳು ಹೇಳಿದ ಪ್ರಕಾರ ಪ್ರತಿದಿವಸ ಮಾಡಲಾಗಿ ಮೂರು ವಾರ ತಿರುಗುವದರೊಳಗಾಗಿ ಅವಪ್ಪಗೌಡನು ರೋಗದಿಂದ ಮುಕ್ತನಾದನು. ನಂತರ ಮಹಾಸ್ವಾಮಿಗಳವರ ಪಾದಕ್ಕೆ ನಮಸ್ಕರಿಸಿ ನನ್ನ ತಪ್ಪನ್ನು ಕ್ಷಮಿಸಿ ಎಂದು ಅಂಗಲಾಚಿ ಬೇಡಿಕೊಂಡನು.

ಶ್ರೀಗುರುವಿನುಪಕಾರವನು ನಾ ಎಂದು ಮರೆಯಲಾರೆ
ಅಜ್ಞಾನ ಅಂಧಕಾರವನಳಿಸಿ ಸುಜ್ಞಾನ ಬೆಳಕವ ಬೀರಿ।
ಮುಕ್ತಿ ಪಥವನು ತೋರಿ ಕಾಪಾಡಿದ ಗುರುವೆ
ನಿನ್ನ ಮಹಿಮೆಯನು ಎಷ್ಟೆಂದು ಪೇಳಲಿ ತಂದೆ॥
ಕಾಮ, ಕ್ರೋಧ, ಲೋಭ, ಮದ, ಮತ್ಸರಗಳಲಿ ಬೆಂದು
ವಿಷಯ ಆಶೆಗಳಲಿ ಮೋಹಿತನಾಗಿ ಕಷ್ಟಗಳಲಿ ಬೆಂದು।
ಎನ್ನ ಕೈ ಹಿಡಿದುದ್ಧರಿಸಿ ಕೃಪೆಮಾಡು ಗುರುವೆ
ಎನ್ನ ಅಪರಾಧವನು ಮನ್ನಿಸಿ ಕಾಪಾಡು ಚನ್ನವೃಷಭೇಶ್ವರ॥

ಅದೇ ಗ್ರಾಮದಲ್ಲಿ ಮತ್ತೊಂದು ಘಟನೆ ನಡೆಯಿತು. ಅದು ಏನಂದರೆ ಅವ್ವಣ್ಣಗೌಡ ಬಿರಾದಾರ ಎಂಬಾತನು ತನ್ನ ಮಗ ನಿಂಗನಗೌಡನ ಲಗ್ನ ಮನೆಯ ಮುಂದೆ ಮಾಡುವದಾಗಿ ನಿಶ್ಚಯಿಸಿದನು. ಮಗನ ಲಗ್ನದ ಸಲುವಾಗಿ ಹಿರಿಯ ಮಠದ ಗುರುಗಳಿಗೆ ಆಮಂತ್ರಣ ಕೊಟ್ಟಿದ್ದನು. ಆದರೆ ಮಠದ ಗುರುಗಳಿಗೆ ಯಾರಾದರು ಗ್ರಾಮದವರು ಬಿನ್ನ ಕೊಡಬೇಕಾದರೆ ಅವರಿಂದ ಒಂದು ಕರಾರು ಪತ್ರ ಬರೆಯಿಸಿಕೊಂಡು ವಾದ್ಯ ವೈಭವದೊಂದಿಗೆ ಕರೆದುಕೊಂಡು ಹೋಗುವ ಸಂಪ್ರದಾಯ ಮಹಾ ಸ್ವಾಮಿಗಳು ಮಾಡಿಕೊಂಡಿದ್ದರು. ಆದರೆ ಕೇವಲ ಅವಣ್ಣಗೌಡರು ಕಾಯಿ ತೆಗೆದುಕೊಂಡು ಬಂದು ಆಮಂತ್ರಣ ಕೊಟ್ಟರೆ ಹೊರತು ಕರಾರು ಪತ್ರ ಬರೆದು ಕೊಡಲಿಲ್ಲ. ಕರಾರು ಪತ್ರದ ಸಲುವಾಗಿ ಎರಡು ಮೂರು ತಾಸು ವಾಕ್ವಾದ ಪ್ರಾರಂಭವಾಯಿತು. ಇತ್ತ ಮನೆಯಲ್ಲಿ ಲಗ್ನದ ಸಲುವಾಗಿ ಬಂದ ಬೀಗರಲ್ಲಿ ಜಗಳ ಪ್ರಾರಂಭವಾಯಿತು. ಬೀಗರ ಜಗಳ ಶಾಂತ ಮಾಡುವ ಸಲುವಾಗಿ ಮಠದಿಂದ ಎಲ್ಲರೂ ಎದ್ದು ಹೋದರು. ಮಧ್ಯಾನ್ಹ ಮೂರು ನಾಲ್ಕು ಘಂಟೆಯವರೆಗೂ ಅದೇ ಜಗಳದಲ್ಲಿ ಗುರುಗಳನ್ನೇ ಮರೆತರು. ಕಾಡು ಕೋಣಗಳ ಕಾದಾಟದಲ್ಲಿ ತಮ್ಮ ಒಡೆಯ ಸಿಂಹರಾಜನನ್ನೇ ಮರೆತಂತೆ ಸ್ವಾಮಿಗಳನ್ನು ಮರೆತು ಹಾಗೇ ಪಂತಿ ಸಾಗಿಸಿದರು. ಆದರೆ ಊಟಕ್ಕೆ ಕುಳಿತ ವರೆಲ್ಲ ಊಟಮಾಡದೇ ಹಾಗೇ ಎದ್ದು ಹೋಗುವಂತಾಯಿತು. ಹಸಿದ ಎಲ್ಲಾ ಜನ ಉಪವಾಸ ಕುಳಿತುಕೊಳ್ಳುವ ಹೊತ್ತು ಬಂದಿತು. ಮಾಡಿದಂತ ಅಡಿ ಗೆಯ ತುಂಬೆಲ್ಲ ಹುಳಗಳೇ ತುಂಬಿಕೊಂಡಿವ್ದವು. ಹುಗ್ಗಿ, ಹೋಳಿಗೆ, ಅನ್ನ ಸಾರ ಎಲ್ಲದರಲ್ಲಿಯೂ ಹುಳಗಳು ಆಡುತ್ತಿದ್ದವು- ಅತ್ತ ಗುರುಗಳು ಮಧ್ಯಾನ್ಹದ ಎರಡು ಘಂಟೆಯ ವರೆಗೂ ನೋಡಿ ಜಳಕಕ್ಕೆದ್ದರು ತಂಗಿ ಗುರುಲಿಂಗಮ್ಮ ಕೇಳಿ ದ್ದಕ್ಕೆ ಅವರ ಅಡುಗೆಯೆಲ್ಲ ಅಳಿಸಿತು. ನಡೆ ಪೂಜಾ ಮುಗಿಸಿ ಊಟ ಮಾಡುವ ಎಂದು ಅಂದರಂತೆ. ಅವ್ವಣ್ಣಗೌಡರು ಮಾಡಿದ ಪಕ್ವಾನ್ನ ಹಳಿಸಿ ಹುಳ ತುಂಬಿ ನಾರುತ್ತಿತ್ತು. ಲಗ್ನಕ್ಕೆ ಬಂದ ಬೀಗರು ಇನ್ನೊಬ್ಬರ ಮನೆಯಲ್ಲಿ ಊಟ ತೀರಿಸಿ ಕೊಂಡು ಹೊರಟು ಹೋದರಂತೆ. ಈ ರೀತಿಯಾಗಿ ಮಹಾ ಸ್ವಾಮಿಗಳವ ರನ್ನು ಜನರು ಅಗಾಧವಾದ ಮಹಿಮೆ ತೋರಿಸಿದರೆಂದು ಹೇಳುತ್ತ ನಡೆದರು.

## ಬತ್ತಿದ ಭಾವಿಗೆ ಗಂಗೆಯ ತಂದದ್ದು

ಬಿಜಾಪೂರ ಜಿಲ್ಲೆಯ ಸಿಂದಗಿ ತಾಲೂಕಾದಲ್ಲಿ ಗೋಲಗೇರಿ ಎಂಬು ದೊಂದು ಗ್ರಾಮವಿದೆ. ಇದು ಜಿಲ್ಲೆಯ ಪಡು ಮೂಲೆಯಾಗಿದ್ದು ಪುರಾತನ ಕಾಲದಿಂದಲೂ ಬಹಳ ಪ್ರಸಿದ್ಧವಾಗಿದೆ. ಇದು ಅಲ್ಲದೆ ಮಾಗಣಗೇರಿಯಿಂದ ಪಶ್ಚಿಮದಲ್ಲಿ ನಾಲ್ಕು ಮೈಲುಗಳ ಮೇಲೆ ಇರುತ್ತದೆ ಈ ಊರಲ್ಲಿ ಗೊಲ್ಲಾಳೇಶ್ವರ ನೆಂಬ ಪ್ರಸಿದ್ಧ ಪುರಾಣ ಪುರುಷ ಆಗಿಹೋದನು. ಅವನವನೊಂದು ಸುಪ್ರಸಿದ್ಧ ಆಗಾಧವಾದ, ಅಗೋಚರವಾದ, ಆಗಮ್ಯವಾದ ಪವಾಡವೆಂದರೆ ಗೊಲ್ಲಾಳನು ಕುರುಬನಿದ್ದು ಕುರಿಕಾಯುತ್ತ ದೇವರಲ್ಲಿ ಅತ್ಯಂತ ಭಕ್ತಿಭಾವವುಳ್ಳವನಾಗಿದ್ದು ಗುರುವಿನಲ್ಲಿ ವಿಧೇಯಕನಾಗಿರುತ್ತಿರಲು ಪ್ರತಿ ಸಲದಂತೆ ಶ್ರೀಶೈಲಯಾತ್ರೆ ಕೈ ಕೊಳ್ಳುವ ಜಂಗಮ ಗಣಗಳು ಗುಂಪು ಗುಂಪಾಗಿ ಬಂದು ಅಲ್ಲಿಯೇ ಬೀಡು ಬಿಟ್ಟರು. ಅದೇ ಮಾರ್ಗದಲ್ಲಿ ಕುರಿ ಕಾಯುತ್ತ ನಿಂತ ಗೋಲಗೇರಿಯ ಗೊಲ್ಲಾಳ, ಸ್ವಾಮಿಗಳಿಗೆ ಒಂದು ಲಿಂಗ ತರುವಂತೆ ಬೇಡಿಕೊಂಡ, ಅವರು ಬರುವ ವರೆಗೂ ಸ್ವಾಮಿಗಳ ದಾರಿ ನೋಡುತ್ತ ಕುರಿಕಾಯುತ್ತ ನಿಂತನು. ಕೊನೆಗೆ ಒಂದು ದಿನ ಶ್ರೀಶೈಲಕ್ಕೆ ಹೋದ ಸ್ವಾಮಿಗಳು ಅದೇ ಮಾರ್ಗವಾಗಿ ತಿರುಗಿ ಬರುವಾಗ ಗೊಲ್ಲಾಳನನ್ನು ಕಂಡ ಕೂಡಲೇ ನೆನಪಾಗಿ ಒಂದು ಕುರಿ ಹಿಕ್ಕಿಯನ್ನೇ ಕೈಗೆತ್ತಿಕೊಂಡು ತಂದು ಗೊಲ್ಲಾಳನಿಗೆ ಲಿಂಗವೆಂದು ಹೇಳಿ ಕೊಟ್ಟರು. ಅದೇ ಕುರಿಹಿಕ್ಕಿ ಬರುಬರುತ್ತ ಗೊಲ್ಲಾಳನ ಶ್ರೇಷ್ಠವಾದ ನಿಷ್ಠಾಪೂರ್ಣ ನೈಜವಾದ ಭಕ್ತಿಗೆ ಒಲಿದು ಮಲ್ಲಿಕಾರ್ಜುನನೇ ನಿಜಲಿಂಗವಾಗಿ ಅಲ್ಲಿ ನೆಲೆಸಿದನೆಂದು ವದಂತಿ. ಈ ಪ್ರಕಾರವಾಗಿ ಆ ಗೊಲ್ಲಾಳನ ಲಿಂಗಕ್ಕೆ ಗೊಲ್ಲಾಳೇಶ್ವರನೆಂದು ನಾಮಕರಣ ವಾಯಿತು. ಇಂಥ ಐತಿಹಾಸಿಕ ಕ್ಷೇತ್ರಸ್ಥಳವಾದ ಗೋಲಗೇರಿಯ ಭಕ್ತ ಅದೇ ಗುಡಿಯ ನಿರ್ವಾಹಣಾಧಿಕಾರ ವಹಿಸಿಕೊಂಡ ದೇವರ ಮನಿಯವರು ಪ್ರತಿ ಯುಗಾದಿ ಪಾಡ್ಯದಂದು ಪುರಾಣಾರ್ಥವಾಗಿ ನಮ್ಮ ಗುರುಗಳನ್ನು ಕರೆದು ಕೊಂಡು ಹೋಗುತ್ತಿದ್ದರು. ಯುಗಾದಿಯಿಂದ ಹದಿನೈದು ದಿನಗಳ ವರೆಗೆ ಅಂದರೆ ದವನದ ಹುಣ್ಣಿಮೆಯ ವರೆಗೆ ಶ್ರೀ ಗೊಲ್ಲಾಳೇಶ್ವರನ ಪುರಾಣ ಜರುಗು ತ್ತಿತ್ತು. ಈ ಪುರಾಣ ಕಾಲದಲ್ಲಿ ಘೋರಮ್ಮನ ಭಾವಿಯಿಂದ ನೀರು ತರುತ್ತಿ ದ್ದರು. ವಿಧಿವಶಾತ್ ಒಂದು ವರ್ಷ ಪುರಾಣದ ಪೂರ್ವದಲ್ಲಿಯೇ ಆ ಭಾವಿ ಬತ್ತಿ ನೀರು ಇಲ್ಲದಂತಾಯಿತು. ಹದಿನೈದು ದಿವಸ ಪುರಾಣ ಹುಣ್ಣಿಮೆಗೆ

ರಥೋತ್ಸವ ಜರಗುವದು ಇವನ್ನು ಕೇಳಲು ನೋಡಲು ಸಾವಿರಾರು ಜನರು ಬರುತ್ತಾರೆ ನೀರೆ ಇಲ್ಲದೆ ಪುರಾಣ ಜಾತ್ರೆ ಹೇಗೆ ಮಾಡಬೇಕು ಎಂದು ದೇವರ ಮನೆಯವರು (ಹೊಳೆಪ್ಪ ಸಾವಕಾರ) ಮತ್ತು ಊರ ಪ್ರಮುಖರು ಹಾಗೂ ಸುತ್ತ ಮುತ್ತಲಿನ ಗ್ರಾಮದ ಪ್ರಮುಖ ಜನರು ಚಿಂತಿಸುತ್ತಿದ್ದರು. ಈ ಸಲವೂ ಪ್ರತಿ ವರ್ಷದಂತೆ ಮಾಗಣಗೇರಿಯ ಚರಸಭಾಧ್ಯಕ್ಷರಾದ ಶ್ರೀಗುರು ಚನ್ನ ವೃಷಭೇಂದ್ರ ಸ್ವಾಮಿಗಳನ್ನು ಕರೆತರಲಾಯಿತು. ಸ್ವಾಮಿಗಳು ಬಂದಕೂಡಲೇ ಹೊಳೆಪ್ಪ ಸಾಹುಕಾರ ಹಾಗೂ ಗ್ರಾಮದ ಪ್ರಮುಖ ಜನರ ಮುಖವನ್ನು ನೋಡಿದರು ಆದರೆ ಅವರ ಮುಖದ ಮೇಲೆ ಎಳ್ಳಷ್ಟು ಕಳೆ ಇಲ್ಲದೆ ಇರುವದನ್ನು ನೋಡಿ ಏನಿದು ಸಮಾಚಾರ ನಿಮ್ಮೆಲ್ಲರ ಮುಖವು ಹೀಗೇಕೆ ಬಾಡಿದೆ ? ಎಂದು ಪ್ರಶ್ನಿಸಿದರು. ಆಗ ಅಲ್ಲಿಯ ಪರಿಸ್ಥಿತಿ ಸವಿಸ್ತಾರವಾಗಿ ಗುರುಗಳ ಮುಂದೆ ನಿವೇದಿಸಿಕೊಂಡರು. ಆಗ ಗುರುಗಳು ಇದೆಲ್ಲವನ್ನು ಕೇಳಿ ನಕ್ಕು "ಕೊಡುವಾತ ಶಿವ ಬೇಡುವಾತ ಭಕ್ತ!! ಎಂದು ಕಾಡಿ ಬೇಡುವಿದ್ದರೆ ಚನ್ನ ವೃಷಭೇಶ್ವರ ಛೀ ಎಂದ!!" ಸುಮ್ಮನಾದರು. ಮರುದಿನ ಬೆಳಿಗ್ಗೆ ಎದ್ದವರೇ ಭಾವಿಯ ಪೂಜೆಗೆ ಸರ್ವಸಿದ್ಧತೆಯಾಗಲಿ ಎಂದು ಅಪ್ಪಣೆ ಕೊಡಿಸಿದರು. ಕೂಡಲೇ ಪಂಚಾಮೃತಾಭಿಷೇಕದ ಸಾಮಗ್ರಿಗಳೆಲ್ಲ ಅಣಿಗೊಂಡವು. ಬಾಜಿ, ಹಲಿಗೆ, ಕೊಂಬು, ಕಹಳೆ, ಡೊಳ್ಳು ಮೊದಲಾದ ಮಂಗಳ ವಾದ್ಯಗಳೊಡನೆ ಮುತ್ತೈದೆಯರ ಕೈಲಶಗಳೊಂದಿಗೆ ಹೊರಟು ಗುರುವರ್ಯರು ಭೌರಮ್ಮನ ಭಾವಿಯನ್ನು (ಗೌರಮ್ಮ) ತಲುಪಿದರು. ಮನೆಯಿಂದ ಮುತ್ತೈದೆಯರು ಹೊತ್ತು ತಂದ ಐದು ಕೊಡ ನೀರನ್ನು ಆ ಭಾವಿಯಲ್ಲಿ ಸುರುವಿ ಪೂಜಾ ಸಮಾರಂಭ ಮುಗಿಸಿ ಮಂಗಳಾರತಿ ಎತ್ತಿ ಶ್ರೀಗುರು ಚನ್ನ ವೃಷಭೇಂದ್ರ ಸ್ವಾಮಿಗಳ ಪಾದೋದಕ ತೆಗೆದುಕೊಂಡು ಗೌರಮ್ಮನ ಭಾವಿಯಲ್ಲಿ ಹಾಕಿದರು. ಗುರುಗಳವರು ಕ್ಷಣ ಹೊತ್ತು ಭೂಮಿಯನ್ನು ಸ್ಪರ್ಶ ಮಾಡಿದಾಕ್ಷಣವೇ ಗಂಗೆಯು ಬರುವಂತವಳಾದಳು. ಎಲ್ಲರಿಗೂ ಬಾಳೆಹಣ್ಣು ನೆನೆಗಡಲೆ ಹಂಚಿದ ಬಳಿಕ ಅದೇ ಐದು ಕೊಡ ನೀರನ್ನು ಮುತ್ತೈದೆಯರು ತುಂಬಲುದ್ಯುಕ್ತರಾದರು. ನೆರೆದೆಲ್ಲ ಜನ ಜಂಗುಳಿ ಮಹಾ ಸ್ವಾಮಿಗಳೊಡಗೂಡಿ ಹರ ಹರ ಮಹಾದೇವ ಎಂಬ ಜೈ ಘೋಷದೊಡನೆ ಮುತ್ತೈದೆಯರು ಐದು ಕೊಡಗಳನ್ನು ತುಂಬಿಕೊಂಡರು. ಮತ್ತೆ ಮೆರವಣಿಗೆ ದೇವರ ಮನೆಯತ್ತ ಸಾಗಿತು. ಅಲ್ಲಿಂದ ದೇವರ ಮನೆಯವರು ಅದೇ ಭಾವಿಯ ನೀರು ತರಹತ್ತಿ

ದರು. ನೀರು ತಂದಂತೆಲ್ಲ ಹೆಚ್ಚುತ್ತ ಹೋಗಿ ಮತ್ತೆ ಮೊದಲಿನಂತೆ ಭಾವಿಯಲ್ಲಿ ನೀರಾಗಿ ಜರಿಗಳು ಪ್ರವಹಿಸಹತ್ತಿದವು. ಪುರಾಣ ಮುಗಿಯುವವರೆಗೂ, ರಥೋತ್ಸವದ ನಂತರವೂ ನೀರು ಸಾಕುಸಾಕಾಗಿ ಹೋದವು. ಗೋಲಗೇರಿ ಪುರ ಜನರೇ ಮೊದಲಾದ ಸುತ್ತಲಿನ ಹಳ್ಳಿಯ ಜನರೆಲ್ಲ ಸ್ವಾಮಿಗಳ ಮಹತ್ಕಾರ್ಯಕ್ಕೆ ಬೆರಗಾಗಿ ಬೆರಳು ಕಚ್ಚಿದರು. ಅಲ್ಲಿಯ ಭಕ್ತ ಸಮೂಹ ಮತ್ತಷ್ಟು ಸ್ವಾಮಿಗಳಲ್ಲಿ ಅನನ್ಯವಾದ ಭಕ್ತಿ ಭಾವದಿಂದ ನಡೆದುಕೊಳ್ಳ ತೊಡಗಿದರು. ಅಂದು ಹೆಚ್ಚಾಗಿ ಹರಿದು ಬಂದ ಗಂಗೆ ಇಂದಿನ ವರೆಗೂ ಬತ್ತದೇ ಶಾಶ್ವತ ಸ್ವರೂಪ ತಾಳಿ ನಿಂತಿದ್ದಾಳೆ.

## ಭವಿಷ್ಯ ಹೇಳಿದ್ದು

ಅದೇ ಮಾಗಣಗೇರಿಯಲ್ಲಿ ವಡ್ಡಡಗಿ ಶಿವಪ್ಪ ಎಂಬಾತನ ಸೊಸಿ ಮಡಿವಾಳವ್ವನಿಗೆ ಜಡ್ಡು ಆಗಿದ್ದು ಎಲ್ಲಿ ತೋರಿಸಿದರೂ ಗುಣ ಹೊಂದದೇ ಇದ್ದಾಗ ಅವಳ ಸಂಕಟದ ಆರ್ತನಾದ ಕೇಳಲಾರದೇ ಅವಳ ಮನೆಯವರು ಗುರುಗಳ ಪಾದೋದಕದಿಂದಲೇ ಎಷ್ಟೋ ರೋಗ ನಿವಾರಣೆಯಾದದ್ದು ಕೇಳಿದರು. ಅದರಂತೆ ತಮ್ಮ ಸೊಸೆಗೂ ಪಾದೋದಕ ತಂದು ಹಾಕಬೇಕೆಂದು ಶಿವಪ್ಪ ತನ್ನ ಹೆಂಡತಿಯನ್ನು ಗುರುಗಳ ಕಡೆ ಕಳಿಸಿಕೊಟ್ಟ. ಅವಳು ಬಂದು ನಮಸ್ಕರಿಸಿ ಪಾದೋದಕ ಕೊಡಲು ಕೇಳಿದಳು. ಕೂಡಲೇ ಗುರುಗಳು ತಮ್ಮ ಗುರು ಬಸಯ್ಯನಿಗೆ ಕರೆದು ಪಾದೋದಕ ಮಾಡಿಕೊಡು ಎಂದು ಆಜ್ಞಾಪಿಸಿದರು. ಗುರು ಬಸಯ್ಯ ನಿರ್ವಾಹವಿಲ್ಲದೇ ಪಾದೋದಕ ಮಾಡಿಕೊಟ್ಟ. ಗುರುಗಳಿಗೆ ಯಾರೂ ಎದುರುತ್ತರ ಆಡುವಂತಿಲ್ಲ ಅವಳೂ ಗುರು ಪ್ರಸಾದವೆಂದು ಸುಮ್ಮನೇ ತೆಗೆದುಕೊಂಡು ಹೋದಳು. ಏನಾದರೊಂದು ಎದುರು ನುಡಿದರೆ ಯಾವ ಘಳಿಗೆಯಲ್ಲಿ ಏನು ಕಾದಿದೆಯೋ ಯಾರಿಗೆ ಗೊತ್ತು ಸ್ವಾಮಿಗಳು ಅಂದಂತೆಯೇ ನಡೆಯುವುದನ್ನು ಎಲ್ಲರೂ ಕಣ್ಣಾರೆ ಕಂಡು ಮನಗಂಡಿದ್ದರು. ನಂತರದಲ್ಲಿ ಅಂದರೆ ಆ ಹೆಣ್ಣುಮಗಳು ಪಾದೋದಕ ಪಡೆದು ಮರಳಿದ ಬಳಿಕ ಗುರುಗಳು ಗುರು ಬಸಯ್ಯನಿಗೆ ಇಂತೆಂದರು. "ಇನ್ನೂ ಕೇವಲ ಇಪ್ಪತ್ತು ದಿನಗಳಲ್ಲಿ ಅವಳು ಸಾಯುವವಳು ಅವಳಿಗೇಕೆ ಪಾದೋದಕ ?" ಎಂದು ಹೇಳಿದರು. ಅವರ ವಚನಾನುಸಾರ

ಅದೇ ಇಪ್ಪತ್ತು ದಿನಗಳಿಗೆ ಸರಿಯಾಗಿ ರೋಗಗ್ರಸ್ಥಳಾದ ಮಡಿವಾಳವ್ವ ತೀರಿ ಕೊಂಡಳು. ಆಗ ಉಳಿದೆಲ್ಲರಿಗೂ ಗುರುಗಳ ನಡೆ ಅರ್ಥವಾಯಿತು.

ಒಮ್ಮೆ ಬಸಪ್ಪ ಪಟ್ಟಕಲ್ಲಿ ರಬಕವಿ ಇವನಿಗೆ ಮಾಗಣಗೇರಿಯ ಬಣಿಗಾರ ಮನೆತನದ ಚಂದವ್ವ ಎಂಬ ಕನ್ಯೆಯೊಡನೆ ಲಗ್ನವಾಯಿತು. ತವರ ಮನೆಗೆ ಹೆರಿಗೆಯ ಸಲುವಾಗಿ ಬಂದ ಚಂದವ್ವ ಗಂಡು ಮಗುವನ್ನು ಹೆತ್ತಳು. ಆ ಮಗುವಿಗೆ ರುದ್ರಪ್ಪನೆಂದು ನಾಮಕರಣ ಮಾಡಿದರು. ಮುಂದೆ ಎರಡು ಮೂರು ತಿಂಗಳ ಗತಿಸಿದ ನಂತರ ಬಸಪ್ಪನು ತನ್ನ ಹೆಂಡತಿ ಮಗುವನ್ನು ಕರೆದುಕೊಂಡು ಹೋಗಲು ಮಾಗಣಗೇರಿಗೆ ಬಂದನು. ಗುರುಗಳ ಪರ ದರ್ಶನ ಪಡೆದುಕೊಳ್ಳಲು ಮಠಕ್ಕೆ ಬಂದು ಅಪ್ಪಾಜೀಯವರೆ ನಾಳೆ ಹೆಂಡತಿ ಮಗು ವನ್ನು ಕರೆದುಕೊಂಡು ರಬಕವಿಗೆ ಹೋಗುವೆ ಎಂದು ಬಿನ್ನವಿಸಿಕೊಂಡನು. ಆಗ ಗುರುಗಳು ಎಲ್ಲವನ್ನು ತೀರಿಸಿಕೊಂಡು ಹೋಗು ಈಗೇಕೆ ಅವಸರ ಎಂದು ನುಡಿದರು. ಅವನು ಹೋದ ನಂತರ ಕೂಡಲೇ ಹತ್ತಿರ ಇದ್ದ ಸೇವಾ ನಿರತ ನಾದ ಗುರು ಬಸಯ್ಯನನ್ನು ಕರೆದು ಹೇಳು ಅಂದರೆ ಏನು ಹೇಳಬೇಕಪ್ಪಾ ಚಂದವ್ವ ಇನ್ನೂ ಎರಡು ದಿನಗಳಲ್ಲಿ ಸರಿ ಹೋಗುವಳು ಎಂದು ನುಡಿದರು. ಅದೇ ರೀತಿ ಎರಡು ದಿವಸದಲ್ಲಿ ಚಂದವ್ವ ಸರಿ ಹೋದರು. ಈ ರೀತಿ ಗುರುಗಳು ಮುಂದೆ ಆಗು ಹೋಗುಗಳನ್ನು ಅರಿತು ನುಡಿಯುತ್ತಿದ್ದರು.

ಮಾಗಣಗೇರಿಯ ಸಮೀಪದಲ್ಲಿರುವ ಎಡ್ರಾಮಿ ಎಂಬ ಗ್ರಾಮದಲ್ಲಿ ಸನಹಳ್ಳಿ ಮನೆತನದ ಶಿವಲಿಂಗಪ್ಪನ ಮಗಳಿಗೆ ತೊನ್ನ ಕಾಣಿಸಿಕೊಂಡಿತ್ತು. ಅದು ಬರು ಬರುತ್ತ ಭಯಂಕರರೂಪ ತಾಳಿ ಮೈ ತುಂಬ ಹರಡಿಕೊಂಡಿತು. ಶ್ರೀಮಂತನಾದ ಶಿವಲಿಂಗಪ್ಪ ಇದ್ದೊಬ್ಬಾಕೆ ಮಗಳ ಈ ದುರ್ದೈವವನ್ನು ಕಂಡು ಮರ ಮರನೇ ಮರುಗಿದ. ಸಾಕಷ್ಟು ಪ್ರಯತ್ನ ಮಾಡಿ ನೀರಿನಂತೆ ಹಣ ಖರ್ಚು ಮಾಡಿ ತೋರಿಸಿದ. ದೊಡ್ಡ ದೊಡ್ಡ ದವಾಖಾನೆಗಳಿಗೂ ಹೋಗಿ ಬಂದ. ಆಯುರ್ವೇದ ಮಹಾಮಹಾ ಪಂಡಿತೋತ್ತಮರಿಗೂ ತೋರಿಸಿದ. ವೈದ್ಯ ಶಿಖಾಮಣಿಗಳೆಲ್ಲ ತಮ್ಮ ಜಾಣ್ಮೆಯನ್ನು ಪ್ರದರ್ಶಿಸಿ ಕೈಚಿಟ್ಟರು. ನಿರಾಶ ನಾದ ಶಿವಲಿಂಗಪ್ಪ ಕೊನೆಗೆ ನಮ್ಮ ಗುರು ಚನ್ನ ವೃಷಭೇಂದ್ರರಲ್ಲಿ ಬಂದು ಮೊರೆಯಿಟ್ಟು ಗುರುಗಳು ಮಗಳನ್ನು ಕರೆತರುವಂತೆ ಆಜ್ಞಾಪಿಸಿದರು. ಕರೆ

ತಂದ ಬಳಿಕ ರೋಗಿಯನ್ನು ವೀಕ್ಷಿಸಿ ಎದುರಿನಲ್ಲಿಯೇ ಇಟ್ಟಿದ್ದ ಧೂಪಾರ್ತಿ-ಯಲ್ಲಿ ಎಡಗೈ ಹಾಕಿ ಬಂದಷ್ಟು ಬೂದಿಯನ್ನು ತಕ್ಕೊಂಡು ಮಂತ್ರೋಚ್ಚಾರಣೆ ಮಾಡಿ ಅವಳ ಸೆರಗಿನಲ್ಲಿ ಹಾಕಿ ಪ್ರತಿನಿತ್ಯ ಸ್ನಾನದ ಬಳಿಕ ಗುರುವಿನ ನಾಮ ಸ್ಮರಣೆ ಮಾಡುತ್ತ ಇದು ಆಗುವವರೆಗೆ ಮೈ ತುಂಬ ಬಳಿದು ಕೊಳ್ಳಬೇಕೆಂದು ಹೇಳಿದರು. ಇದು ಆದ ನಂತರವೇ ಮುಂದಿನ ಕೆಲಸವೆಂದು ಹೇಳಿ ಕಳಿಸಿದರು. ಸಾಧಾರಣ ಒಂದು ತಿಂಗಳವರೆಗೆ ಆಗುವಷ್ಟು ಭಸ್ಮ ಕೊಟ್ಟಿದ್ದರು. ಅಂದೇ ಮರಳಿ ಊರಿಗೆ ಹೋದ ತಂದೆ ಮಗಳು ಗುರುವರ್ಯರ ಹೇಳಿಕೆಯ ಪ್ರಕಾರ ವ್ರತಾಚರಣೆ ಪ್ರಾರಂಭಿಸಿದರು. ಕೇವಲ ಇಪ್ಪತ್ತೊಂದು ದಿನಗಳಲ್ಲಿ ಆ ಭಯಂಕರವಾದ ತೊನ್ನು ಹೇಳ ಹೆಸರಿಲ್ಲದಂತೆ ಹೊರಟು ಹೋಯಿತು. ಸಂಪೂರ್ಣ ಮೈ ಮೊದಲಿನಂತೆ ಕಾಂತಿಯುಳ್ಳದ್ದಾಗಿ ಪರಿವರ್ತನಗೊಂಡಿತು. ಇದು ಗುರುಗಳ ಮಂತ್ರ ಶಕ್ತಿಯ ಪ್ರಭಾವವೆಂದು ಕಂಡು ಬರುತ್ತದೆ.

● ಸೋಮನಾಳ ಎಂಬ ಊರಲ್ಲಿ ದುಂಡಪ್ಪ ಎತ್ತಿನ ಎಂಬವನಿಗೆ ಬಹಳ ದಿನಗಳಿಂದಲೂ ವಾಂತಿ ಆಗುತ್ತಿತು. ಇವನು ಕುರುಬ ಸಮಾಜದವನು. ಏನು ಉಂಡರೂ ವಾಂತಿ ತಪ್ಪಿದ್ದಲ್ಲ. ನೀರು ಕುಡಿದರೂ ಸಹಿತ ವಾಂತಿ ಆಗಿ ಬಿಡುತ್ತಿತ್ತು. ಇದರ ಸಲುವಾಗಿ ಎಲ್ಲಾ ಕಡೆ ತೋರಿಸಿ ಬೇಸತ್ತು ಕೊನೆಗೆ ಗುರುಗಳ ಹತ್ತಿರ ಬಂದು ತನ್ನ ಅಳಲನ್ನು ತೋಡಿಕೊಂಡನು. ಆಗ ಗುರುಗಳು ಖಾನಾಪೂರದಲ್ಲಿ ಸಿದ್ರಾಮಪ್ಪಗೌಡ ಪಾಟೀಲನ ಮನೆಯಲ್ಲಿ ದೇವಿ ಪುರಾಣದ ಕ್ರಿಯಾ ಮೂರ್ತಿಗಳಾಗಿದ್ದರು.

ಅಂದು ವಿಜಯದಶಮಿ ಇದ್ದು ದೇವಿ ಪುರಾಣದ ಮುಕ್ತಾಯ ಸಮಾ-ರಂಭವಿತ್ತು. ಆ ದುಂಡಪ್ಪನನ್ನು ಕರೆದು ಮುಂದೆ ಕುಳ್ಳಿರಿಸಿಕೊಂಡು ಅಲ್ಲಿ ಮಾಡಿದ ಮೃಷ್ಟಾನ್ನ ಭೋಜನವನ್ನೇ ಅವನಿಗೆ ಉಣಬಡಿಸಿದರು. ನಿಶ್ಚಿಂತೆ-ಯಿಂದ ಯಥೇಚ್ಛವಾಗಿ ಊಟ ಮಾಡು ಯಾವುದಕ್ಕೂ ಚಿಂತಿಸುವ ಕಾರಣವಿಲ್ಲ. ಹೆದರಬೇಡವೆಂದು ಆಜ್ಞಾಪಿಸಿದರು. ಅದರಂತೆ ಧೈರ್ಯವಾಗಿ ದುಂಡಪ್ಪ ಊಟ ಮಾಡಿದ. ಪೂರ್ವಿಯಂತೆ ಎತ್ತಿನ ದುಂಡಪ್ಪನಿಗೆ ಆ ಊಟ ರುಚಿ-ಕರವೂ, ಹಿತಕರವೂ ಆಗಿ ಪರಿಣಮಿಸಿತು. ಅದು ಅಲ್ಲದೆ ಆ ಕೂಡಲೇ ವಾಂತಿ ನಿಂತು ಹೋಯಿತು. ಹೊಟ್ಟೆ ತುಂಬ ಢೇಕರಕೆ ಬಂದವು. ವಾಂತಿಯ ಬದಲು

ಧೇಕರಕೆ ಹೊರ ಬಿದ್ದಿತು. ಅಂದೇ ನಿಂತ ವಾಂತಿ ತಿರುಗಿ ತಲೆದೋರಲಿಲ್ಲ. ಅವನು ಅಂದಿನಿಂದ ಯಾವತ್ತೂ ಗುರು ಸೇವೆ ಮಾಡುತ್ತ ಮಾಗಣಗೇರಿಯ-ಲ್ಲಿಯೇ ಹೆಚ್ಚು ಕಾಲ ಇರುತ್ತಿದ್ದನು. ಎತ್ತಿನ ದುಂಡಪ್ಪ ಕುರುಬನಾದರೂ ವಾಕ್ ಚಾತುರ್ಯದಲ್ಲಿ ಬಲ್ಲಿದನಾಗಿದ್ದನು. ಯಾವುದೇ ಶಾಸ್ತ್ರದ ವಿಷಯದ ಬಗ್ಗೆಯಾದರೂ ಚತುರತನದಿಂದ ಜಾಣ್ಮೆಯಿಂದ ವಿಕಟ ಕವಿಯೋಪಾದಿ-ಯಲ್ಲಿ ತನ್ನ ವಾಗ್ಝರಿಯನ್ನು ಹರಿಸುತ್ತಿದ್ದನು. ಇದರಿಂದಾಗಿ ಗುರುಗಳು ಅವನಿಗೆ ಕಾಳಿದಾಸನೆಂಬ ರೂಢ ನಾಮವನ್ನಿಟ್ಟಿದ್ದರು. ಅಲ್ಲಿಂದ ಅವನು ಕಾಳಿದಾಸನೆಂದೇ ಎಲ್ಲರಿಂದ ಕರೆಯಲ್ಪಡುತ್ತಿದ್ದನು. ಇವನು ಗುರುಗಳ ಮೇಲಿಟ್ಟ ಪ್ರೇಮ ಅಪಾರವಾದುದು. ಮತ್ತು ಅಚಲವಾದುದು. ನಿಷ್ಠಾಪೂರ್ಣ ವಿಶ್ವಾಸ ಗುರುವರ್ಯರ ಮೇಲಿಟ್ಟಿದ್ದ ಎಂಬುದು ಅವನ ವರ್ತನೆಯಿಂದ ಕಂಡು ಬರುತ್ತಿತ್ತು. ಏಕೆಂದರೆ ಅವನ ಎದುರಿನಲ್ಲಿ ಯಾರಾದರೂ ಗುರುನಿಂದೆಯನ್ನಾಡಿಕೊಂಡರೆ ಭಯಂಕರವಾಗಿ ರೇಗಿಕೊಂಡು ನಿರ್ದಾಕ್ಷಿಣ್ಯವಾಗಿ ಅವರನ್ನು ಖಂಡಿಸಿ ಮಾತನಾಡುತ್ತಿದ್ದನು. ಹೀನಾಯವಾಗಿ ಜರಿದು ಮಾತನಾಡುತ್ತಿದ್ದನು. ಗುರುನಿಂದೆಯನ್ನು ಕಿವಿಯಿಂದ ಕೇಳುತ್ತಿದ್ದಿಲ್ಲ. ಇಂಥ ಅಮೋಘವಾದ ಭಕ್ತಿಯನ್ನು ಗುರುಗಳ ಮೇಲೆ ಇಟ್ಟಿದ್ದನು.

## ಪುರುಷತ್ವ ಪಡೆದದ್ದು

ಬಿಜಾಪೂರ ಜಿಲ್ಲೆಯ ಸಿಂದಗಿ ತಾಲೂಕಾ ಪೈಕಿ ಕಕ್ಕಳ ಮೇಲಿ ಎಂಬ ಗ್ರಾಮದ ಕಬ್ಬಲಿಗರ ಮಲ್ಲಪ್ಪ ಎಂಬಾತನು ಸರ್ವ ವಿಧದಿಂದಲೂ ಹೋದ ತನ್ನ ಪುರುಷತ್ವವನ್ನು ತಿರುಗಿಸಿಕೊಳ್ಳಲು ಪ್ರಯತ್ನಿಸಿ ಆಗಿದ್ದಿತು. ಉತ್ತಮೋತ್ತಮ ಹಕೀಮರನ್ನೂ, ಮಹಾ ಪಂಡಿತರನ್ನೂ, ನಾವೇ ದೊಡ್ಡವರೆಂದು ಹೆಮ್ಮೆಪಡುವ ಆಧುನಿಕ ಡಾಕ್ಟರರನ್ನೂ ಕಂಡು ತನ್ನ ಅಳಲನ್ನು ತೋಡಿಕೊಂಡಿದ್ದ. ಅಲ್ಲದೆ ಅವರಿಂದ ದೊರೆತ ಎಲ್ಲ ರೀತಿಯ ಔಷಧಗಳನ್ನೂ ಕುಡಿದು ತಿಂದು ದಕ್ಕಿಸಿಕೊಂಡಿದ್ದ. ಯಾವ ರೀತಿಯಿಂದ ಏನೇ ಉಪಚಾರ ಮಾಡಿದರೂ ಅವನ ರೋಗ ನಿವಾರಣೆಯ ಮಾರ್ಗೋಪಾಯ ಹೊಳೆಯದೇ ಹೋಯಿತು. ಇದ-ರಿಂದ ಬೇಸತ್ತ ಮಲ್ಲಪ್ಪ ಕೊನೆಯ ಘಳಿಗೆಗೆ ಮಾಗಣಗೇರಿಯ ಮಹಾಸ್ವಾಮಿ

ಗಳಾದ ಚನ್ನ ವೃಷಭೇಂದ್ರರಲ್ಲಿ ಬಂದು ಮೊರೆಯಿಟ್ಟು ಬೇಡಿಕೊಂಡ. ಅಷ್ಟು ಹೊತ್ತಿಗಾಗಲೇ ಸ್ವಾಮಿಗಳ ಕೀರ್ತಿ ಪತಾಕೆ ಶಿಖರದೆತ್ತರ ಹಾರಾಡುತ್ತಿತ್ತು. ಈ ಪವಾಡ ಪುರುಷನ ಕೀರ್ತಿ ಸುಳಿಗಾಳಿಗೆ ಸಿಕ್ಕ ಸುಗಂಧದಂತೆ ಎಲ್ಲೆಡೆಗೂ ಹರಡಿಕೊಂಡಿತ್ತು. ಈ ಮಹಿಮಾ ಪುರುಷನ ನಿಜ ವಾಕ್ ಸಿದ್ಧಿಯನ್ನು ಕೇಳಿ ಅರಿತ ಮಲ್ಲಪ್ಪ ಮಾಗಣಗೇರಿಗೆ ಬಂದು ಸ್ವಾಮಿಗಳಲ್ಲಿ ತನ್ನ ದು:ಖವನ್ನು ತೋಡಿಕೊಂಡ. ಶಾಂತ ಚಿತ್ತವದನರಾದ ಗುರುಗಳು ಮಲ್ಲಪ್ಪನಿಗೆ ಅಭಯ-ವಿಟ್ಟು ಇಲ್ಲಿಯೇ ವಾಸವಾಗಿರುವಂತೆ ಹೇಳಿದರು. ಆ ಕೂಡಲೇ ಮಲ್ಲಪ್ಪ ಹೊರಟು ಊರಲ್ಲೆಲ್ಲ ತಿರುಗಾಡಿ ಕೊನೆಗೆ ಜೀರ ಮನೆಯಲ್ಲಿ ದುಡಿಯಲು ನಿಂತ ಆ ಮೇಲೆ ಮಹಾಸ್ವಾಮಿಗಳಿಗೆ ಬಂದು ಭೆಟ್ಟಿಯಾಗಿ ತನ್ನ ವ್ರತ ನಿಯಮ ಗಳನ್ನು ತಿಳಿದುಕೊಂಡು ಸ್ವಾಮಿಗಳಿಗೆ ನಮಸ್ಕರಿಸಿ ಹೊರಟು ಬಂದು ತನ್ನ ವಡೆತನದ ಜೀರ ಮನೆಯಲ್ಲಿ ತಂಗಿದ. ಮರುದಿನದಿಂದ ಪ್ರತಿನಿತ್ಯ ಬೆಳಗಿನ ಝಾವದಲ್ಲಿ ಎದ್ದು ಸಂಧ್ಯಾವಂದನೆಗಳನ್ನು ತೀರಿಸಿಕೊಂಡು ಭಾವಿಗೆ ಬಂದು ಒಂದು ಕೊಡ ನೀರು ಜಗ್ಗಿ ಮೈ ಮೇಲೆ ಸುರುವಿಕೊಂಡು ಮಡಿ ಬಟ್ಟೆಗಳನ್ನು ಉಟ್ಟುಕೊಂಡು ಸೀದಾ ಮಠದಲ್ಲಿ ಬಂದು ತೋಂಟದಾರ್ಯ ಗದ್ದುಗೆಗೆ ನಮ ಸ್ಕರಿಸಿ ಅವನ ಮುಂದಿದ್ದ ಧೂಪಾರತಿಯಲ್ಲಿಯೇ ಪ್ರಸಾದ ಹಚ್ಚಿಕೊಂಡು ಹಾಗೂ ಬಾಯಿಯಲ್ಲಿ ಹಾಕಿಕೊಂಡು ಗುರುಗಳಿಗೆ ನಮಸ್ಕರಿಸಿ ಹೋಗು-ತ್ತಿದ್ದನು. ಇದೇ ಅವನಿಗೆ ಹೇಳಿದ ನೇಮವಾಗಿತ್ತು. ಇದೇ ತೆರನಾಗಿ 21 ದಿನಗಳ ಕೊನೆಯಲ್ಲಿಯೇ ಕಳೆದು ಹೋದ ಪುರುಷತ್ವ ಮರಳಿ ಪ್ರಾಪ್ತವಾ-ಯಿತು. ವ್ರತ ನಿಯಮಾಚರಣೆಯನ್ನು ಹಾಗೆಯೇ ಮುಂದುವರೆಸಿ ಒಂದು ತಿಂಗಳವರೆಗೆ ಮಾಡಿದ ತರುವಾಯ ಗುರುಗಳಲ್ಲಿ ವಿನಂತಿಸಿಕೊಂಡನು ಆಗ ಗುರುವರ್ಯರು ವ್ರತ ಬಿಡುವಂತೆ ಆಜ್ಞಾಪಿಸಿದರು. ಚನ್ನವೃಷಭೇಂದ್ರರ ಆಶೀರ್ವಾದದಿಂದ ಮಕ್ಕಳನ್ನು ಹೆತ್ತು ಸುಖವಾಗಿ ಬಾಳಿದನು.

## ಭಂಟನೂರದಲ್ಲಿಯ ಪವಾಡ

ಪ್ರತಿ ವರ್ಷದಂತೆ ಭಂಟನೂರಲ್ಲಿ ಗೂಳಿಯವರ ಮನೆಗೆ ಗುರುಗಳು ಹೋಗುವುದು ವಾಡಿಕೆ. ಒಮ್ಮೆ ಒಂದು ದಿನ ಸಾಯಂಕಾಲ ಗುರುಗಳು ಕಲ್ಲಪ್ಪ ಗೂಳಿ ಊರಲ್ಲಿಯ ನಾಲ್ಕಾರು ಜನ ಪ್ರಮುಖರು ಕೂಡಿಕೊಂಡು ಊರ ಮುಂದೆ ಒಂದೇರಡು ಫರ್ಲಾಂಗುಗಳ ಮೇಲಿರುವ ಗೊಲ್ಲಾಳಪ್ಪನ ಗುಡಿಗೆ ಹೊರ ಟಾಗ ಗುಡಿಯ ರಾಜಂಗಳದಲ್ಲಿ ಒಬ್ಬ ವ್ಯಕ್ತಿ ಕಂಬಳಿ ಹೊದ್ದುಕೊಂಡು ನಿಂತಿದ್ದ. ಕೈಯಲ್ಲಿ ಒಂದು ಸಣ್ಣ ಬೆತ್ತ ಇತ್ತು ಗುರುಗಳು ಅವನನ್ನು ಸಮೀಪಿಸುತ್ತಲೇ ಯಾರೋ ನೀನು ಎಂದು ಕೇಳಿದರು. ನಾನು ಖೈನೂರು ಏರಿಯಪ್ಪ ಪೂಜಾರಿ ಸಿಂದಿಗ್ಗಿ ಹೋಗಬೇಕಾಗ್ಯಾದಾಕ್ಯಾ ಹಿಂಗೇ ಹೊಂಟೇನ್ರಿ ಅಂದನು. ಅದನ್ನು ಕೇಳಿದ ಗುರುಗಳು "ಅಲ್ಲೋ ಹೊತ್ತು ಮುಳಗಾಕ ಬಂದಾದಯವಾಗ ಹೋಗಂವ" ಎಂದು ಕೇಳಿದರು. ಅಲ್ರಿಯಪ್ಪ ನಾ ಅಂತೂ ಮೊದಲೇ ಕುರುಬ ಹೊತ್ತು ಮುಳುಗಿದರೂ ಅಷ್ಟೇ ಕತ್ತಲಾದರೂ ಅಷ್ಟೇ ನನಗೇನ್ರಿ ಹಾಂಗೇ ಹೋಗತೀನ್ರಿ ಎಂದು ದಕ್ಷಿಣೆ ಕೊಟ್ಟು ಗುರುಗಳಿಗೆ ನಮಸ್ಕರಿಸಿ ದೇವರಿಗೆ ನಮಸ್ಕರಿಸಲು ಗುಡಿ ಯಲ್ಲಿ ಹೋದವನು ಹೊರಗೇ ಬರಲೇ ಇಲ್ಲ. ಅಲ್ಲಿಯ ಭಕ್ತರು ಇದೇನಾಶ್ಚರ್ಯ ವೆಂದು ಗುರುಗಳಿಗೆ ಕೇಳಿದಾಗ ಇದು ಗೊಲ್ಲಾಳನ ಮಹಿಮೆ ನೋಡು ಶಂಕರ ಸ್ವಾಮಿ (ದೇವಣಗಾಂವ) ಬಾಗಿಲ ಸಂದಿಯಲ್ಲಿ ಹೋಗುತ್ತಿದ್ದಾನೆ ಎಂದರಂತೆ ಅದರಂತೆ ಅಲ್ಲಿಯೆ ಶಂಕರಸ್ವಾಮಿ ಭಕ್ತರನ್ನು ಕರೆದುಕೊಂಡು ಅಲ್ಲಿಗೆ ಹೋಗಿ ನೋಡಲಾಗಿ ನಾಗರ ಹಾವಾಗಿ ಬಾಗಿಲ ಸುಳಿಕಿಯಲ್ಲಿ ಹೋಗುತ್ತಿರುವದು ಕಂಡು ಬಂದು ಎಲ್ಲರೂ ಬೆರಗಾದರು.

## ಭೂತ ದರ್ಶನ

ಬೇಡರ ಕುಲದವನಾದ ಭೀಮಶ್ಯಾ ಎಂಬಾತನಿಗೆ ಅಸಾಧ್ಯವಾದ ಭೂತ ವೊಂದು ಬಡಿದುಕೊಂಡಿತ್ತು. ಮಹಾ ಮಹಾ ಯಂತ್ರ, ಮಂತ್ರ, ತಂತ್ರ ಪ್ರವೀಣರಿಗೆ ತೋರಿಸಿದರೂ ಆತನಲ್ಲಿ ಲೀನಗೊಂಡಿರುವ ಪ್ರೇತ ಕಡೆಗಾಗದೇ ಹಾಗೇ ಉಳಿದುಕೊಂಡಿತ್ತು. ಕೊನೆಗೆ ಶ್ರೀಗಳಾದ ಗುರುಮೂರ್ತಿಗಳ ಕಡೆಗೆ ಬಂದನು. ತನ್ನಲ್ಲಡಗಿರುವ ದುಃಖವನ್ನು ತೋಡಿಕೊಂಡನು. ತಂದೆಯೇ !

ಏನು ಭೂತವೋ, ಪ್ರೇತವೋ ಒಂದೂ ಅರ್ಥವಾಗದಾಗಿದೆ ಬಳಲಿ ಬೇಸತ್ತಿದ್ದೇನೆ ಎಂದು ತನ್ನ ಅಸಹಾಯಕತೆಯನ್ನು ತೋರಿಸಿಕೊಂಡನು. ಗುರುಗಳು ಒಪ್ಪಿ ಅವನನ್ನು ಮಠದಲ್ಲಿಯೇ ಇಟ್ಟುಕೊಂಡರು. ಅಂದು ಅಮವಾಸ್ಯೆಯ ರಾತ್ರಿಯಾದುದರಿಂದ ಭೀಮಶ್ಯಾನಿಗೆ ಭೂತದ ಭಯವಿತ್ತು. ಬಂದು ಕಾಡುವುದೆಂದು ಕಳವಳದಲ್ಲಿಯೆ ಕೊರಗುತ್ತಿದ್ದನು. ರಾತ್ರಿಯಾಪಂತೆಲ್ಲ ಆವನ ಕಳವಳಿಕೆ ಹೆಚ್ಚಾಯಿತೇ ವಿನಃ ಭೂತ ಮಾತ್ರ ಮೈದೊರಲಿಲ್ಲ. ರಾತ್ರಿಯ ವೇಳೆ ಗುರುಗಳಿಗೆ ಅರಿಕೆ ಮಾಡಿಕೊಂಡ. "ಅದು ನಿನ್ನ ಹತ್ತಿರವಿದ್ದರೇನೇ ಬರಬೇಕಲ್ಲೊ ಮಗನೇ ? ಎಂದು ಸುಮ್ಮನಾದರು. ಮರುದಿನ ಬೆಳಗಿನ ಜಾವ ಗುರುಗಳು ಸ್ನಾನಕ್ಕೆಂದು ಬಾಳೇ ತೋಟಕ್ಕೆ ಹೋದರು. ಭಾವಿ ಸಮೀಪ ಸುತ್ತುತ್ತಿದ್ದಂತೆ ಮುಸುಕು ಹಾಕಿಕೊಂಡ ಹೆಣ್ಣುಮಗಳೊಬ್ಬಳು ಬಂದು ಸ್ವಾಮಿಗಳಿಗೆ ನಮಸ್ಕರಿಸಿದಳು. ಸ್ವಾಮಿಗಳು ಇಂತೆಂದರು. ಯಾರಂವಾ ? ನೀನು ಇಲ್ಲಿಗೇಕೆ ಬಂದೆ ? ಎಂದು ವಿಚಾರಿಸಲಾಗಿ "ನಾನ್ರೀ ನಿಂಗವ್ವ" ಎಂದು ಉಚ್ಚರಿಸಿದ ನಿಂಗವ್ವನ ಪ್ರೇತ ಭಯದಿಂದ ಕಂಪಿಸುತ್ತ ಎದ್ದು ನಿಂತಿತು. ಗುರುಗಳು ಬಾಗ ಎಡಗಾಲ ಮೆಟ್ಟಿ ಉಚ್ಚುವುದರೊಳಗಾಗಿ ದೂರದವರೆಗೆ ಓಡಿಹೋಗಿತ್ತು. "ಇನ್ನೊಮ್ಮೆ ಬರುವುದಿಲ್ಲ ಮುತ್ತ್ಯಾ" ಅನ್ನುತ್ತ ಓಡಿತು. ಈ ಭೂತವೇ ಭೀಮಶ್ಯಾನ ಮೈಯಲ್ಲಿ ಅಡಗಿಕೊಂಡಿತ್ತು. ಮುಂದೆ ಅದು ಕಾಣಿಸಿಕೊಳ್ಳಲೇ ಇಲ್ಲ. ಭೀಮಶ್ಯಾ ನಿಶ್ಚಿಂತೆಯಿಂದ ಕಾಲಹರಣ ಮಾಡುತ್ತ ಗುರುಸೇವೆ ಸಲ್ಲಿಸುತ್ತ ಮಠದಲ್ಲಿಯೇ ಇದ್ದುಬಿಟ್ಟನು. ಪ್ರತಿನಿತ್ಯ ಗುರುಮಠದಲ್ಲಿಯ ಹಾಗೂ ರಾಜಂಗಳದ ಕಸಗೂಡಿಸುವುದೇ ಇವನ ಕೆಲಸವಾಗಿತ್ತು.

● ನಿಂಗಪ್ಪ ಜೋಗೂರ ಎಂಬಾತನ ಮಗಳಾದ ದ್ಯಾವಮ್ಮನಿಗೆ ಕ್ರೂರವಾದ ಬ್ರಹ್ಮಪಿಶಾಚಿಯೊಂದು ಬಡೆದಿತ್ತು. ಮನೆಯವರು ಯಾರೇ ಇರಲಿ ಸ್ವತಃ ಗಂಡನೇ ಇರಲಿ, ತಂದೆ ತಾಯಿಗಳೇ ಮೊದಲಾಗಿ ಬಂದರೂ ಕೈಗೆ ಬಂದದ್ದರಿಂದ ಬೀಸಾಡಿ ಒಗೆಯುತ್ತಿದ್ದಳು. ಗಡಿಗೆ, ಮಡಿಕೆ, ದಾಬು, ಕಟ್ಟಿಗೆ, ಕುಳ್ಳ ಚಪ್ಪಲಿ ಯಾವುದೇ ಇರಲಿ ಕೈಗೆ ಏನು ಸಿಗುವದೋ ಅದರಿಂದ ಬಂದವರ ಮೈಮೇಲೆ ಒಗೆದು ಬಿಡುತ್ತಿದ್ದಳು. ಮಾಂತ್ರಿಕರೆಲ್ಲರೂ ಇವಳ ಹೊಡೆತಕ್ಕೆ ತಾಳಲಾರದೇ ಹೋದರು. ಒಮ್ಮೆ ಪ್ರಸಿದ್ಧ ಮಾಂತ್ರಿಕ ಕೆಂಚಯ್ಯ ಎಂಬಾತ ತನ್ನ ಸರ್ವ

ಸಿದ್ಧತೆಯೊಂದಿಗೆ ಮಂತ್ರೋಚ್ಚಾರಣೆ ಮಾಡುತ್ತ ಕೆದರಿದ ಜಡೆ ಕೆಂಪು ವಸ್ತ್ರ ಧಾರಿಯಾಗಿ ಬೇವಿನ ಉಗ್ಗರಣೆಯೊಂದಿಗೆ ಕವಡಿಯ ಲೋಬಾನ ಹಾಕುತ್ತ ಮೂರು ನಾಲ್ಕು ಜನ ಸಹಾಯಕರೊಂದಿಗೆ ಉಘೋ ಉಘೋ ಎನ್ನುತ್ತ ಮನೆ ಯನ್ನು ಪ್ರವೇಶಿಸಿ ಅವಳಿದ್ದ ಸ್ಥಳಕ್ಕೇ ಪ್ರವೇಶಿಸಿದರು. ಅಡುಗೆಯ ಮನೆಯಲ್ಲಿ ಮೌನವಾಗಿ ರೊಟ್ಟಿ ಬಡಿಯುತ್ತಿದ್ದ ಅವಳು ಇವರನ್ನು ಕಾಣುತ್ತಲೇ ಕೊಳವಿ ಕಡಚಿಗೆಗಳನ್ನು ತೆಗೆದುಕೊಂಡು ಬೀಸಿ ಮಾಂತ್ರಿಕನ ಮೇಲೆ ಎಸೆದಳು. ಹರಿತ ವಾದ ಕಡಚಿಗೆ ಅವನ ತಲೆಯಲ್ಲಿ ಸಿಕ್ಕಿಕೊಂಡಿತು. ಧಾರಾಕಾರವಾಗಿ ನೆತ್ತರು ಸುರಿಯಲಾರಂಭಿಸಿತು. ಕೂಡಲೇ ಉರಿಯುವ ಒಲೆಯಲ್ಲಿ ಕೈಹಾಕಿ ಬೆಂಕಿಯ ಸುರಿಮಳೆಯನ್ನೇ ಸುರಿಯಲಾರಂಭಿಸಿದಳು. ಬೆಂಕಿಯ ಕಿಡಿಗಳು ಮಾಂತ್ರಿಕರೆಲ್ಲರ ಮೈಯನ್ನು ಸುಟ್ಟುಗಾಯಗೊಳಿಸಿದವು. ಈ ಭಯಂಕರ ವಾದ ಕಾಳೀ ಅವತಾರವನ್ನು ಕಂಡು ಎಲ್ಲರೂ ಭಯಪಟ್ಟು ಓಡಲಾರಂಭಿಸಿದರು ಮಾಂತ್ರಿಕನಂತೂ ಸಾವಿನ ದವಡೆಯಿಂದ ತಪ್ಪಿಸಿಕೊಂಡು ಉಳಿಯುವೆನೋ ಇಲ್ಲವೋ ಎಂದು ಬೀಳುತ್ತ ಏಳುತ್ತ ಹೊರಗೋಡಿ ಬರಬೇಕಾದರೆ ಸಾಕು-ಬೇಕಾ ಯಿತು. ಅವನ ಅಸಾಧಾರಣವಾದ ಮಂತ್ರಶಕ್ತಿಯ ಪ್ರಭಾವದಿಂದ ಹೀಗೆಲ್ಲ ಆಯಿತು. ಅವನು ಹಾಕಿದ ಮಂತ್ರ ಅವನಿಗೇ ತಿರುಮಂತ್ರವಾಗಿ ಪರಿಣಮಿಸಿ ತಲೆ ಒಡೆದುಕೊಂಡು ಮೈ ಕೈ ಸುಟ್ಟುಕೊಂಡು ಸಾವಿನ ಸಂಕಟ ಪಡುತ್ತ ಹೊರಗೆ ಬಂದು ಗೋಳಿಡಹತ್ತಿದನು. ಮಾಂತ್ರಿಕನನ್ನು ಹಿಡಿದು ತಲೆಯಲ್ಲಿ ಸಿಕ್ಕ ಕಡಚಿಗೆಯನ್ನು ಕಿತ್ತಬೇಕಾದರೆ ಮೂರು ನಾಲ್ಕು ಜನರೇ ಬೇಕಾಯಿತು. ರಾಮಬಾಣ ನಾಟಿದಂತಾಗಿತ್ತು. ಅವನ ಕೈ ಮೈ ಸುಡುವಷ್ಟು ಬೆಂಕಿಯನ್ನು ಅವಳು ತನ್ನ ಕೈಯಿಂದಲೇ ಹಿಡಿದು ಒಗೆಯುತ್ತಿದ್ದರೂ ದ್ಯಾವಮ್ಮನ ಕೈ ಮಾತ್ರ ಸುಟ್ಟಿರಲಿಲ್ಲ. ಇದಾದ ಮೂರು ನಾಲ್ಕು ದಿನಗಳವರೆಗೂ ದ್ಯಾವಮ್ಮ ಸುಂದಳಾಗಿ ಬಿದ್ದುಬಿಟ್ಟಳು. ಅನ್ನ ನೀರು ಸಹ ಮುಟ್ಟಲಿಲ್ಲ. ಇಂಥಾ ದುಸ್ಥಿತಿಯನ್ನು ಕಂಡು ಅವಳ ಮನೆಯವರು ಗುರುಗಳಲ್ಲಿ ಹೊತ್ತುಕೊಂಡು ಬಂದರು. ಬಂದ ವರೇ ಅವರ ಪಾದದಡಿಯಲ್ಲಿ ಹಾಕಿದರು. ಆ ಕೂಡಲೇ ಹೆಣ್ಣುಮಗಳು ಎಚ್ಚತ್ತು ಎದ್ದು ಕುಳಿತಳು. ಕತ್ತಲೆ ಕಳೆದು ಬೆಳಕು ಕಂಡಂತೆ ಅವಳಿಗೆ ಜ್ಞಾನದ ಕಿರಣ ಗಳು ಮೂಡಿದವು ಪೂರ್ವದಂತೆ ಜಾಗ್ರತೆಯಿಂದ ಎದ್ದು ನಮಸ್ಕರಿಸಿ ಮನೆಗೆ ನಡೆ ದಳು. ಮುಂದೆ ಯಾವಾಗಲೂ ಆ ಬ್ರಹ್ಮ ಪಿಶಾಚಿ ಕಾಣಿಸಿಕೊಳ್ಳಲಿಲ್ಲ.

● ಕಾಚಾಪೂರ ಗುರುಲಿಂಗಪ್ಪಗೌಡ ಬಿರೇದಾರ ಇವರು ಈ ಮಠದ ಶಿಷ್ಯ ರಾಗಿದ್ದು ಗುರುಗಳ ಬಗ್ಗೆ ಅಪಾರವಾದ ಭಕ್ತಿಯುಳ್ಳವರಾಗಿದ್ದರು. ಒಮ್ಮೆ ಅವರ ಮನೆಯಲ್ಲಿ ಬ್ರಹ್ಮಪಿಶಾಚಿ ಅಡಗಿಕೊಂಡು ಬಹಳ ಕಾಡಲಿಕ್ಕೆ ಹತ್ತಿತ್ತು. ಹೊಲ ದಿಂದ ನೂರಾರು ಚೀಲ ಧಾನ್ಯಗಳು ಮನೆಗೆ ಬಂದರೆ ಬರಬುಸ್ಸು ಆಗುತ್ತಿದ್ದವು. ಮನಸ್ಸಿಗೆ ಶಾಂತಿಯೂ ಕೂಡಾ ಇಲ್ಲದಂತಾಯಿತು. ಹಣದ ಅಡಚಣೆ ಕಾಡ ಲಿಕ್ಕೆ ಹತ್ತಿತು. ಬ್ರಹ್ಮಪಿಶಾಚಿ ತನ್ನ ಕುಚೇಷ್ಟೆ ತೋರಿಸಲಿಕ್ಕೆ ಹತ್ತಿತು. ಇದ ರಿಂದ ಸಾಕಾಗಿ ಅನೇಕ ಮಾಂತ್ರಿಕರನ್ನು ಕರೆಯಿಸಿ ತೋರಿಸಿದರು. ಆದರೂ ಪ್ರಯೋಜನೆಯಾಗಲಿಲ್ಲ.

ಒಮ್ಮೆ ಗುರುಗಳ ದರ್ಶನ ಪಡೆದುಕೊಂಡು ಬರಬೇಕೆಂದು ಶ್ರಾವಣ ಮಾಸ ದಲ್ಲಿ ಮಾಗಣಗೇರಿಗೆ ಬಂದನು. ಗುರುಗಳು ಶ್ರಾವಣ ಮಾಸದ ಒಂದು ತಿಂಗಳ ಪರ್ಯಂತರ ಶಿವಪೂಜಾನುಷ್ಠಾನದಲ್ಲಿ ಕುಳಿತಿದ್ದರು ಪ್ರತಿದಿವಸ ಸಾಯಂಕಾಲಕ್ಕೆ ಪುರಾಣ ಪ್ರವಚನ ನಡೆಯುತ್ತಿತ್ತು. ಪುರಾಣ ಮುಗಿದ ನಂತರ ಭಕ್ತರ ಯೋಗ ಕ್ಷೇಮದ ಬಗ್ಗೆ ವಿಚಾರಿಸುತ್ತಿದ್ದರು. ಆ ಸಮಯದಲ್ಲಿ ಗುರುಲಿಂಗಪ್ಪ ಗೌಡನ ಪಾಳೆ ಬಂದಾಗ ಒಮ್ಮೆಲೇ ದುಃಖ ಉಮ್ಮಳಿಸಿ ಬಂದು ಗುರುಗಳ ಪಾದಕ್ಕೆ ಬಿದ್ದು ಬೇಡಿಕೊಂಡನು. ಅವನ ಕಷ್ಟಗಳನ್ನು ತಿಳಿದುಕೊಂಡು ನಿನ್ನ ಮನೆಯಲ್ಲಿ ಬ್ರಹ್ಮಪಿಶಾಚಿ ಅಡಗಿಕೊಂಡಿದೆ. ಅದು ಹೋಗಬೇಕಾದರೆ ಪ್ರತಿ ವರ್ಷ ರುದ್ರಾ ಭಿಷೇಕ ಮಾಡಿಸಿ ಜಂಗಮರನ್ನು ತೃಪ್ತಿಪಡಿಸಬೇಕು ಎಂದು ಆಜ್ಞಾಪಿಸಿದರು. ಆಗ ಒಂದು ಟೆಂಗಿನಕಾಯಿ ಮಂತ್ರಿಸಿ ಇದನ್ನು ಜಗುಲಿಯ ಮೇಲಿಟ್ಟು ಪ್ರತಿ ದಿವಸ ಪೂಜೆ ಮಾಡುತ್ತಿರಬೇಕು ಎಂದು ಹೇಳಿದರು. ಅದಕ್ಕೆ ಒಪ್ಪಂಬಟ್ಟು ತನ್ನ ಗ್ರಾಮಕ್ಕೆ ತೆರಳಿದನು. ಮುಂದೆ ಕೆಲವು ದಿನಗಳು ಗತಿಸಿದ ನಂತರ ಗುರು ಗಳನ್ನು ಕರೆದುಕೊಂಡು ಹೋಗಿ ರುದ್ರಾಭಿಷೇಕ ಮಾಡಿಸಿದನು. ಆದರೆ ಮಾರನೇ ವರ್ಷ ರುದ್ರಾಭಿಷೇಕ ಮಾಡಿಸುವ ಸಮಯ ಬಂದಿತು. ಆಗ ವಿಚಾರ ಮಾಡುತ್ತಾನೆ ಏನೆಂದರೆ ನನಗೆ ರುದ್ರ ಓದಲು ಬರುವದು ಮಹಾಸ್ವಾಮಿಗಳವ ರನ್ನು ಕರೆಯಿಸಿದರೆ ಬಹಳ ಖರ್ಚು ಬರುವದು ನಾನೇ ಓದಿದರೆ ಖರ್ಚು ಉಳಿ ಯುವದು ಎಂದು ವಿಚಾರ ಮಾಡಿ ತಾನೇ ರುದ್ರ ಓದುತ್ತಾನೆ. ಆದರೆ ರುದ್ರ ಓದಿ ಮುಗಿಸುವದರೊಳಗಾಗಿ ಕಣ್ಣು ಕಾಣಿಸದಾಯಿತು. ಆಗ ಮಕ್ಕಳ ಹೆಸರು ಹಿಡಿದು ಕೂಗುತ್ತಾನೆ. ನನ್ನ ಕಣ್ಣು ಹೋದವು, ನನ್ನ ಕಣ್ಣು ಹೋದವು.

ಎಂದು ಗೋಳ್ಯಾಡತೊಡಗಿದನು. ಈ ಸಮಾಚಾರವನ್ನು ಕೇಳಿ ಅಲ್ಲಿಯೇ ಇದ್ದ ಶರಣರು ಬಂದು ನೋಡಿ ಅವನು ಮಾಡಿದ ತಪ್ಪನ್ನು ಸ್ಮರಣೆಗೆ ತಂದುಕೊಟ್ಟರು. ಇದು ಯಾರಿಂದಲೂ ಸಾಧ್ಯವಿಲ್ಲ. ಮಾಗಣಗೇರಿಯ ಗುರುಗಳಿಂದಲೆ ಪರಿಹಾರ ದೊರೆಯುವದು ಎಂದು ತಿಳಿಸಿದರು. ಆಗ ಗುರುಲಿಂಗಪ್ಪನನ್ನು ಎತ್ತಿನ ಗಾಡಿಯಲ್ಲಿ ತಂದು ಮಹಾಸ್ವಾಮಿಗಳವರ ಪಾದಕ್ಕೆ ಹಾಕಿದರು. ಜ್ಞಾನ ದೃಷ್ಟಿಯಿಂದ ಇದೆಲ್ಲವನ್ನರಿತ ಗುರುಗಳು ಅವನಿಗೆ ತತ್ವೋಪದೇಶ ಹೇಳಿದರು. ಪುನಃ ಅವರ ಕೃಪೆಯಿಂದ ಹೋದ ಕಣ್ಣು ಪ್ರಾಯಶ್ಚಿತ್ತ ಕ್ರಿಯೆ ಮಾಡಿದ ನಂತರ ಮತ್ತೆ ಕಣ್ಣು ಬಂದವು. ತಪ್ಪಿನ ಅರಿವಾದಿನಿಂದ ಇಲ್ಲಿಯ ವರೆಗೆ ಪ್ರತಿವರ್ಷ ರುದ್ರಾಭಿಷೇಕ ಮಾಡಿಸುತ್ತ ಬಂದಿರುತ್ತಾರೆ.

● ಮಾಗಣಗೇರಿಯ ಕುಂಬಾರ ಸಾಯಿಬಣ್ಣನಿಗೆ ಗಂಡಸ ಮಕ್ಕಳಿರಲಿಲ್ಲ ಒಂದು ದಿನ ಗುರುಗಳಲ್ಲಿಗೆ ಬಂದು ಬೇಡಿಕೊಂಡ. ಗುರುಗಳು ಮಂತ್ರ ಹಾಕಿದ ಒಂದು ಟೆಂಗಿನಕಾಯಿ ಆಶೀರ್ವಾದಮಾಡಿದರು. ಇದನ್ನು ಪ್ರತಿನಿತ್ಯ ದೇವರ ಜಗಲಿಯ ಮೇಲಿಟ್ಟು ಪೂಜೆ ಮಾಡು ಎಂದು ಹೇಳಿದರು. ಮುಂದೆ ಒಂದು ವರ್ಷ ತುಂಬುವದರೊಳಗೇ ಒಬ್ಬ ಗಂಡಸು ಮಗನನ್ನು ಪಡೆದನು. ಅವನ ಜಾವಳ ಕಾರ್ಯದಲ್ಲಿ ಸಾಯಿಬಣ್ಣ ಒಂದು ಮುಖ ಮಾಡಿಸಿ ಕೋಟಪ್ಪಯ್ಯನ ಗುಡಿಯಲ್ಲಿ ಅವನ ಮುಂದೆಯೇ ಮಗನ ಜಾವಳ ಸ್ವಾಮಿಗಳ ಸ್ವಹಸ್ತದಿಂದ ಇಳಿಸಿಕೊಂಡು ಸ್ವಾಮಿಗಳಿಗೆ ಗುರುಕಾಣಿಗೆ ಸಲ್ಲಿಸಿ ಸಂತುಷ್ಟಗೊಳಿಸಿ ಹೋದನು. ಇವನು ಗುಪ್ತವಾಗಿ ಒಂದು ಮಹಾ ಕಾರ್ಯವನ್ನು ಮಾಡಿದ. ಅಂದಿನಿಂದ ಅಂದರೆ ಗುರುಗಳು ಟೆಂಗ ಕೊಟ್ಟಂದಿನಿಂದ ಹಿಡಿದು ಜಾವಳ ತೆಗೆಯುವವರೆಗೆ ಪ್ರತಿನಿತ್ಯ ಗುರುಗಳ ಜಳಕದ ಹೊತ್ತಿಗೆ ಬಂದು ಅವರು ಜಳಕ ಮಾಡುವ ಹೊತ್ತಿನಲ್ಲಿ ಹರಿದು ಬರುವ ನೀರನ್ನು ಹಿಡಿದುಕೊಂಡು ಭಕ್ತಿ ಪೂರ್ವಕವಾಗಿ ಕುಡಿದು ಹೋಗುತ್ತಿದ್ದನು. ಮುಂದೆ ಇದೇ ಸಾಯಿಬಣ್ಣನಿಗೆ ಕೇಸತೊಡಿ ಆಯಿತು. ಅದು ಒಡೆದು ಮೂರು ತಿಂಗಳುಗಳ ವರೆಗೆ ಸೋರಿತು. ಸ್ವಾಮಿಗಳ ಮೇಲೆಯೇ ಭಕ್ತಿ ಇಟ್ಟಿದ್ದ ಸಾಯಿಬಣ್ಣ ಸ್ವಾಮಿಗಳಿಗೇ ಮೊರೆಯಿಟ್ಟನು. ಗುರುಗಳು ಒಂದು ದಾರಾ ಮಂತ್ರಿಸಿ ಕಟ್ಟಿ 4 ದಿನ ಲೋಬಾನ ಹಾಕಿಕೊಳ್ಳುವಂತೆ ಹೇಳಿದರು. ಅದರಂತೆ ಮಾಡಿ ಆ ಕೇಸತೊಡಿಗೆ ಗುರುಗಳ ಜಳಕದ ನೀರನ್ನೇ ಹಚ್ಚು

ತ್ತಿದ್ದ. ಮುಂದೆ 41 ದಿನ ಮುಗಿಯುವುದರೊಳಗೇ ಅದು ಮಾಯ್ದು ಹೋಯಿತು.

● ಮಾಗಣಗೇರಿಯ ಸ್ವಾಮಿಗಳ ಈ ಕೀರ್ತಿಯನ್ನು ಕೇಳಿ ಅನೇಕರು ಮಕ್ಕಳಾಗದವರು ಅಸಾಧ್ಯವಾದ ರೋಗಗಳುಳ್ಳವರು, ಭೂತ ಪ್ರೇತದವರು, ಸರ್ವ ಗ್ರಹ ಪೀಡಾಗ್ರಸ್ಥರೂ ಕೂಡಾ ಬಂದು ತಮ್ಮ ಭಕ್ತಿಗನುಸಾರವಾಗಿ ಫಲಪ್ರದರಾಗಿ ಹೋಗುತ್ತಿದ್ದರು. ಅದರಂತೆ ಮಳ್ಳಿ ಗ್ರಾಮದ ಮುಸಲ್ಮಾನರೂ ಕುರನಳ್ಳಿ ಗ್ರಾಮದ ಗಾಣಿಗರೂ ಬಂದು ತಮಗೆ ಇಲ್ಲಿಯವರೆಗೂ ಮಕ್ಕಳಾಗದ್ದನ್ನು ಹೇಳಿಕೊಂಡು ಮಕ್ಕಳನ್ನು ದಯಪಾಲಿಸಬೇಕೆಂದು ಬೇಡಿಕೊಂಡರು. ಮಕ್ಕಳು ಕೊಡುವುದೆಂದರೆ ಸುಮ್ಮನೇ ಅಲ್ಲ ಮಕ್ಕಳ್ಯಾ! ದಕ್ಷಿಣ ಕೊಡ್ರಿ ತಲಾ !25 ರೂಪಾಯಿ ಎಂದು ಹೇಳಿದರು. ಅವರ ಅಪ್ಪಣೆಯನ್ನು ಮೀರಲಾರದೇ ಇಬ್ಬರೂ ತಲಾ 125 ರೂಪಾಯಿಗಳಂತೆ ದಕ್ಷಿಣೆ ಸಲ್ಲಿಸಿ ಕಾಯಿ ತೆಗೆದುಕೊಂಡು ಹೋದರು. ಮುಂದೆ ಮಕ್ಕಳಾದ ನಂತರ ಇಬ್ಬರೂ ಇಲ್ಲಿಗೆ ಬಂದು ಜಾವಳ ಇಳಿಸಿಕೊಂಡು ಸ್ವಾಮಿಗಳ ಆಶೀರ್ವಾದ ಪಡೆದು ಹೋದರು. ಇದರಂತೆ ಶಾಹಾಪೂರದ ಹರಿಜನರಿಗೂ ಗಂಡಸು ಮಗನನ್ನು ದಯಪಾಲಿಸಿದರು. ಈ ರೀತಿ ಅನೇಕರು ಮಕ್ಕಳನ್ನು ಪಡೆದುಕೊಂಡಿದ್ದಾರೆ.

● ಮಾಗಣಗೇರಿಯ ಕೆಂಚಪ್ಪಗೌಡನ ಮಗನಿಗೆ ಬೆನ್ನಬ್ಯಾತಾಳ ಹುಣ್ಣು ಆಗಿ ಭಯಂಕರ ಸಂಕಟ ಪಡುತ್ತಿದ್ದನು. ಎಲ್ಲಾಕಡೆ ತಿರುಗಿ ಬಂದರೂ ಆ ಹುಣ್ಣು ಹೋಗುವಿಕೆಯ ಲಕ್ಷಣಗಳೇ ತೋರಲಿಲ್ಲ. ಬೇಸತ್ತು ಕೊನೆಗೆ ಸ್ವಾಮಿಗಳ ಹತ್ತಿರ ಬಂದರು. ಅವರು ದಾರಾ ಮಂತ್ರಿಸಿ ಲೋಬಾನ ಕೊಟ್ಟರು. ಅಲ್ಲದೆ ಒಂದು ಔಷಧ ಕೂಡಾ ಹೇಳಿದರು. ಇಂಗಲಿಕ ಬೆಣ್ಣಿ ಕಲಿಸಿ ಹಚ್ಚಿ ಮೇಲೆ ತಂಬಾಕಿನ ಎಲಿಹಾಕಿ ಕಟ್ಟಬೇಕೆಂದು ಹೇಳಿದರು. ಒಂದು ತಿಂಗಳ ಒಳಗಾಗಿ ಆ ಹುಣ್ಣು ಮಾಯ್ದು ಮೊದಲಿನಂತಾಯಿತು.

## ಪಾದೋದಕದ ಮಹಿಮೆ

ಕನ್ನಡನಾಡಿನ ಉತ್ತರ ಭಾಗದಲ್ಲಿರುವ ಗಡಿನಾಡಾದ ವಿಜಾಪೂರ ಜಿಲ್ಲೆಯ ಗಂಡುಮೆಟ್ಟಿನ ಸ್ಥಳವಾದ ಸಿಂದಗಿ ತಾಲೂಕಿನಲ್ಲಿ ಬಂಗಾರ ಬೆಳೆವ ಹೊನ್ನ ಮುಡಿ ಎಂಬ ಗ್ರಾಮವು ಹಳ್ಳಿಗಳಲ್ಲಿಯೇ ಅಗ್ಗಳಿಕೆಯನ್ನು ಪಡೆದು ಜಂಗಮೋತ್ತ

ಮಠ ಬೀಡಾಗಿ ಶಿವ ಪುಂಗವರ ನಾಡಾಗಿ ಮೆರೆಯುತ್ತಿದೆ. ಸರ್ವ ಕಲಾವಿದರ ನೆಲೆಬೀಡಾದ ಮುರಡಿ ಗ್ರಾಮವು ಶ್ರೇಷ್ಠ ವಿದ್ಯಾವಂತರಿಗೆ ಜನ್ಮಕೊಟ್ಟ ಭೂಮಿಯಾಗಿದೆ. ಈ ಗ್ರಾಮದಲ್ಲಿದ್ದಷ್ಟು ವಿದ್ಯಾವಂತರು, ಪದವೀಧರರು ಮತ್ತಾವ ಸಣ್ಣ ಗ್ರಾಮದಲ್ಲಿ ಇರುವುದಿಲ್ಲ. ಕೇವಲ ಒಂದು ನೂರು ಮನೆಗಳುಳ್ಳ ಈ ಗ್ರಾಮದಲ್ಲಿ ಮತ್ತಾವ ಹಳ್ಳಿಯೂ ಇಷ್ಟೊಂದು ಪದವೀಧರರನ್ನು ಹೊಂದಿಲ್ಲ. ವಿಶ್ವವಿದ್ಯಾನಿಲಯದ ಎಲ್ಲ ವಿಷಯಗಳಲ್ಲೂ ಉಚ್ಚಮಟ್ಟದ ಪದವಿ ಪಡೆದವರು ಈ ಊರಲ್ಲಿದ್ದಾರೆ. ಇಷ್ಟೇ ಅಲ್ಲ ಜಂಗಮ ಪುಂಗವರಾದ ಈರ್ವರು ತಮ್ಮ ಉಚ್ಚವ್ಯಾಸಂಗಕ್ಕಾಗಿ ಪರದೇಶಗಳಲ್ಲಿದ್ದಾರೆ. ಒಬ್ಬ ತರುಣ ವೈದ್ಯಕೀಯ ಪದವಿ ಪಡೆದು ಆಫ್ರಿಕಾ ಖಂಡದ ನೈರ್ಝೀರಿಯಾದಲ್ಲಿ ಒಂದು ವರ್ಷವಿದ್ದು ಈಗ ಫ್ರಾನ್ಸ ದೇಶದಲ್ಲಿ ಶ್ರೇಷ್ಠ ವ್ಯಾಸಂಗ ಪಡೆಯುತ್ತಿದ್ದಾರೆ. ಇನ್ನೊಬ್ಬ ತರುಣ ಡಾಕ್ಟರೇಟ ಪದವಿ ಪಡೆದು ಪಶ್ಚಿಮ ಜರ್ಮನಿಯಲ್ಲಿ ಆಹಾರ ಸಂಶೋಧನೆಯಲ್ಲಿ ತೊಡಗಿದ್ದಾನೆ. ಮುರಡಿಯ ಜಂಗಮ ಮನೆಗಳ ಪುರುಷ ಸದಸ್ಯರೆಲ್ಲರೂ ಪದವೀಧರರೇ ಆಗಿದ್ದಾರೆ. ಜ್ಯೋತಿಷ್ಯರತ್ನ ಶಿಖಾಮಣಿಯಾದ ಬ್ರಹ್ಮಶಿದ್ಧಾಂತಿಗೆ ಜನ್ಮಕೊಟ್ಟ ಪುಣ್ಯನಾಡಿದು.

ಇಂಥಾ ಪವಿತ್ರವಾದ ಊರಲ್ಲಿ ಪಂಚಾಳದವರ ಮನೆತನದಲ್ಲಿ ಸೂಗಪ್ಪ ಬಡಿಗೇರ ಎಂಬಾತನೊಬ್ಬ ವಾಸಿಸುತ್ತಿದ್ದನು. ಇವನು ನಿಷ್ಠಾವಂತ ಶಿವಭಕ್ತನಾಗಿದ್ದು ರೀತಿ ನೀತಿಗಳಲ್ಲಿ ಆಚಾರ ವಿಚಾರಗಳಲ್ಲಿ ಬಲ್ಲಿದವನಾಗಿದ್ದು ಶಿವ ಸಂಪರ್ಕ ಶೀಲವಂತನಾಗಿ ಇರುತ್ತಿದ್ದನು. ಇಷ್ಟೇ ಅಲ್ಲದೆ ಮಹಾ ಸ್ವಾಮಿಗಳಾದ ಮಾಗಣಗೇರಿಯ ಚರಪಟ್ಟಾಧ್ಯಕ್ಷರಿಂದ ದೀಕ್ಷೆ ಪಡೆದು ಶಿವಾನಂದ ಸ್ವಾನುಭಾವ ಕಾಲಹರಣ ಮಾಡುತ್ತಿದ್ದನು. ಒಮ್ಮೆ ಇವನ ಮಗನಿಗೆ ತಲೆತುಂಬ ತಟ್ಟು ಆಗಿತ್ತು. ಬೆಳ್ಳಗೆ ಗುಳ್ಳೆಗಳೆದ್ದು ಹುಣ್ಣುಗಳಂತೆ ಆಗಿದ್ದವು. ದವಾಖಾನೆಯ ಔಷದೋಪಚಾರ ಮಾಡಿದರೂ ಕಡಿಮೆಯಾಗಿರಲಿಲ್ಲ. ಆಗ ಸೂಗಪ್ಪನ ಹೆಂಡತಿ ಎಲ್ಲಪ್ಪನದೆಂದು ತಿಳಿದು ಎಲ್ಲಮ್ಮನನ್ನು ಮಾಡಲುದ್ಯುಕ್ತಳಾದಳು. ದೇವತೆ ಏಳುಕೊಳ್ಳದ ಎಲ್ಲಪ್ಪನ ವಾರ ಮಾಡಬೇಕೆಂದು ಮನೆಯನ್ನು ಸಾರಣೆ ಮಾಡಿ ಪಕ್ವಾನ್ನದ ಅಡುಗೆ ಮಾಡುತ್ತಿದ್ದಳು. ಆಗ ಸೂಗಪ್ಪ ಏನೆಂದು ವಿಚಾರಿಸಿದಾಗ ವಿಷಯ ಹೊರಬಂತು. ಕೂಡಲೇ ಸೂಗಪ್ಪ ಅದನ್ನು ಬಡಿಸಿ ಮಾಗಣಗೇರಿಗೆ ಹೊರಟು ಬಂದು ತನ್ನ ಗುರುಗಳಾದ ಚನ್ನ ವೃಷಭೇಂದ್ರರಿಗೆ ನಮ

ಸ್ಕರಿಸಿ ವಿಷಯ ತಿಳಿಸಿ ಅವರ ಪಾದೋದಕ ತೆಗೆದುಕೊಂಡು ಮನೆಗೆ ಬಂದ. ಬಂದವನೇ ಮಗನ ತಲೆಯನ್ನು ಸಂಪೂರ್ಣವಾಗಿ ಬೋಳಿಸಿದ, ತಲೆಯಿಂದ ರಕ್ತ ಸುರಿಯುತ್ತಿತ್ತು. ಆದರೂ ಬಿಡದೇ ಸ್ವಚ್ಛವಾಗಿ ಬೋಳಿಸಿ ತದನಂತರದಲ್ಲಿ ಸ್ನಾನ ಮಾಡಿಸಿ ಗುರುಗಳ ಪಾದೋದಕ ಹಚ್ಚಿದ. ಮುಂದೆ ಕೇವಲ ಒಂದು ವಾರದಲ್ಲಿ ಎಲ್ಲವೂ ಮಾಯ್ದು ತಲೆತುಂಬ ಮೊದಲಿನಂತೆ ಕೂದಲುಗಳು ಹುಲ ಸಾಗಿ ಬೆಳೆದುಬಂದವು. ಇದರ ಸಂತೋಷಕ್ಕಾಗಿ ಸೂಗಪ್ಪ ಮಾಗಣಗೇರಿ ಯಿಂದ ಗುರುಗಳನ್ನು ಕರೆತಂದು ಆದರಾತಿಥ್ಯ ಮಾಡಿ ಬೀಳ್ಕೊಟ್ಟನು.

ಸೂಗಪ್ಪನ ಭಕ್ತಿ ಎಷ್ಟಿತೆಂದರೆ ಒಂದು ನಿದರ್ಶನ ನಿಮಗೆ ಕೊಡುತ್ತೇನೆ. ಒಮ್ಮೆ ತನ್ನ ಅನುಯಾಯಿಯೊಂದಿಗೆ ಪರ ಊರಿಗೆ ಹೊರಟಾಗ ಮಾರ್ಗದಲ್ಲಿ ಗೋಲಗೇರಿ ಎಂಬ ಊರಲ್ಲಿ ಗುಗ್ಗಳ, ತನ್ನದಡ ಮುಟ್ಟದೇ ಅರ್ಧದಾರಿಯಲ್ಲಿಯೇ ನಂದಿದ್ದರಿಂದ ಅಲ್ಲಿಯೇ ಇಟ್ಟುಹೋಗಿ ನಾಲ್ಕು ತಿಂಗಳು ಸಂದಿದ್ದವು. ಅಕ ಸ್ಮಾತ್ ಸೂಗಪ್ಪ ಅದೇ ದಾರಿಯಲ್ಲಿ ಹಾಯ್ದು ಹೋಗುವಾಗ ಆ ನಂದಿದ ಗುಗ್ಗ ಳದ ಅಗ್ಗಟಿಗೆಗಳನ್ನು ಕಂಡನು. ಅವನ್ನು ಹಾಗೇ ಬಿಟ್ಟು ಹೋಗುವದು ನನ್ನ ಧರ್ಮವಲ್ಲವೆಂದು ತಿಳಿದು ತನ್ನ ಅನುಯಾಯಿಯೊಂದಿಗೆ ಆ ಗುಗ್ಗಳದವರ ಮನೆಗೆ ಹೇಳಿ ಕಳಿಸಿದನು. ಈ ಕೂಡಲೇ ಸರ್ವ ಸಿದ್ಧತೆಯೊಂದಿಗೆ ಬರಬೇ ಕೆಂದು ಹೇಳಿ ಕಳಿಸಿ, ಅಲ್ಲಿ ತಾನು ತನ್ನ ಪುರವಂತರ ವೇಷವನ್ನು ತೊಡಲು ಪ್ರಾರಂಭಿಸಿದನು. ಇದನ್ನು ತಿಳಿದ ಆ ಮನೆಯವರು ಪುನಃ ಮಂಗಳವಾದ್ಯ ಗಳನ್ನು ಕರಸಿ ತನಾರ್ತಿಯೊಂದಿಗೆ ಮುತ್ತೈದೆಯರೇ ಮೊದಲಾಗಿ ಮದು ಮಕ್ಕಳೂ ಸಹಿತ ಒದ್ದೆ ಬಟ್ಟೆಯಲ್ಲಿ ಗುಗ್ಗಳದ ಸರ್ವ ಸದ್ಧತೆಯಲ್ಲಿ ಬಂದರು. ಅಷ್ಟರಲ್ಲಿ ವೀರಾವೇಶ ಧರಿಸಿನಿಂತ ಸೂಗಪ್ಪ ವೀರಭದ್ರ ದೇವರ ವಡಪಿನೊಂದಿಗೆ ಮಂಗಳಾರತಿಯನೆತ್ತಿ ವೀರ ಫೂತ್ಕಾರದೊಡನೆ ಘರ್ಜಿಸಿ ಕಿಡಿಕಾರುವ ಕಣ್ಣು ಗಳಿಂದ ಆರಿದ ಗುಗ್ಗಳುಗಳನ್ನು ನೋಡುತ್ತ ನಾಲಿಗೆಯನ್ನು ಹೊರತೆಗೆದು ಕೈಯ ಲ್ಲಿಯ ಖಡ್ಗದಿಂದ ಅರ್ಧ ನಾಲಿಗೆಯನ್ನು ಕೊಯ್ದು ಗುಗ್ಗಳಗಳ ಮೇಲೆ ರಕ್ತ ಸಿಂಪರಣೆ ಮಾಡುವುದೇ ತಡ ಮಧ್ಯದಲ್ಲಿದ್ದ ತನಾರ್ತಿಯು ಸಿಗಿನಿಗಿಸುವ ಜ್ವಾಲೆ ಭುಗಲ್ ಭುಗಲ್ ಎಂದು ಗುಗ್ಗಳದ ಆರಿದ ಕಟ್ಟಿಗೆಗಳಿಗೆ ಹತ್ತಿ ಉರಿಯಲಾರಂಭಿ ಸಿತು. ಧಗಧಗನೆ ಉರಿಯುತ್ತಿರುವ ಗುಗ್ಗಳಗಳನ್ನೇ ದಿಟ್ಟಿಸುತ್ತ ಸೂಗಪ್ಪ ತನ್ನ

ಕೊಯ್ದು ನಾಲಿಗೆಯನ್ನು ಒಳಗೆ ಎಳೆದುಕೊಂಡನು.ಒಮ್ಮೆ ನಾಲಿಗೆ ಬಾಯಲ್ಲಿ ಇಟ್ಟು ಕೊಂಡಾಕ್ಷಣವೇ ಸೋರುತ್ತಿರುವ ರಕ್ತ ನಿಂತು ನಾಲಿಗೆ ಮೊದಲಿನಂತೆಯೇ ಕಾಣ ತೊಡಗಿತು. ಇದು ಅವನ ಜೀವನದಲ್ಲಿ ಮಾಡಿದ ದೊಡ್ಡ ಸಾಧನೆ.

● ತಿಳಗೂಳದಲ್ಲಿ ಒಮ್ಮೆ ಗುರುಗಳು ಬಿನ್ನ ತೀರಿಸಲು ಹೋಗಿದ್ದರು. ಊಟೋ ಪಚಾರ ಮುಗಿಸಿದ ಬಳಿಕ ದಕ್ಷಿಣೆ ಕೊಡಬಂದರು. ಕೇವಲ ಒಂದು ರೂಪಾಯಿ ಮಾತ್ರ. ಆದರೆ ಗುರುಗಳು ಎರಡು ರೂಪಾಯಿ ಕೇಳಿದರು. ಶಿಷ್ಯವರ್ಗದವ ರಾದ ಅವರು ಗುರುಗಳ ಮಾತಿಗೆ ಮನ್ನಣೆ ಕೊಡದೇ ಕಡಾಖಂಡಿತವಾಗಿ ಇಲ್ಲ ವೆಂದು ಹೇಳಿದರು. ಆ ಕೂಡಲೇ ಗುರುಗಳು "ನಿಮಗೆ ಇಲ್ಲದಂತೆಯೇ ಆಗಲಿ" ಎಂದು ಅಂದು ಬಂದರು. ಈಗಲೂ ಸಹಿತ ಅವರ ಮನೆತನ ಬಡವಾಗಿಯೇ ಉಳಿ ದಿದೆ. ಅವರು ಮೊದಲು ಬಹಳ ಶ್ರೀಮಂತರಿದ್ದರು. ಮಹಾತ್ಮರ ವಾಣಿ ಎಂದೆಂದಿಗೂ ಸುಳ್ಳು ಆಗುವದಿಲ್ಲ.

## ಕೆಂಚರಾಯ ದೇವರು ಸ್ವತಃ ಬಂದು ಆಮಂತ್ರಣ ಕೊಟ್ಟು ಹೋದದ್ದು

ಮಾಗಣಗೇರಿಯಲ್ಲಿ ಒಮ್ಮೆ ಕುರುಬ ಸಮಾಜದವರು ದೊಡ್ಡ ಹಬ್ಬದ ನಿಮಿತ್ಯ ನಾಲ್ಕಾರು ದಿನಗಳವರೆಗೆ ಅದ್ಧೂರಿಯ ಕಾರ್ಯಕ್ರಮಗಳನ್ನಿಟ್ಟುಕೊಂಡಿ ದ್ದರು. ಅನ್ನಪ್ರಸ್ಥದ ದಿವಸ ಮಹಾ ಗುರುಗಳಿಗೂ ಬಿನ್ನ ಹೇಳಲು ಪಣಸಿ ತೆಗೆದುಕೊಂಡು ಬಾಜಿಯೊಂದಿಗೆ ಬಂದು ಬಿನ್ನಕೊಟ್ಟು ಮೆರವಣಿಗೆಯಲ್ಲಿ ಕರೆ ದೊಯ್ಯಬೇಕೆಂದು ಕೇಳಿಕೊಂಡರು. ಅವಕ್ಕೆ ಮಹಾ ಸ್ವಾಮಿಗಳು ನಿರಾಕರಿಸಿ, ಅವರ ಪಡಿಯನ್ನು ಸಹಿತವಾಗಿ ಹಿಂದಕ್ಕೆ ಕಳಿಸಿಬಿಟ್ಟರು. ಅಂದೇ ರಾತ್ರಿ ಗುರು ಗಳು ಅನುಷ್ಠಾನಕ್ಕೆ ಕುಳಿತಾಗ ಒಬ್ಬ ಕಂಬಳಿಹೊತ್ತು ಮುದುಕ ಬಂದು ಎದು ರಿಗೆ ನಿಂತು ಗುರುಗಳೇ ? ಈ ಎರಡು ರೂಪಾಯಿಗಳನ್ನು ತೆಗೆದುಕೊಳ್ಳಿ ನಾಳೆ ನನ್ನ ಬಿನ್ನ ಹಿಡಿದು ನನ್ನ ದೇವಸ್ಥಾನಕ್ಕೆ ಬಂದು ಭಕ್ತ ಸಮೂಹಕ್ಕೆ ಆನಂದ ವನ್ನುಂಟು ಮಾಡಿ, ಆಶೀರ್ವದಿಸಬೇಕೆಂದು ಹೇಳಿ ಎರಡು ರೂಪಾಯಿ ಮುಂದೆ ಇಟ್ಟು ಹೊರಟು ಮಾಯವಾದನು. ನಂತರ ಮರುದಿನ ಮುಂಜಾನೆ ಎದ್ದವರೇ ಆ ಎರಡು ರೂಪಾಯಿಗಳಲ್ಲಿ ಗೋದಿ ಬೆಲ್ಲ ತರಿಸಿ ಮನೆಯಲ್ಲಿ ಸಜ್ಜಕ (ಪಾಯಸ)

ಮಾಡುವಂತೆ ತಿಳಿಸಿ ಕುರುಬರ ಮುಖಂಡರನ್ನು ಕರೆಯಿಸಿ ನಿಮ್ಮ ದೇವರು ಸ್ವತಃ ಬಂದು ಆಮಂತ್ರಣ ಕೊಟ್ಟಿದ್ದಾನೆಂದು ತಿಳಿಸಿ ನಿಮ್ಮ ದೇವಸ್ಥಾನಕ್ಕೆ ನಾನು ಬರಲು ಸಿದ್ಧ. ಕರೆದುಕೊಂಡು ಹೋಗಿರಿ ಎಂದು ಅಪ್ಪಣೆ ಮಾಡಿದರು. ಕೆಂಚರಾಯ ದೇವರೇ ಸ್ವತಃ ಬಂದು ಗುರುಗಳಿಗೆ ಬಿನ್ನ ಹೇಳಿ ಹೋಗಿದ್ದರಿಂದ ಕುರುಬರಿಗೆ ಮತ್ತಷ್ಟು ಆನಂದವಾಗಿ ಸ್ವಾಮಿಗಳನ್ನು ಬಹು ವಿಜೃಂಬಣೆಯಿಂದ ಕರೆದುಕೊಂಡು ಹೋದರು. ರಾಜ ವೈಭೋಗದ ಮೆರುವಣಿಗೆಗಳನ್ನು ಮೀರಿಸುವ ಅದ್ಧೂರಿಯ ಮೆರವಣಿಗೆಯಲ್ಲಿ ಕರೆದೊಯ್ದು ಸ್ವಾಮಿಗಳನ್ನು ಸನ್ಮಾನಿಸಿದರು.

● ಮಾಗಣಗೇರಿಯ ಶರಣಪ್ಪಗೌಡ ಪೋಲಿಸ ಪಾಟೀಲ ಎಂಬಾತನಿಗೆ ಎರಡು ಲಗ್ನವಾದರೂ ಮಕ್ಕಳಾಗಿರಲಿಲ್ಲ. ಗುರುಗಳು ಲೋಬಾನ ಮಂತ್ರಿಸಿ ಕೊಟ್ಟು ಅವರಿಗೆ ಮಕ್ಕಳಾಗುವಂತೆ ಆಶೀರ್ವದಿಸಿದರು. ಅವರ ಕಿರಿಯ ಹೆಂಡತಿಗೆ ಗಂಡು ಮಗುವಾದ ಕೂಡಲೇ ಮಗನ ತೊಟ್ಟಿಲ ಕಾರ್ಯದಲ್ಲಿಯೇ ಗುರುಗಳನ್ನು ಪಲ್ಲಕ್ಕಿ ಮಹೋತ್ಸವದೊಂದಿಗೆ ಕರೆದೊಯ್ದು ಸನ್ಮಾನಿಸಿ ದಕ್ಷಿಣಾದಿಗಳಿಂದ ಸಂತುಷ್ಟಗೊಳಿಸಿ ಕಳಿಸಿಕೊಟ್ಟರು.

## ಗುರುಭಕ್ತ ಗಟ್ಟಿಯವರ ವಿವರ

ಆಂಧ್ರ ಪ್ರದೇಶದ ಹೈದರಾಬಾದ ರಾಜ್ಯದಲ್ಲಿರುವ ಕರ್ನೂಲ ಜಿಲ್ಲೆಯಲ್ಲಿಯೇ ಪ್ರಸಿದ್ಧವಾದ ಗಟ್ಟಿ ಎಂಬ ಊರಲ್ಲಿ ಬಸವಣ್ಣ ನೀಲಮ್ಮ ಎಂಬ ದಂಪತಿಗಳು ವಾಸವಾಗಿದ್ದರು. ಇವರು ಶ್ರೇಷ್ಠ ಶಿವಭಕ್ತರಿದ್ದು ಅಮೂಲ್ಯ ಭಕ್ತರತ್ನಗಳಾಗಿದ್ದರು. ಯತಾರ್ಥ ಸ್ವಭಾವದ ನಿಷ್ಠಾವಂತ ಗುರು ಪೂಜಕರೂ ಸ್ವಾಮಿನಿಷ್ಠರೂ ಆಗಿದ್ದರು. ಇವರ ಧರ್ಮಸತ್ನಿ ನೀಲಮ್ಮ ಪತಿ ಆಜ್ಞಾಧಾರಕಳಾಗಿರುತ್ತಿದ್ದಳು. ಬಸವಣ್ಣನು ಆಗಿನ ಕಾಲದಲ್ಲಿ ಸಾಧಾರಣ ಬಡವ ಮನೆತದಲ್ಲಿ ಬೆಳೆದು ಬಂದಿದ್ದರು. ಆಗಿನಿಂದಲೂ ಗಟ್ಟಿ ರಾಯಚೂರ, ಶಹಾಪೂರಗಳಲ್ಲಿ ವಲಸೆ ಹೋಗುವ ಕುಬಸದ ವ್ಯವಹಾರ ಮಾಡಿ ಬಂದದ್ದರಲ್ಲಿಯೇ ತೃಪ್ತಿಪಡುತ್ತಿದ್ದರು. ತಮ್ಮ ವ್ಯವಹಾರದಲ್ಲಿದ್ದಾಗ್ಯೂ ಕೂಡಾ ದೇವರನ್ನು ಮರೆತವರಲ್ಲ. ಮನೆ ದೇವರಾದ ಮಟಮರಿ ವೀರಭದ್ರ ದೇವರಲ್ಲಿ ಯಾವಾಗಲೂ ಅನನ್ಯ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ದೇವರನ್ನು, ಗುರುಗಳನ್ನು, ಜಂಗಮರನ್ನು

ಮರೆತವರಲ್ಲ. ಆದರೂ ಇವರನ್ನು ವಿಧಿ ವಿಕಟಾಟ್ಟಹಾಸದಿಂದ ಬಾಯ್ದೆರೆದು ತನ್ನ ಕರಾಳ ಕ್ರೂರಛಾಯೆಯಿಂದ ಕೈಚಾಚಿ ತಬ್ಬಿಕೊಂಡಿತು. ಈ ಶಿವಭಕ್ತರಿಗೆ ಮದುವೆಯಾಗಿ 10-12 ವರ್ಷಗಳು ಕಳೆದರೂ ಸಂತಾನ ಫಲವಿಲ್ಲದೇ ಮರುಗುತ್ತಿದ್ದರು. "ಅಪುತ್ರಸ್ಯ ಗತಿರ್ನಾಸ್ತಿ" ಎಂಬಂತೆ ಮಕ್ಕಳಿಲ್ಲದವರಿಗೆ ಮೋಕ್ಷವೇ ಇಲ್ಲವೆಂದು ಕೃತಿಗಳು ಸಾರುತ್ತಿವೆ. ಆದ್ದರಿಂದ ಅವರು ಸದಾ ಮಕ್ಕಳ ಚಿಂತೆ ಮಾಡುತ್ತಿದ್ದರು. ಮೇಲಾಗಿ ನೀಲಮ್ಮನವರಿಗೆ ಭೂತ ಹಿಡಿದುಕೊಂಡಿತು. ಇದರಿಂದಾಗಿ ಬಸವಣ್ಣನವರು ತನ್ನ ಧರ್ಮಪತ್ನಿ ನೀಲಮ್ಮನನ್ನು ಕರೆದುಕೊಂಡು ಪ್ರತಿ ಅಮವಾಸ್ಯೆ ಮಟಮಾರಿಗೆ ಬರುತ್ತಿದ್ದರು. (ಹೋಗುತ್ತಿದ್ದರು) ಅಲ್ಲಿ ಕಡಿಮೆಯಾಗದೇ ಇದ್ದಾಗ ಬಸವಣ್ಣ ಗಾಬರಿಯಾಗಿ ತನಗೆ ಬೇಕಾದವರಲ್ಲಿ ತನ್ನ ಕಷ್ಟವನ್ನು ತೋಡಿಕೊಂಡನು. ಅವರ ಗುರುತಿನವರಲ್ಲೊಬ್ಬರಾದ ಶಹಾಪೂರದ ಬಸಯ್ಯ ತಾತನವರು ಮಾಗಣಗೇರಿಯ ಮುತ್ತ್ಯಾ ಅವರ ವಿಷಯ ತಿಳಿಸಿದರು. ಶರಣರಾದ ಬಸಯ್ಯನವರ ಅಪ್ಪಣೆಯಂತೆ ಬಸವಣ್ಣ ತನ್ನ ಹೆಂಡತಿ ನೀಲಮ್ಮನನ್ನು ಕರೆದುಕೊಂಡು ಮಾಗಣಗೇರಿಯ ಶ್ರೀಗುರು ಚನ್ನವೃಷಭೇಂದ್ರರ ದರ್ಶನಕ್ಕೆ ಬಂದರು. ಆ ದಂಪತಿಗಳಿಗೆ ಕೆಲವು ತಿಂಗಳ ಮಠದಲ್ಲಿಯೇ ಇಟ್ಟುಕೊಂಡರು. ಪ್ರತಿ ದಿವಸ ನಿಯಮ ಪೂಜಾದಿಗಳನ್ನು ಮಾಡುತ್ತ ಹೋಗಲಾಗಿ ಭೂತ ಓಡಿ ಹೋಯಿತು.

ಮುಂದೆ ಪುತ್ರ ಸಂತಾನದ ಸಲುವಾಗಿ ಗುರುಗಳು ತಾಯಿ ನೀಲಮ್ಮನನ್ನು ಕಂಡು ಏಳು ತಿಂಗಳುಗಳವರೆಗೆ ಬನ್ನಿ ಮಹಾಂಕಾಳಿಯನ್ನು ಪೂಜಿಸಿ ನಿತ್ಯ ನಿಯಮಾನುಸಾರ ಮಡಿಯಿಂದ ಪ್ರಸಾದ ತೆಗೆದುಕೊಳ್ಳಬೇಕು. ಅದರ ವಿಧಾನ ಹೇಗೆಂದರೆ ಪ್ರತಿನಿತ್ಯ ಬೆಳಗಿನ ನಾಲ್ಕು ಘಂಟೆಗೆ ಎದ್ದು ಮಾತನಾಡದೇ ಸ್ನಾನ ಮುಗಿಸಿಕೊಂಡು ಸಮೀಪದ ಊರ ಹೊರಗಿನ ಬನ್ನಿ ಗಿಡಕ್ಕೆ ಹೋಗಿ ಪೂಜಿಸಿ ಪ್ರದಕ್ಷಿಣೆ ಹಾಕಿ ಮನೆಗೆ ಬಂದು ಲಿಂಗಪೂಜಾ ಮಾಡಿಕೊಂಡ ನಂತರವೇ ಪ್ರಸಾದ ಸ್ವೀಕರಿಸಬೇಕೆಂದು ಹೇಳಿದರು. ಯಾರ ಕಣ್ಣೂ ಕಾಣಿಸಬಾರದೆಂದೂ ಇದರ ಬಗ್ಗೆ ಜಾಗರೂಕರಾಗಿರಬೇಕೆಂದೂ ಹೇಳಿದರು. ಇದು ತಪ್ಪಿದರೆ ನೀವು ಹಿಡಿದ ನಿಯಮ ತಪ್ಪಿ ಮಕ್ಕಳಾಗುವುದಿಲ್ಲವೆಂದು ಎಚ್ಚರಿಸಿದರು. ಅದರಂತೆ ನೀಲಮ್ಮ ತನ್ನ ಪತಿಯ ಊರಾದ ಗಟ್ಟಿಯಲ್ಲಿ ಈ ಮಹಾವ್ರತವನ್ನು ಪ್ರಾರಂಭಿ

ಸಿದಳು. ಗಟ್ಟಿಯಲ್ಲಿ ದುರದೃಷ್ಟವಶಾತ್ ಪ್ಲೇಗ ಬಂದು ಊರಲ್ಲಿಯ ಎಲ್ಲ ಜನರೂ ಊರು ಬಿಟ್ಟು ಹೋದರು. ದಾರಿ ದಾರಿಗೆ ಹೆಣಗಳ ರಾಶಿ ಬಿದ್ದುದನ್ನು ಕಂಡೂ ಕೂಡಾ ನೀಲಮ್ಮ ತನ್ನ ವ್ರತ ಬಿಡಲಿಲ್ಲ. ಮನೆಯ ಎಲ್ಲ ಜನರೂ ಮನೆ ಬಿಟ್ಟು ಹೋದರು. ಆದರೆ ನೀಲಮ್ಮ ಮಾತ್ರ ಧೈರ್ಯವಾಗಿ ಮನೆಯಲ್ಲಿ ಒಬ್ಬಳೇ ಇದ್ದು ವ್ರತಕ್ಕೆ ಧಕ್ಕೆಯುಂಟಾಗಬಾರದಂತೆ ನಡೆದುಕೊಂಡಳು. ಊರಲ್ಲಿ ಆಗ ಒಂದು ಚಿಕ್ಕಿನ ಮರಿ ಸಹಿತ ಸುಳಿಯುತ್ತಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಅಂಜದೇ ವ್ರತ ಮುಂದುವರಿಸಿಕೊಂಡು ಬಂದಳು. ಇದು ಗುರುಗಳು ಹೇಳಿದ ಅವಧಿ ಮುಗಿದು ಹನ್ನೊಂದು ತಿಂಗಳುಗಳವರೆಗೆ ನಡೆಯಿತು. ಏಕೆಂದರೆ ಊರು ಬಿಟ್ಟು ಹೋದ ಜನ ಬಹಳ ದಿನಗಳವರೆಗೆ ಹಿಂದಿರುಗಿ ಬರಲಿಲ್ಲ. ಮನೆಯವರೆಲ್ಲ ಊರ ಜನರೊಂದಿಗೆ ಹಿಂದಿರುಗಿ ಬಂದ ಬಳಿಕ ತನ್ನ ವ್ರತ ಮುಗಿಸಿದಳು. ಆದರೂ ಮಕ್ಕಳಾಗುವ ಘೋರಣೆ ಕಂಡು ಬರಲಿಲ್ಲ. ಆಗ ಬಸವಣ್ಣನಿಗೆ ಎರಡನೇ ಲಗ್ನ ಮಾಡಬೇಕೆಂದು ತಂದೆ-ತಾಯಿಗಳು ನಿರ್ಧರಿಸಿದರು. ಆದರೆ ಬಸವಣ್ಣನ ಇಚ್ಛಾನುಸಾರ ಇನ್ನೊಮ್ಮೆ ಮೂಗಣಗೇರಿಗೆ ಹೋಗಿ ಬರಬೇಕೆಂದು ಬಂದರು. ಲಗ್ನ ಅಷ್ಟಕ್ಕೆ ನಿಂತು ಹೋಯಿತು.

ನೀಲಮ್ಮನಿಗೆ ನಿಯಮದ ಬಗ್ಗೆ ವಿಚಾರಿಸಿದಾಗ ಗುರುಗಳು ಹನ್ನೊಂದು ತಿಂಗಳ ಮಾಡಬಾರದಾಗಿತ್ತು. ಎಂದು ಆಕ್ಷೇಪಿಸಿ ಮತ್ತೆ ಏಳು ತಿಂಗಳ ಮೂಗಣಗೇರಿಯಲ್ಲಿದ್ದು ಬನ್ನಿಮಹಾಂಕಾಳಿಗೆ (ವೃಕ್ಷಕ್ಕೆ) ಪೂಜೆ ಮಾಡಲು ಹೇಳಿದರು. ಮತ್ತು ಲೋಭಾನ ಹಾಕಿಕೊಳ್ಳಲು ಮಂತ್ರಿಸಿಕೊಟ್ಟರು. ಅದೇ ರೀತಿ ಭಯ ಭಕ್ತಿಯಿಂದ ವಿಶ್ವಾಸ ಪೂರ್ಣವಾಗಿ ಮಾಡಿ ಮುಗಿಸಿದರು. ವ್ರತ ಮುಗಿದ ಬಳಿಕವೆ ನೀಲಮ್ಮ ಗರ್ಭ ಧರಿಸಿ ಗಂಡು ಮಗುವಿಗೆ ಜನ್ಮವಿತ್ತಳು.

ಶ್ರೀ ಗುರುಚನ್ನವೃಷಭೇಂದ್ರರ ಕೃಪಾಶೀರ್ವಾದದಿಂದ ಈರ್ವರು ಗಂಡು ಮಕ್ಕಳು ಈರ್ವರು ಹೆಣ್ಣು ಮಕ್ಕಳು ಆದರು. ಶಂಕರಣ್ಣ, ಗುರುಬಸಪ್ಪ ಶಿದ್ದಮ್ಮ ಗುರುಪಾದಮ್ಮ ಎಂಬ ನಾಲ್ವರು ಮಕ್ಕಳನ್ನು ಹೆತ್ತು ಸುಖಿಯಾಗಿದ್ದಳು. ಹಿರಿಯ ಮಗನಾದ ಶಂಕರಣ್ಣನಿಗೆ ಹುಟ್ಟಿದ ಆರು ತಿಂಗಳಿಗೇ ಹುಡುಗನಿಗೆ ಕಾಡಾಟ ಪ್ರಾರಂಭವಾಯಿತು. ಚೀರುವುದು, ಅಳುವುದು ಭಯಂಕರ ಆರ್ತನಾದ ದೊಂದಿಗೆ ಮೂಗಣಗೇರಿಗೆ ಬಂದರು. ಗುರುಗಳ ಅಪ್ಪಣೆಯಂತೆ ಮೂರು ತಿಂಗಳ

ಮಾಗಣಗೇರಿಯಲ್ಲಿಯೇ ಇದ್ದು ಪ್ರತಿನಿತ್ಯ ತೋಟಪ್ಪಯ್ಯನ ಗದ್ದುಗೆಗೆ ಪ್ರದಕ್ಷಿಣೆ ಹಾಕಿಸುತ್ತ ಗುರುಗಳ ಲೋಭಾನ ಹಾಕುತ್ತ ಇದ್ದರು. ಕೂಸು ಎಂದಿನಂತೆ ಆರಾಮದಿಂದಿದ್ದು ನಗು ನಗುತ್ತ ಹರ್ಷವಾಗಿರುತ್ತಿತ್ತು. ಆ ಕೂಡಲೇ ಶಂಕರಣ್ಣ ನೆಂಬ ನಾಮತೆಗೆದು ಚನ್ನಬಸಪ್ಪನೆಂದು ನಾಮಕರಣ ಮಾಡಿದರು. ಮುಂದೆ ಗಟ್ಟಿಗೆ ಪ್ರಯಾಣ ಮಾಡಿದರು.

ಮುಂದೆ ಒಂದು ವರ್ಷದ ತರುವಾಯ ಅಂದರೆ ಹುಡುಗ ಚನ್ನಬಸಪ್ಪ ಒಂದು ವರ್ಷದವನಾದಾಗ ಮಾಗಣಗೇರಿಯಲ್ಲಿಯೇ ಜಾವಳ ಕಾರ್ಯವನ್ನು ಕೈಕೊಂಡರು. ಅದೇ ಸಮಯದಲ್ಲಿ ರಾಯಚೂರಿನ ನಿವಾಸಿ ರಸ್ತಾಪೂರ ಮುನಿಯಪ್ಪ ಎಂಬಾತನಿಗೆ ಮೂರು ಜನ ಹೆಂಡಂದಿರಿದ್ದರೂ ಮಕ್ಕಳಾಗಿರಲಿಲ್ಲ. ಗುರುಗಳು ಇನ್ನೊಂದು ಲಗ್ನ ಮಾಡಿಕೊಳ್ಳಲು ಹೇಳಿದರು. ಗಟ್ಟಿಯವರ ಸಂಬಂಧಿಕರಾದ ಇವರೂ ಗುರುಗಳ ಮೇಲೆ ವಿಶ್ವಾಸವಿಟ್ಟು ಮತ್ತೊಂದು ಮದುವೆ ಯಾಗಿ ಮಕ್ಕಳನ್ನು ಪಡೆದರು.

ಸಿಂದಗಿ ತಾಲೂಕಿನ ಸೇರಿದ ಬನಹಟ್ಟಿಯ ಶಿಷ್ಯರಾದ ದೊಡ್ಡಪ್ಪಗೌಡ ಪಾಟೀಲ ಇವರ ಅಕ್ಕನವರನ್ನು ಚಿಕ್ಕಿನಾಳಗೌಡರ ಮನಿಗೆ ಕೊಟ್ಟಿದ್ದರು. ಅವರಿಗೆ ಮಕ್ಕಳಾಗಲಿಲ್ಲ. ಮುಂದೆ ಗುರುಗಳಲ್ಲಿಗೆ ಬಂದು ಅರಿಕೆ ಮಾಡಿಕೊಂಡರು. ಮುಂದೆ ಅವರ ಕೃಪಾಶೀರ್ವಾದದಿಂದ ಬಸನಗೌಡನೆಂಬುವನು ಜನಿಸಿದನು. ಇವರು ಪ್ರತಿವರ್ಷ ಶ್ರಾವಣಮಾಸಕ್ಕೆ ಒಂದು ಚೀಲ ಗೋದಿ ಕಾಂಡಿಗೆ ಕೊಡುತ್ತ ಬಂದಿದ್ದಾರೆ. ಯಾಳಗಿ ಗೌಡರಿಗೂ ಫಲಸಂತಾನ ಕರುಣಿಸಿದ್ದಾರೆ. ಮತ್ತು ಭೀಮಣ್ಣ ನಾಗಠಾಣ ಸಾ|| ಗೋಳಸಾರ ಇವರಿಗೂ ಪುತ್ರ ಸಂತಾನ ಕೊಟ್ಟಿದ್ದಾರೆ.

## ಸಂತಾನ ಪಡೆದದ್ದು

ಬಿಜಾಪೂರ ಜಿಲ್ಲೆಯ ಬಾಗೇವಾಡಿ ತಾಲೂಕಿನ ಜಬನೂರ ಎಂಬ ಗ್ರಾಮದಲ್ಲಿ ಬಾಲಪ್ಪಗೌಡ ಪಾಟೀಲರು ದೊಡ್ಡ ರೈತರಾಗಿ ಒಳ್ಳೇ ಸುಸಂಸ್ಕೃತ ಮನೆತನದ ಶ್ರೀಮಂತ ವ್ಯಕ್ತಿಗಳಾಗಿ ಇರುತ್ತಿದ್ದರು. ಅವರಿಗೆ ಯಾವ ಕೊರತೆಯೂ ಇರಲಿಲ್ಲ. ಆದರೆ ಒಂದು ಕೊರಗು ಮಾತ್ರ ಅವರನ್ನು ಎಡೆಬಿಡದೇ ಕಾಡು

ತ್ತಿತ್ತು. ಸಂತಾನವಿಲ್ಲದೊಂದು ಅವರಿಗೆ ಬಹಳ ನೋವುಂಟು ಮಾಡಿತ್ತು. ಆಚೀ ಚಿಂತೆಯಲ್ಲಿರುತ್ತಿರುವಾಗ ಒಂದು ದಿನ ಶುಭಗಳಿಗೆಯಲ್ಲಿ ಬೆಳಗಿನ ಜಾವ ಕನಸೊಂದನ್ನು ಕಂಡರು. ಕನಸಿನಲ್ಲಿ ಅಸ್ಕಿಯ ಪಟ್ಟದ್ದೇವರು ಬಂದು "ನಿಮ್ಮ ಗುರುಗಳ ಕೈಯಿಂದ ಅಕ್ಕಿ ಮಂತ್ರಿಸಿಕೊಂಡು ಸ್ವೀಕರಿಸು ಅಂದರೆ ಪುತ್ರಸಂತಾನವಾಗುವದೆಂದು ಅಂದಂತಾಯಿತು." ಕೂಡಲೇ ಎದ್ದು ನೋಡುತ್ತಾರೆ ಅಲ್ಲಿ ಯಾರೂ ಇರುವದಿಲ್ಲ. ಬಾಲಪ್ಪಗೌಡರು ಹಸನ್ಮುಖಿನಾಗಿ ಮಾಗಣಗೇರಿಗೆ ಬಂದು ಕರಜೋಡಿಸಿ ಗುರುಗಳಲ್ಲಿ ಕನಸಿನಲ್ಲಾದ ವಿಚಾರ ತಿಳಿಸಿದನು. ಆಗ ಗುರುಗಳು ಪ್ರಸನ್ನವದನರಾಗಿ ಅಕ್ಕಿಮಂತ್ರಿಸಿ ಕೊಟ್ಟರು. ಅವನ್ನು ಗೌಡರು ಭಕ್ತಿಯಿಂದ ಸೇವಿಸಿದ ಒಂದು ವರ್ಷದೊಳಗಾಗಿ ಸತ್ಪುತ್ರನನ್ನು ಪಡೆದು ಸುಖವಾಗಿದ್ದರು.

ಹೀಗಿರುತ್ತಿರಲಾಗಿ ಗೌಡರೂ ಗುರುಗಳಿಂದ ಉಪದೇಶ ಪಡೆದು ಪ್ರಸಾದಿಕ ಬಯಸಿ ಒಪ್ಪತ್ತೇ ಊಟ ಮಾಡಲು ಪ್ರಾರಂಭಿಸಿದರು. ಇದನ್ನರಿತ ಗುರುಗಳು ಯಾಕೋ ಒಪ್ಪತ್ತೇ ಊಟ ಮಾಡುವಿ ಎಂದಂದಾಗ ನಾನೂ ಪ್ರಸಾದಿಕನಾಗಬೇಕೆಂದು ಮಾಡಿದ್ದೇನೆ. ಅದಕ್ಕಾಗಿ ಈಗಿನಿಂದಲೇ ರೂಢಿಸಿಕೊಳ್ಳುವದಕ್ಕೋಸ್ಕರ ಉಪವಾಸ ಪ್ರಾರಂಭಿಸಿದ್ದೇನೆಂದು ಗುರುಗಳಿಗೆ ತಿಳಿಸಿದರು. ಅಂದರೆ ಈಗ ಹೇಗಿದೆ ರೂಢಿ ಎಂದು ಕೇಳಿದಾಗ ನನಗೂ ಒಪ್ಪತ್ತಿನ ಊಟ ತಡೆಯುತ್ತದೆ. ಉಪದೇಶ ಕೊಡಬಹುದೆಂದು ಅಂದಾಗ ಗುರುಗಳು ಉಪದೇಶ ಕೊಟ್ಟು ಪ್ರಸಾದಿಕನನ್ನಾಗಿ ಮಾಡಿದರು. ಅಂದಿನಿಂದ ಗೌಡರು ಸ್ವ-ಸಂತೋಷದಿಂದ ಪ್ರಸ್ತಕ್ಕೆ ಒಂದು ಚೀಲ ಕಡ್ಲಿ ಕೊಡಲು ಪ್ರಾರಂಭ ಮಾಡಿದರು. ಇದನ್ನು ನೋಡಿ ಗೊಟಗುಣಕಿಯ ಗುರುಸಿದ್ಧಯ್ಯನವರೂ ಉಪದೇಶ ಪಡೆಯಬೇಕೆಂದು ಬಾಲಪ್ಪ ಗೌಡರನ್ನೇ ಮುಂದು ಮಾಡಿಕೊಂಡು ಬಂದು ಕೇಳಿದರು. ಆಗ ಗುರುಗಳು ಉಪದೇಶ ಅಂದ್ರ ಉಳ್ಳಾಗಡ್ಡಿ, ಬದನೆಕಾಯಿ ಅಲ್ಲ ಮಕ್ಕಳ್ಯಾ 60 ರೂಪಾಯಿ ಕೊಡ್ರಿಅಂದ್ರ ಉಪದೇಶ ಕೊಡುತ್ತೇನೆಂದು ಅಂದಾಗ ಈ ವಿಚಾರವನ್ನು ಗೌಡರು ಗುರಸಿದ್ಧಯ್ಯನವರಿಗೆ ಅಂದರು. ಅದರಂತೆ ಗುರುಸಿದ್ಧಯ್ಯನವರು ತಮ್ಮ ಕುದರಿ ಮಾರಿ ಬಂದ 30 ರೂಪಾಯಿ ತಂದು ಉಳಿದ 30 ರೂಪಾಯಿ ಕರ್ನಾಳ ಸಾಹುಕಾರ ಕಡಿಂದ ಕೊಡಿಸುವೆ ಎಂದಾಗ ಉದ್ರಿ ಕೊಡುವುದಿಲ್ಲ ರೊಕ್ಕ ಕೊಟ್ಟಾಗ್ಗ ಉಪದೇಶ ಕೊಡುವೆ ಎಂದರು. ಅದಕ್ಕೆ ಗೌಡರು ಕೊಡ್ರಿ, ಸಾಹುಕಾರ

ಕೊಡದಿದ್ದರೆ ನಾನೇ ಕೊಡುತ್ತೇನೆಂದು ನುಡಿದರು. ಅದಕ್ಕೆ ಗುರುಗಳು "ಮಗನ ಠೊಕ್ಕ ಬಾಳ ಆದಂಗ ಕಾಣತನ ಸೊಕ್ಕ ಬಂದನ ಈ ವರ್ಷ ಬೆಳೆಯಲಿ ಅಳು ಮಗನ" ಎಂದು ಅಂದರು. ಅವರು ಅಂದ ಹಾಗೆಯೇ ಎರಡು ನೂರು ಚೀಲ ದಷ್ಟು ಪ್ರತಿವರ್ಷ ಬೆಳೆಯುವ ಹೊಲ ಆ ವರ್ಷ ಕೇವಲ ಎಂಟುಚೀಲ ಆಯಿತು. ಇದನ್ನು ಕಂಡು ಭಯಭೀತನಾಗಿ ಬಾಲಪ್ಪಗೌಡರು ಹೇಗಾದರೂ ಮಾಡಿ ಗುರು ಗಳಿಂದ ಆಶೀರ್ವಚನ ತೆಗೆದುಕೊಳ್ಳಬೇಕೆಂದು ಕಾಯುತ್ತ ಕುಳಿತರು. ಒಂದು ದಿನ ಅಸ್ಕಿಪಟ್ಟದ್ದೇವರು ಗುರುಗಳಿಗೆ ಹೀಗೆಂದರು. ಗುರುಗಳೇ ಸೋಮಶೇಖರ ಶಾಲೆಗೆ ಹೋಗುವನಂತೆ ಅವನಿಗೆ ಅಭ್ಯಾಸ ಮುಗಿಯುವವರಿಗೆ 25 (ಇಪ್ಪ ತ್ತೈದು) ರೂಪಾಯಿ ಕೊಡುವಂತೆ ಬಾಲಪ್ಪಗೌಡನಿಗೆ ಹೇಳಿರಿ ಅಂದಾಗ ಗುರು ಗಳು ಬಾಲಪ್ಪಗೌಡನನ್ನು ಕರೆದು "ಹ್ಯಾಂಗಪ್ಪಗೌಡ ಕೊಡತೀದಿ ಹ್ಯಾಂಗ" ಅಂದರು. ಒಂದೇ ವರ್ಷ ಅಲ್ಲ ಪ್ರತಿವರ್ಷ 25 ರೂಪಾಯಿ ಕೊಡಬೇಕೆಂದು ಹೇಳಿದರು. "ತಾವು ನಡಿಸಿಕೊಡಬೇಕು ನಾನು ಕೊಡಬೇಕು" ಎಂದು ಅಂದಾಗ ಆಗ ಲೆಸ ದೇವರು ವಳ್ಳೇಯದ ಮಾಡತಾನ ಇನ್ನ ಮುಂದ ಚೊಲೋ ಬೆಳಿ ಬರತಾವೆಂದು ಹೇಳಿದರು. ಅಂದಿನಿಂದ ಇಂದಿನವರಿಗೂ ಹಾಗೇ ನಡದು ಬಂದಿದೆ.

## ಯಾತ್ರಾ

ಶಹಾಪೂರದಿಂದ ಬಸಪ್ಪ ಮಗ ಚನ್ನಬಸಪ್ಪ ಕೂಡಿಕೊಂಡು ಮಾಗಣ ಗೇರಿಗೆ ಬಂದು ಬಸಪ್ಪನು ಮಾಡಿದ ಸಂಕಲ್ಪವನ್ನು ಗುರುಗಳ ಮುಂದೆ ವಿವರಿಸಿ ದನು. ನಾವಂತೂ ಮುಪ್ಪಿನವರಾಗುತ್ತ ಹೊರಟಿದ್ದೇವೆ. ಗುರುಗಳೂ ಮಧ್ಯ ವಯಸ್ಸು ಮೀರಿದ್ದಾರೆ. ನಾವು ಜೀವಿಸಿರುವವರೊಳಗೆ ಗುರುವಿನೊಡನೆ ಒಮ್ಮೆ ಯಾದರೂ ದ್ವಾದಶ ಜ್ಯೋತಿರ್ಲಿಂಗಗಳ ತೀರ್ಥಯಾತ್ರೆ ಕೈಕೊಳ್ಳಬೇಕೆಂಬ ಬಯಕೆಯಾಗಿದೆ. ಅದಕ್ಕಾಗಿ ನಿಮ್ಮ ಅಭಿಪ್ರಾಯವೇನೆಂದು ಗುರುಗಳನ್ನೂ ಹಾಗೂ ಮಗ ಚನ್ನಬಸಪ್ಪನನ್ನು ಕೇಳಿದನು. ಚನ್ನಬಸಪ್ಪ ಗುರುಗಳ ಅಪ್ಪಣೆ ಯನ್ನು ಕೇಳಿದ ಗುರುಗಳೂ ಅದಕ್ಕೆ ಸಮ್ಮತಿಸಿ ಅಪ್ಪಣೆ ಕೊಡಿಸಿದರು. ಅಂದೇ ಇಂಥಃ ದಿನ ಹೋಗುವುದೆಂದು ನಿಶ್ಚಯಿಸಲಾಯಿತು. ಗುರುಗಳು ಒಂದ ಶುಭ

ಮುಹೂರ್ತವನ್ನು ನೋಡಿ ಹೋಗಬೇಕೆಂದು ಅಪ್ಪಣೆ ಕೊಡಿಸಿದ ಬಳಿಕ ತಪಿ ಯುವಸರಾರು, ಅವರ ಅಪ್ಪಣೆಯ ಮೇರೆಗೆ ಎಲ್ಲ ತಯಾರಿಯೊಂದಿಗೆ ಮಾಗಣ ಗೇರಿಗೆ ಬಂದು ಮುಟ್ಟುವೆವೆಂದು ಹೇಳಿ ಹೋದರು. ಇತ್ತ ಕಡೆ ಗುರುಗಳ ಶಿಷ್ಯ ರಲ್ಲಿ ಪ್ರಮುಖರಾದ 15-20 ಜನ ಶಿಷ್ಯರು ಸಹಿತ ದ್ವಾದಶ ಜ್ಯೋತಿರ್ಲಿಂಗಗಳ ದರ್ಶನಾಪೇಕ್ಷಿಗಳಾಗಿ ಹೋಗಲು ಅನುವಾದರು. ಅವರಲ್ಲಿ ಶ್ರೀ ಷ|| ಬ್ರ|| ಅಯ್ಯಪ್ಪಯ್ಯ ಶಿವಾಚಾರ್ಯ ಸ್ವಾಮಿಗಳು ಕೆಂಭಾವಿ, ಶ್ರೀ ಷ|| ಬ್ರ|| ವೃಷಭ ಲಿಂಗ ಶಿವಾಚಾರ್ಯ ಸ್ವಾಮಿಗಳು ಅಸ್ಕಿ, ವೀರಪ್ಪನವರು ಚಿಂಚೊಳಿ, ಗೊಲ್ಲಾ ಳಯ್ಯ ಆಲಾಳ, ಚನ್ನಮಲ್ಲಯ್ಯ ಮಾಣಸುಣಗಿ, ಮಡಿವಾಳಯ್ಯ ಖಾನಾಪೂರ, ಸೋಮಪ್ಪ ಚೀರಲದಿನ್ನಿ ಖಾನಾಪೂರ, ಮಲ್ಲಪ್ಪಗೌಡ, ಲಿಂಗಪ್ಪಗೌಡ ಬೈನೂರ, ಹೊಳೆಪ್ಪ ಸಾಹುಕಾರ ದೇವರಮನಿ ಹಳಿಸಗರ ಗೋಲಗೇರಿ, ಮಹಾಂತಪ್ಪ ಯಳ ಮೇಲಿ, ಕಲ್ಲಪ್ಪಗೌಡ ಯಂಕಂಚಿ ಮು|| ಡಂಬಳ, ಬಾಲಪ್ಪಗೌಡ ಪಾಟೀಲ ಜಬ ನೂರ, ಗೌರಮ್ಮ ಚಿಂಚೊಳಿ ಗಬಸಾವಳಗಿ, ಸಾಹೇಬಗೌಡ ಕಾಚಾಪೂರ, ಗಿರೆಪ್ಪ ಬಿರೇದಾರ ಚಿಕ್ಕ ಮದ್ನೂರು, ಕರಬಸಪ್ಪ ಸಾವಕಾರ ಕರವಿನಾಳ, ಸಿದ್ರಾಮಪ್ಪ ಗೌಡ ಪಾಟೀಲ ಖಾನಾಪೂರ ಇವರೇ ಮೊದಲಾದ ಭಕ್ತ ಶಿಷ್ಯರೊಂದಿಗೆ ಗುರು ಗಳು ಶಿವಭಜನೆ ಮಾಡುತ್ತ ಪ್ರವಾಸ ಕೈಕೊಳ್ಳಲು ಅನುಕೂಲ ಮಾಡಿ ಕೊಂಡರು. ಶಹಾಪೂರದಿಂದ ಪ್ರವಾಸದ ಸರ್ವ ಸಿದ್ಧತೆ ಮಾಡಿಕೊಂಡು ತಂದೆ ತಾಯಿಗಳನ್ನು ಕರೆದುಕೊಂಡು ಗುರುಗಳ ಹಾಗೂ ತಂದೆ ತಾಯಿಗಳ ಪ್ರವಾಸದ ವೆಚ್ಚವನ್ನೂ ತಯಾರಿಸಿಕೊಂಡು ಚನ್ನಬಸಪ್ಪ ಬಂದು ಮಾಗಣಗೇರಿ ಯನ್ನು ಮುಟ್ಟಿದನು. ಅಷ್ಟರಲ್ಲಿಯೇ ಉಳಿದೆಲ್ಲ ಬರಬೇಕಾದ ಭಕ್ತರೂ ಬಂದು ಸೇರಿದ್ದರು. ಈ ಎಲ್ಲ ಪ್ರವಾಸಿಗರಲ್ಲಿ ವಯಸ್ಸಾದವರೇ ಇದ್ದರು. ವಯಸ್ಸಿನ ಚಟುವಟಿಕೆಯುಳ್ಳವರಾರೂ ಇರಲಿಲ್ಲ. ಗುರುಗಳು ಇದನ್ನರಿತು ಚನ್ನಬಸಪ್ಪ ನಿಗೆ ತಿರುಗಿ ಹೋಗಲು ಅಪ್ಪಣೆ ಕೊಡಲಿಲ್ಲ. ಅದರಿಂದಾಗಿ ಚನ್ನಬಸಪ್ಪನು ಪುನಃ ಶಹಾಪೂರಕ್ಕೆ ಹೋಗಿ ತನ್ನ ಧರ್ಮಪತ್ನಿ ಸಿದ್ದಮ್ಮನೊಡನೆ ಬರುವದ್ದಾಗಿ ಹೇಳಿಹೋದನು. ಮರುದಿನ ಸರ್ವ ಸಿದ್ಧತೆಯೊಂದಿಗೆ ಬಂದು ಗುರುಗಳನ್ನು ಕೂಡಿಕೊಂಡನು.

# ದಕ್ಷಿಣ ಭಾರತದ ತೀರ್ಥಯಾತ್ರೆ

ಕನ್ನಡ ನಾಡಿನ ಪೂರ್ವದಲ್ಲಿರುವ ಹೈದರಾಬಾದ ಶ್ರೀಶೈಲ ಪರ್ವತದಲ್ಲಿ ಕೈಲಾಸದ ಘನತೆಯನ್ನು ಮೀರಿ ಮೆರೆವ ದೇವ ಅರಮನೆಯಲ್ಲಿ ರಾರಾಜಿಸುವ ಮಲ್ಲಿಕಾರ್ಜುನ ಲಿಂಗದರ್ಶನಾರ್ಥಿಯಾಗಿ ಗುರುಗಳು ಭಕ್ತ ಬಸವಣ್ಣನೊಂದಿಗೆ ಶ್ರೀಶೈಲ ಮಹಾಕ್ಷೇತ್ರಕ್ಕೆ ಹೊರಟರು.

ಸದ್ಗುರುವೆಂಬ ಮಹಾಮರದ ತಣ್ಣೆಳಲನ್ನಾಶ್ರಯಿಸಿದರೆ ಸಂಸಾರವೆಂಬ ಬಿಸಿಲಿನ ತಾಪವು ತಣ್ಣಗಾಗಿ ಬಾಯಾರಿಕೆ ಹಿಂಗಿ ಸಂತೃಪ್ತಿ ಹೊಂದುವುದು. ಅಹಂಕಾರ ಮಮಕಾರಗಳೂ ಮಾಯವಾಗುವವು. ಮೋಕ್ಷವೆಂಬ ಕನ್ನಿಕೆಯು ಮೋಹಿಸಿ ಆಲಂಗಿಸುವಳು. ಬ್ರಹ್ಮಾನಂದವೆಂಬ ವೈಭವ ಸಿಂಹಾಸನಕ್ಕೆ ದೊರೆಯಾಗಿ ವೈಭವದಿಂದ ಚಿರಕಾಲ ಬಾಳಬಹುದು. ಕಾರಣ ನಾಸ್ತಿಕರಾದ ಮುಮುಕ್ಷುಗಳೇ ! ಸದ್ಗುರುವಿನ ಮೊರೆಹೊಕ್ಕು ಸದಾಶಿವ ಚಿಂತೆಯಲ್ಲಿಯೇ ಕಾಲಕಳೆಯಿರಿ. ಅಂದರೆ ನಿಮಗಾದ ಬಾಧಕವು ಸಾಧಕವಾಗಿ ತೋರುವುದು. ಇದೇ ಮಾರ್ಗವನ್ನನುಸರಿಸಿದ ಭಕ್ತ ಬಸವಣ್ಣ ಗುರುಗಳೊಂದಿಗೆ ತ್ರಿಕಾಲ ಪೂಜಾ ಪಾದೋದಕ ಪ್ರಸಾದಗಳೊಂದಿಗೆ ಹನ್ನೆರಡೂ ಜ್ಯೋತಿರ್ಲಿಂಗಗಳ ದರ್ಶನ ಭಾಗ್ಯಪಡೆಯಬೇಕೆಂಬ ಸದಿಚ್ಛೆಯಿಂದ ಪ್ರಪ್ರಥವಾಗಿ ಶ್ರೀಶೈಲ ಮಹಾಕ್ಷೇತ್ರ ದರ್ಶನಾಧಿಪೇಕ್ಷಿಯಾಗಿ ಗುರುಗಳನ್ನು ಕರೆದುಕೊಂಡು ಪಾದಯಾತ್ರೆಯನ್ನು ಕೈಕೊಂಡನು. ಮಾಗಣಗೇರಿಯಿಂದ ಹೊರಟು ಗೋಲಗೇರಿಗೆ ಬಂದು ಒಂದು ರಾತ್ರಿ ತಂಗಿ ಮರುದಿನ ನಸುಕಿನಲ್ಲಿಯೇ ಗೋಗಿ, ಶಹಾಪೂರ, ಗೋಗಲ್ಲು, ರಾಯಚೂರ, ಕರ್ನೂಲಗಳ ಮಾರ್ಗವಾಗಿ ನಡೆದು ಬಂದು ಆತ್ಮಕೂರಹ ಎಂಬ ಊರನ್ನು ಹೊಕ್ಕರು. ಆಊರು ಬಹಳ ವಿಶಾಲವಾಗಿದ್ದು ನೋಡಿದವರ ಮನಸ್ಸೆಳೆಯುವ ಸೌಂದರ್ಯದಿಂದ ತುಂಬಿಕೊಂಡಿತ್ತು. ಮನೋಹರ ಮಂದಿರಗಳಿಂದಲೂ ಸುಂದರ ಉಧ್ಯಾನಗಳಿಂದಲೂ ನೀರುನೆಳಲು ಕೆರೆ ಕಾಲುವೆಗಳಿಂದಲೂ ಕಂಗೊಳಿಸುತ್ತಿತ್ತು. ಗಿಡಬಳ್ಳಿಗಳಲ್ಲಿ ತೂಗಾಡುವ ಹೂ-ಗೊಂಚಲುಗಳಿಂದಲೂ ನಾನಾತರದ ಹಣ್ಣು ಹಂಪಲುಗಳಿಂದಲೂ ತುಂಬಿಕೊಂಡಿತ್ತು. ಇಂಥಹ ಸುಮಧುರ ಸುವಾಸನೆಯುಳ್ಳ ನಗರೋಧ್ಯಾನದಲ್ಲಿ ಬಂದು ನಮ್ಮ ಗುರುಗಳು

ತ್ತಂಗಿದರು. ಸಾಯಂಕಾಲವಾಗುತ್ತಿರಲು ಪಾದಪೂಜಾ ಪ್ರಸಾದಗಳನ್ನು ಸ್ವೀಕರಿಸಿ ಭಕ್ತರಿಗೆ ಭಕ್ತಿಮಾರ್ಗದ ತಿರುಳನ್ನರುಹಿ ಪದ್ಮಾಸನಾರೂಢರಾಗಿ ಕುಳಿತು ಬಾಹ್ಯೋಪಚಾರಗಳನ್ನೆಲ್ಲ ಮರೆತು ಆತ್ಮನಿವೇದನ ಭಕ್ತಿಯಿಂದ ಕುಳಿತು ಹೃದಯ ಕಮಲದಲ್ಲಿ ಸ್ವಯಂ ಭೂಲಿಂಗವಾದ ಮಲ್ಲಿಕಾರ್ಜುನನನ್ನು ನೆನೆದು ಅಷ್ಟದಳ ಪದ್ಮದಲ್ಲಿ ಲೋಲಾಡುವ ಮನಸವನ್ನು ಮಧ್ಯಾನಾಳಿಕೆಯಲ್ಲಿ ತಂದು ನಿಲ್ಲಿಸಿ ತಲ್ಲೀನರಾದರು. ಏಕೆಂದರೆ ಮನವೆಂಬ ಐರಾವತನು ಜೀವನೆಂಬ ಕುಮರಿಯನ್ನೇರಿ ಸಂಚರಿಸುವಾಗ ಬಾಲ್ಯದಲ್ಲಿ ಭಕ್ತಿಯೂ ಎಳೆ ಹರೆಯದಲ್ಲಿ ಅಹಂಕಾರವೂ, ಯೌವ್ವನದಲ್ಲಿ ರತಿಕ್ರೀಡೆಯೂ, ಗ್ರಹಸ್ಥದಲ್ಲಿ ದ್ರವ್ಯದಾಶೆಯೂ, ಸಂಸಾರಿಯಲ್ಲಿ ಮಹಾದಾಶೆಯೂ, ಮುಪ್ಪಿನಲ್ಲಿ ಸಿರಾಶೆಯೂ ಆತನಿಗೆ ಉಂಟಾಗಿ ಅನೇಕಾನೇಕ ಸಂಕಟಗಳಿಗೆ ಗುರಿಯಾಗುವನು. ಮನಸ್ಸಿನ ಅಧೀನವಾದ ಜೀವನುತ್ತೂನೊಂದು ಬೆಂದು ಬೇಗುದಿಗೊಂಡು ಹಣ್ಣಾಗಿ ಸಾವನ್ನಪ್ಪುವ ನಶ್ವರ ದೇಹದಿಂದ ದೂರಾಗಿ ಶಾಸ್ವತ ಸುಖವನ್ನಪ್ಪುವದೇ ಯೋಗಿಗಳ ಕರ್ತವ್ಯ ಸಮಾಧಿಸ್ಥರಾಗಿ ಶಿವಚಿಂತನೆಯಲ್ಲಿರುವುದೇ ಜ್ಞಾನಿಗಳ ಕೆಲಸವೆಂದ ಬಳಿಕ ಇದರಂತೆ ನಮ್ಮ ಚನ್ನವೃಷಭೇಂದ್ರರು ಗುರುಗಳು ನಿಶ್ಚಿಂತರಾಗಿ ಕುಳಿತುಕೊಂಡು ಬಿಟ್ಟಿದ್ದರು. ಮನಸ್ಸಿನಲ್ಲಿ ಶ್ರೀಶೈಲ ಪತಿ ಮಲ್ಲಿಕಾರ್ಜುನನ ನಿಜರೂಪವನ್ನು ಕಂಡು ಜ್ಞಾನಾವಸ್ಥೆಯಿಂದಳಿದು ಎಚ್ಚತ್ತು ಆತ್ಮ ಕುರುಹಪುರದಿಂದ ಹೊರಟು ಕಡೆಬಾಗಿಲ ಕರಿವೀರಭದ್ರದೇವರ ದರ್ಶನ ತಕ್ಕೊಂಡು ಮುಂದೆ ಹೊರಟು ನಿಬಿಡವಾದ ಗಿಡಮರಗಳುಳ್ಳ ಕಟ್ಟಡಸಾಯ ಮಧ್ಯದಲ್ಲಿ ಗುಡ್ಡಗಳ ಏರಿಳಿತವನ್ನು ಏರಿಳಿಯುತ್ತ ಬಿಸಿಲಿನ ತಾಪ ತಾಳದೇ ಅಲ್ಲಲ್ಲಿಯ ಕಲ್ಲು ಮಂಟಪಗಳೊಳಗೆ ವಿಶ್ರಮಿಸುತ್ತ ಕೈಲಾಸ ಬಾಗಿಲವನ್ನು ತಲುಪಿದನು. ಆಳವಾದ ಭೀಮನ ಕೊಳದಲ್ಲಿ ಮಿಂದು ತಂಪಾದ ನೀರನ್ನು ಕುಡಿದು ಕೈಲಾಸ ಶಿಖರವನ್ನೇರಿ ಕೈಲಾಸದೊಡೆಯನ ದರ್ಶನ ತಕ್ಕೊಂಡು ಮುಂದೆ ಮುಂಜಾನೆಯ ಪೂಜೆಯನ್ನು ಅಡಕೆಯ ಬನದಲ್ಲಿ ನೆಲೆದಿರುವ ಅಡಿಕೇಶ್ವರ ಲಿಂಗದ ಬಳಿಯಲ್ಲಿ ತೀರಿಸಿಕೊಂಡು ಫಲಹಾರವನ್ನು ಮುಗಿಸಿಕೊಂಡು ಅಲ್ಲಿರುವ ಆದಿ ಶಂಕರಾಚಾರ್ಯರ ತಪೋಭೂಮಿಯಾದ ಪಂಚಧಾರಾ ಪಲ್ಲಧಾರಗಳ ದರ್ಶನ ಪಡೆದು ಘೋರನ್ಮು ಹೂರಣ ರುಬ್ಬುವ ಸ್ಥಳವಾದ ಶಿಖರೇಶ್ವರನನ್ನು ಕಂಡು ಶಿಖರದ ಮೇಲೇರಿ ಸುತ್ತು-ಮುತ್ತಲಿನ ರಮ್ಯವಾದ ಗಿರಿಗಾಡುಗಳ ಆಳವಾದ ಕೊಳಗಳ ಎತ್ತರವಾಗಿ ಬೆಳೆದು ನಿಂತ ಕಾಡು ಮರಗಳ ದೇವ

ನಿರ್ಮಿತವಾದ ನಾನಾತರದ ಹೂಗಿಡಗಳ ಬನಗಳ ಸೋಬಗನ್ನು ಹೀರುತ್ತ ಎತ್ತರವಾಗಿ ಗಗನ ಚುಂಬಿತವಾದ ಶ್ರೀಶೈಲಪತಿ ಮಲ್ಲಿಕಾರ್ಜುನನ ದೇವಾಲಯದ ಶಿಖರ ದರ್ಶನವನ್ನು ಪ್ರಪ್ರಥಮವಾಗಿ ಪಡೆದುಕೊಂಡರು. ಇಂದ್ರ ವೈಭವವನ್ನೂ ನಾಚಿಸುವ ಸುರಸೌಂದರ್ಯವನ್ನು ಕಂಡು ಮನದಲ್ಲಿಯೇ ಹರ್ಷಚಿತ್ತರಾಗಿ ಇಳಿಯಲಾರದ ಮನಸ್ಸಿನಿಂದ ಇಳಿಯುತ್ತ ಮಲ್ಲಿಕಾರ್ಜುನನ ಶಿಖರದತ್ತ ನಡೆದರು. ಕೈಲಾಸದೊಡೆಯ ಜಟಾಜೂಟಧರ ಭೂತ ಗಣಾಧೀಶ್ವರನಾದ ಶಿವನು ಮಲ್ಲಿಕಾರ್ಜುನ ಲಿಂಗದಲ್ಲಿ ಮೈದೋರಿದ ಪ್ರಯುಕ್ತ ಸರ್ವ ಮಾನವ ಕುಲಕ್ಕೂ ಪವಿತ್ರ ಪುಣ್ಯಕ್ಷೇತ್ರವೆಂದೆನಿಸಿ ಇಂದಿಗೂ ಬಹು ಪ್ರಖ್ಯಾತಿಯಲ್ಲಿ ಮೆರೆವ ಶ್ರೀಶೈಲ ಕ್ಷೇತ್ರಕ್ಕೆ ಬಂದು ಮುಟ್ಟಬೇಕಾದರೆ ಸಂಜೆಯೇ ಆಯಿತು. ಒಂದೊಡನೆಯೇ ದೂಳದರ್ಶನವೆಂದು ಮಲ್ಲಿಕಾರ್ಜುನನ ದರ್ಶನಭಾಗ್ಯ ಪಡೆದು ಗರ್ಭಗುಡಿಯಲ್ಲಿಯ ಜ್ಯೋತಿರ್ಲಿಂಗಕ್ಕೆ ತದೇಕಚಿತ್ತದಿಂದ ಜ್ಞಾನ ದೃಷ್ಟಿಯನ್ನು ಬಿಟ್ಟು ಶಿವ ಸಾಮರಸ್ಯವನ್ನು ಹೊಂದಿ ಕೆಲವೊಂದು ಹೊತ್ತು ಮುಂಭಾಗದ ಹಂಸತೂಲಿಕಾ ಶಿಲ್ಪದ ಮೇಲೆ ಪವಡಿಸಿ ಪಾದಯಾತ್ರೆಯಿಂದಾದ ದಣಿವನ್ನು ಕ್ಷಣ ಹೊತ್ತಿನಲ್ಲಿಯೇ ಸಾಂತ್ವನಗೊಳಿಸಿಕೊಂಡು ಹೊರಬಂದು ಹೊರಕೋಟೆಯ ಮುಂಭಾಗದಲ್ಲಿ ಕಟ್ಟಿರುವ ಕಲ್ಲು ಮಂಟಪಗಳಲ್ಲಿ ತಂಗಿದರು. ಮರುದಿನ ಮುಂಜಾನೆ ಚೈತ್ರಶುದ್ಧ ಪ್ರತಿಪದೆಯೆಂದು ಹೊಸವರ್ಷದ ಶುಭಯೋಗದಲ್ಲಿ ಬೆಳಗಿನ ಜಾವ ನಾಲ್ಕು ಘಂಟೆಗೆ ಎದ್ದು ಪಾತಾಳಗಂಗೆಯನ್ನು ಹೊಕ್ಕರು. ಮಲ್ಲಿಕಾರ್ಜುನನ ಪಾದ ತೊಳೆಯುವ ಕೃಷ್ಣೆ ಆಳವಾದ ಕೊಳದಲ್ಲಿ ಹರಿದು ಹೋಗುವುದರಿಂದ ಪಾತಾಳ ಗಂಗೆಯೆಂದು ಹೆಸರು ಪಡೆದಿದೆ. ನಾಲ್ಕು ಘಂಟೆಗೆ ಹೊರಟ ಗುರುಗಳು ಐದು ಕಾಲು ಘಂಟೆಯ ಸುಮಾರಿಗೆ ಗಂಗೆಯನ್ನು ಮುಟ್ಟಿದರು. ಐದು ಮೈಲು ಉದ್ದದ ಕೊಳವನ್ನು ಇಳಿಯಲು ಪಾವಟಣಿಗೆಗಳನ್ನು ನಿರ್ಮಿಸಲಾಗಿದೆ. ಸೂರ್ಯೋದಯಕ್ಕೆ ಪೂರ್ವದಲ್ಲಿಯೇ ಸ್ನಾನ ತೀರಿಸಿ ಪೂಜಾವಿಧಿಯನ್ನು ತೀರಿಸಿಕೊಂಡು ವಿಶ್ರಮಿಸುವುದರೊಳಗಾಗಿ ಸ್ವಾಮಿಗಳೊಡಗೂಡಿ ಬಂದ ಭಕ್ತ ಬಸವಣ್ಣ ತನ್ನ ಧರ್ಮಪತ್ನಿಯನ್ನೊಡಗೂಡಿ ಹೂರಣ ಅವೆಮು ಕುದಿಸಿದ ಕಡಬು ಮಾಡಿ ಸ್ವಾಮಿಗಳನ್ನು ಬರಮಾಡಿ ಒಂದು ಗದ್ದುಗೆಯಂತಿರುವ ಕಲ್ಲುಬಂಡೆಯ ಮೇಲೆ ಕಂಬಳಿ ಗದ್ದುಗೆ ಹಾಸಿ ಕುಳ್ಳಿರಿಸಿ ಪಾದ ಪೂಜಾ ಮಾಡಿಕೊಂಡು ಸ್ವಾಮಿಗಳಿಗೆ ಉಣಬಡಿಸಿ ಪಾತಾಳ ಗಂಗೆಯನ್ನು ಪೂಜಿಸಿ ನೈವೇದ್ಯಮಾಡಿ ತಾವೂ ಪ್ರಸಾದ

ಸ್ವೀಕಾರ ಮಾಡಿದರು. ಜಟಿಲವಾದ ಸಂಸಾರದಲ್ಲಿ ಬರುವ ಸಿಹಿಕಹಿಗಳನ್ನೆಲ್ಲ ಒಟ್ಟಾಗಿ ನುಂಗಿ ಸದಾ ನಿಶ್ಚಿಂತನಾಗಿರಬೇಕೆಂಬ ನಿಯಮಕ್ಕನುಸಾರದಂತೆ ಸಿಹಿ-ಕಹಿಗಳ ದ್ಯೋತಕವಾದ ಬೇವು ಬೆಲ್ಲವನ್ನೂ ಸ್ವೀಕರಿಸಿ ಪುನಃ ಮೇಲೆ ಬಂದು ಮಲ್ಲಿಕಾರ್ಜುನ ದರ್ಶನ ಪಡೆಯಲು ಗುಡಿಗೆ ಬಂದರು. ಗುರುಗಳು ಅಲ್ಲಿಗೆ ಬರುವುದರೊಳಗಾಗಿಯೇ ಗರ್ಭಗುಡಿಯ ಹೊರ ಪಠಾಂಗಣದಲ್ಲಿ ಭಯಂಕರವಾಗಿ ಕಿಕ್ಕಿರಿದ ಜನ ಜಂಗುಳಿಯ ಮಧ್ಯದಲ್ಲಿ ಒಬ್ಬ ಭಿಕ್ಷುಕನನ್ನು ಗುಡಿಯ ಪೂಜಾರಿಗಳು ಸಿಕ್ಕಾಪಟ್ಟೆ ಬಡೆಯುತ್ತಿರಲಾಗಿ ಗುರುಗಳು ಪ್ರಯಾಸಪಟ್ಟು ಆ ಗುಂಪಿನ ಮಧ್ಯದಲ್ಲಿಯೇ ತೂರಿಸಿಕೊಂಡು ಹೋಗಿ ಅವನನ್ನು ಬಿಡಿಸಿದರು. ಯಾವ ಕಾರಣದಿಂದಾಗಿ ಅವನನ್ನು ಬಡಿಯುತ್ತಿದ್ದೀರಿ ಎಂದು ಕೇಳಲಾಗಿ ಈ ಭಿಕಾರಿ ಗರ್ಭಗುಡಿಯೊಳಗೆ ಪ್ರವೇಶ ಮಾಡಲು ಪ್ರಯತ್ನಿಸಿದನೆಂದೂ ಬೇಡವೆಂದರೂ ಲೆಕ್ಕಿಸದೇ ಒಳಹೊಕ್ಕನೆಂದೂ ಅದಕ್ಕಾಗಿ ಇವನನ್ನು ಹೊರಗೆ ಎಳೆತಂದು ಬಡಿಯುತ್ತಿದ್ದೇವೆಂದೂ ಹೇಳಿದರು. ನಾಲ್ಕಾರು ಜನ ಕೂಡಿ ಸಿಕ್ಕಾಪಟ್ಟೆ ಬಡಿದಿದ್ದರಿಂದ ಪಾಪ ಮೊದಲೇ ಮೈಹಣ್ಣಾದ ಮುದುಕನ ಮೈ ಹೊಡೆತದಿಂದಾದ ಬಾಸುಂಡೆಗಳಿಂದ ರಕ್ತರಂಜಿತವಾಗಿ ತೋರುತ್ತಿತ್ತು. ತ್ರಾಣವಿಲ್ಲದೇ ನಿತ್ರಾಣನಾಗಿ ಕುಸಿದು ಬಿದ್ದನು. ಪರಮ ಪೂಜ್ಯರಾದ ಗುರುಗಳು ಸಾವಕಾಶವಾಗಿ ಕುಳಿತು ಮೈಮೇಲೆಲ್ಲ ಮೃದುವಾಗಿ ಸವರಿ ಪಾತಾಳಗಂಗೆಯಿಂದ ಜ್ಯೋತಿರ್ಲಿಂಗದ ಮೇಲೆ ಹಾಕಲೆಂದು ತಂದ ನೀರನ್ನೇ ಅವನ ಬಾಯಲ್ಲಿ ಹಾಕಿ ಮೈಮೇಲೆ ಪಾದೋದಕ ಸಿಂಪಡಿಸಲು ನಿಧಾನವಾಗಿ ಚೇತರಿಸಿಕೊಂಡು ಮುದುಕ ಎದ್ದು ಕುಳಿತನು. ಏನಪ್ಪಾ ! ಯಾರು ನೀನು ಎಲ್ಲಿಂದ ಬಂದಿರುವಿ ? ಎಂದು ನಯವಿನಯವಾಗಿ ಗುರುಗಳು ಪ್ರಶ್ನಿಸಿದರು. ಸ್ವಾಮಿ ನಾನು ಕನ್ನಡ ನಾಡಿಗೆ ಒಳಪಟ್ಟ ವಿಜಾಪೂರ ಜಿಲ್ಹೆಯವನು ನಾನೊಬ್ಬ ಕಾಯಕ ನಿರತ ಜಂಗಮ ಯಾವೂರೆಂದು ಹೇಳಲಿ ? ಈಗೀಗ ಮುಪ್ಪಾವಸ್ಥೆ ಬಂದದ್ದರಿಂದ ಈ ರೀತಿ ಬಟ್ಟೆಗಳಿಲ್ಲದೆ ಹೊಟ್ಟೆ ತುಂಬ ಉಣ್ಣಲು ಅನ್ನವಿಲ್ಲದೆ ಕೊರಗುತ್ತಿರುವೆ ನನ್ನ ಕೊನೆಯುಸಿರು ಏಳೆಯುವದರೊಳಗೆ ಒಮ್ಮೆ ಶ್ರೀಶೈಲ ಮಲ್ಲಿಕಾರ್ಜುನನ ದರ್ಶನಭಾಗ್ಯಪಡೆಯಬೇಕೆಂದು ಹಂಬಲಿಸಿ ಅಲ್ಲಿಂದ ಇಲ್ಲಿಯವರೆಗೆ ಓಡೋಡಿ ಬಂದೆ. ಆದರೆ ನನಗೆ ನನ್ನ ಸ್ವಾಮಿಯಿಂದ ಈ ತೆರನಾದ ಸ್ವಾಗತ ದೊರೆಯಿತು. ಎಲ್ಲಾ ಆ ದೇವನ ಲೀಲೆ ! ಸ್ವಾಮಿ ಎಂದು ಉತ್ತರಿಸಿದನು. ಅಲ್ಲದೇ "ನಿನಗಾಗಿ ಓಡೋಡಿ ಬಂದೆ ದೇವಾ

ನನಗಾಗಿ ಕಲ್ಲಾದೆಯಾ" ? ಎಂದು ದುಃಖಿತನಾಗಿ ಕಣ್ಣೀರಿನಿಂದ ಗುರುವರ್ಯರ ಪಾದವನ್ನು ತೋಯಿಸಿದನು. ಇವನ್ನು ಕಂಡ ಗುರುಗಳು ಕನಿಕರಪಟ್ಟು ಸಂತೈಸಿ, ಎಬ್ಬಿಸಿ ಅಲ್ಲಿಯೇ ಕಟ್ಟಿರುವ ಮಂಟಪದಲ್ಲಿ ಕೂಡ್ರಿಸಿ ಅಲ್ಲಿ ನೆರೆದಿರುವ ಜನರನ್ನೂ ಪೂಜಾರಿಗಳನ್ನೂ ಉದ್ದೇಶಿಸಿ ಈರೀತಿ ಉಪದೇಶ ಮಾಡಿದರು.

ಕೇಳಿ ಭಕ್ತಜನೋತ್ತಮರೆ ಸರ್ವ ಜೀವರುಗಳೆಲ್ಲ ಶಿವಮಯಂ ಶಿವಸ್ವರೂಪವಾದದ್ದು "ಸಪ್ತಧಾತು ಸಮಂ ಪಿಡಂಸಮಯೋನಿ ಸಮುದ್ಭವಂ ಆತ್ಮಜೀವ ಸಮಾನೇನ ವರ್ಣಾನಾಂ ಕಿಂ ಪ್ರಯೋಜನಂ ॥ ರಕ್ತ, ಮಾಂಸ, ಎಲುಬುಗಳಿಂದಾಚ್ಛಾದಿತವಾದ ಮಲಯುಕ್ತವಾದ ದೇಹಕ್ಕೆ ಕುಲವೆಲ್ಲಿಯದು ? ಬ್ರಾಹ್ಮಣನೇ ಆಗಲಿ, ಜಂಗಮನೇ ಆಗಲಿ, ಕ್ಷತ್ರಿಯನೇ ಆಗಲಿ, ವೈಶ್ಯನೇ ಆಗಲಿ, ಶೂದ್ರನೇ ಆಗಲಿ, ಯಾವ ಕುಲಗೋತ್ರದವನಾದರೂ ಸಪ್ತಧಾತುಗಳೇ ಪಿಂಡವಾಗಿ ಯೋನಿಮುಖವಾಗಿಯೇ ಹುಟ್ಟುವನಲ್ಲವೆ ? ಇದಲ್ಲದೆ ನಡೆವುದೊಂದೇ ಭೂಮಿ, ಸುಡುವುದೊಂದೇ ಅಗ್ನಿ, ಕುಡಿವುದೊಂದೇ ನೀರು, ಉಸಿರಾಡಿಸುವ ಗಾಳಿ ಕೂಡಾ ಒಂದೇ ಆಗಿರಲು ನಡುವೆ ಕುಲಗೋತ್ರಗಳೆಲ್ಲಿಯವು. ಎಲ್ಲರ ಮನೆಯ ದೀಪವು ಒಂದೇ ಒಬ್ಬ ಸೂರ್ಯ ಬೆಳಕಿನಲ್ಲಿಯೇ ಎಲ್ಲರೂ ಬಾಳಿ ಬದುಕುತ್ತಿದ್ದೇವೆ. ಅಂತಬಳಿಕ ನಾವೆಲ್ಲರೂ ಒಂದೇ ಸರಿಸಮಾನರು. ಮಾನವ ಕುಲವೇ ಒಂದು ಜಾತಿಗಳು ಕೇವಲ ಎರಡು ಮಾತ್ರ ಒಂದು ಹೆಣ್ಣು ಇನ್ನೊಂದು ಗಂಡು, ಹೊಲೆಯಲ್ಲಿ ಹುಟ್ಟಿ ಕುಲವನೆಣಿಸಲಾಗದು. ಎಂದು ಹಿರಿಯರು ಹೇಳಿಲ್ಲವೇ ?

"ಒಣಒಣ ಪೂಜೆಯ ಮಾಡಿ ಗಣಗಣ ಗಂಟೆಯ ಬಾರಿಸಿದರಿಲ್ಲ, ಕುಣಿಕುಣಿದು ಕಿವಿವಿಡಿದಾಡಿದೊಡೆ ಅಣುತೃಣಿ ಪರಿಪೂರ್ಣ ಮೂರ್ತಿ ಕಾಣಲಿಲ್ಲ, ತ್ರಿಣಯನ ವಲುಮೆಗೆ ಚಿನ್ಮಯ ಚಿದನ್ನ ದಾನವೇ ಮೇಲೆಂದು" ಪ್ರಮಥರು ಅಂದಿರುವರು. "ಹರಸಿ ಮಾಡುವುದು ಹರಕಿಯದಂಡೆ, ನೆರಹಿ ಮಾಡುವುದು ಡಾಂಬಿಕ ಭಕ್ತಿ, ಹರಸಬೇಡ ನೆರಹಬೇಡಾ, ಬಂದ ಬರವನರಿದೊಡೆ ಕೂಡಿಕೊಂಡಿಪ್ಪ ನಮ್ಮ ಕೂಡಲ ಸಂಗಮದೇವಾ" ಎಂದು ಬಸವಣ್ಣನು ಹಾಡಿ ಹರಿಸಿರುವನು. ನೀವು ಗುರು ಪೂಜಕರು ಹೆಸರಿಟ್ಟು ಇವರು ಹಿರಿಯರು ಇವರು ಕಿರಿಯರು, ಇವರು ಬ್ರಾಹ್ಮಣರು, ಇವರು ಶೂದ್ರರು, ಇವರು ಗುರುಗಳು,

ಇವರು ಸಾಮಾನ್ಯನರರು ಎಂಬ ಡಾಂಭಿಕತನವನ್ನು ತೋರಿಸಿದರೆ ಈ ಮಲ್ಲಿಕಾರ್ಜುನನು ಕಾಣದೇ ಇರುವನೆ ? ಮರುಳರೇ ! ಭಕ್ತಿಯಿಂದ ಇಲ್ಲಿಯವರೆಗೆ ಮಲ್ಲಯ್ಯಾ ನೀನೇ ಗತಿಯೆಂದು ನಂಬಿ ಅವರ ನಾಮಾವಳಿಯಲ್ಲಿಯೇ ಕಾಲಹರಣ ಮಾಡುತ್ತ ಬಂದು ಆ ಮಹಿಮಾ ಪುರುಷನ ಲಿಂಗವ ಮುಟ್ಟಿ ನಮಸ್ಕರಿಸಲು ಬಂದ ಈ ಬಡ ಜಂಗಮನಿಗೆ ಬಡಿಯುವುದು ಉಚಿತವೆ ? ಈ ಹೊಲಸು ಬಟ್ಟೆಯನ್ನುಟ್ಟ ವಿಶ್ವರೂಪನೇ ಶಿವನೆಂದು ಭಾವಿಸಿ ಈ ಸಾಧು ಶಿರೋಮಣಿಗೆ ದಯಮಾಡಿ ಒಳಗೆ ಪ್ರವೇಶ ದೊರಕಿಸಿ ಕೊಡಿರಿ ನನ್ನ ಮಾತು ಕೇಳಿರಿ ಅಲಂಕಾರಕ್ಕೆ ವಿಷ್ಣು, ಅಭಿಷೇಕಕ್ಕೆ ಶಿವನು, ನಮಸ್ಕಾರಕ್ಕೆ ಸೂರ್ಯನು, ಮೃಷ್ಟಾನ್ನಕ್ಕೆ ಬ್ರಾಹ್ಮಣನು ಪ್ರಿಯನಾಗಿರುವಂತೆ ಈ ತಪೋಸಿದ್ಧಿ ಶಿವೋಪಾಸಕನು ಜ್ಯೋತಿರ್ಲಿಂಗವ ಮುಟ್ಟಿ ನಮಸ್ಕರಿಸಲು ಆತುರನಾಗಿದ್ದಾನೆ. ಇವನು ನಿಮಗೆ ಮಲಿನಾಂಗಿಯಾಗಿ ಕಂಡರೂ ಭೂಮಿ ಮುಚ್ಚಿದ ಕೆಂಡದಂತೆ ಸ್ವಸ್ವರೂಪ ಸಂಧಾನಿಯಾಗಿರುವನು. ಇಂಥ ಶಿವಯೋಗಿಯ ದರ್ಶನಭಾಗ್ಯ ನಿಮ್ಮೆಲ್ಲರ ಕಲ್ಯಾಣವೇ ಆಗಿದೆ. ಎಂದು ಹೇಳಲು ಎಲ್ಲರೂ ಅನುಮತಿ ನೀಡಿದರು. ಕೂಡಲೇ ಸ್ವಾಮಿಗಳು ಆ ಬಡ ಜಂಗಮನ ಕೈಹಿಡಿದು ಕರೆದೊಯ್ದು ಲಿಂಗದರ್ಶನ ಕೊಡಿಸಿದರು.

ತದನಂತರದಲ್ಲಿ ಗುರು ಚನ್ನವೃಷಭೇಂದ್ರರು ತಮ್ಮ ಭಕ್ತ ಜನರೊಂದಿಗೆ ಕೂಡಿ ಇಬ್ಬರು ಅನುಭವೀ ಜಂಗಮರನ್ನು ಕರೆದುಕೊಂಡು ಕದಳೀ ವನಕ್ಕೆ ನಡೆದರು. ಕದಳಿಯ ಸುರಸುಂದರ ಸೌಂದರ್ಯವನ್ನು ಮನಸಾರೆ ವೀಕ್ಷಿಸಿ ಅಲ್ಲಿರುವ ಅಕ್ಕ ಮಹಾದೇವಿಯ ಶಿವಾಗಮಗಳ ಸ್ಥಳಗಳನ್ನು ಕಂಡು ಅಲ್ಲೇ ಜಗದ ಜರಿಗಳ ತಣ್ಣೀರ ಕುಡಿದು ತಣ್ಣೆಳಲ ತೋಪುಗಳಲ್ಲಿ ವಿಶ್ರಮಿಸಿಕೊಂಡು ಬಲ್ಲರನ್ನೊಡಗೂಡಿ ತಿರುಗಿ ಬಂದು ರುದ್ರಾಕ್ಷಿಮಠ ಕದಳಿ ಕೊಳ್ಳಗಳನ್ನೆಲ್ಲ ನೋಡಿಕೊಂಡು ಮರುದಿನ ಕಾಲ್ನಡಿಗೆಯಲ್ಲಿಯೇ ಆತ್ಮಕೂರಕ್ಕೆ ಬಂದು ಅಲ್ಲಿಂದ ನಂದ್ಯಾಳಕ್ಕೆ ಹೋಗಿ ಅಲ್ಲಿಂದ ಜನ್ಮಭೂಮಿಗೆ ಮರಳುವಂತವರಾದರು.

## ೧ನೆಯ ಸಲ ಉತ್ತರ ಭಾರತದ ತೀರ್ಥಯಾತ್ರೆ

ಶ್ರೀಶೈಲ ಯಾತ್ರೆಯನ್ನು ಮುಗಿಸಿಕೊಂಡು ಒಂದು ವರ್ಷದೊಳಗಾಗಿ ಉತ್ತರ ಭಾರತದ ಜ್ಯೋತಿರ್ಲಿಂಗಗಳ ದರ್ಶನಾರ್ಥವಾಗಿ ಸರ್ವಭಕ್ತ ಶಿಷ್ಯರ ಸಮೇತರಾಗಿ ಮಾಗಣಗೇರಿಯಿಂದ ಸೋಲಗೇರಿಗೆ ಹೋಗಿ ಅಲ್ಲಿ ಗೊಲ್ಲಾಳೇಶ್ವರನ

ದರ್ಶನ ಪಡೆದುಕೊಂಡು ಇಂತಿ ಮುಖಾಂತರವಾಗಿ ಪುಣೆಗೆ ಹೋಗುವಂತವ ರಾದರು. ಅದರಂತೆ ಅವರು ಪ್ರಸ್ಥಿತನಾಗಿ ಪುಣಾದಿಂದ ಹೊರಟು ಭೀಮಾ ನದಿಯ ದಡದಲ್ಲಿರುವ ಡಾಕಿನಿ ನಾಮದ ಭೀಮಾಶಂಕರ ಲಿಂಗದ ದರ್ಶನ ಪಡೆ ಯಲು ಬಂದರು. ಪಾಂಡವರು ವನವಾಸಕ್ಕಾಗಿ ಅರಣ್ಯ ಸಂಚಾರದಲ್ಲಿರುವಾಗ ತಾಯಿ ಕುಂತಾದೇವಿಗೆ ತೀವ್ರವಾಗಿ ಬಾಯಾರಿಕೆಯಾಗಲು ಭೀಮನು ತನ್ನ ಗಧೆಯಿಂದ ಭೂಭಾಗವನ್ನು ಕುಟ್ಟಲು ಭೂಮಿಯು ಕುಸಿದು ಗಂಗೆಗೆ ಸ್ಥಾನ ಕೊಟ್ಟಿತು. ಅದುವೇ ಭೀಮಾಶಂಕರ ತೀರ್ಥವೆಂದು ಹೆಸರಾಗಿಯೂ ಭೀಮಾ ನದಿಗೆ ಉಗಮಸ್ಥಾನವಾಗಿಯೂ, ಪರಿವರ್ತನೆ ಹೊಂದಿತು. ಈ ಭೀಮಾ ಶಂಕರ ಲಿಂಗದ ದರ್ಶನ ಪಡೆದುಕೊಂಡು ಮುಂದೆ ನಾಶಿಕದಲ್ಲಿರುವ ಗೋದಾವರಿ ನದಿಯ ಉಗಮಸ್ಥಾನವಾದ ತ್ರಿಯಂಬಕೇಶ್ವರ ಲಿಂಗದ ದರ್ಶನ ಪಡೆಯಲು ಬಂದರು. ಗುಡ್ಡದ ಮೇಲೆ ನಾಲ್ಕು ಮೈಲು ಸುತ್ತಳತೆಯುಳ್ಳ ಹೊಂಡದಲ್ಲಿ ಈ ನದಿಯು ಹುಟ್ಟಿ ಅಲ್ಲಿಯೇ ಅಡಗುವುದು. ಮುಂದೆ 18 ಮೈಲು ದೂರದವರೆಗೆ ಗುಪ್ತಗಾಮಿನಿಯಾಗಿ ಹರಿದು ನಾಶಿಕದಲ್ಲಿ ಬಯಲಾಗಿದೆ. ಅಂದರೆ ನೆಲದ ಲ್ಲಿಯೇ ಹರಿದು ನಾಶಿಕದಲ್ಲಿ ಮೇಲೆ ಪ್ರಕಟಗೊಳ್ಳುವುದು. ಅಲ್ಲಿಯೇ ಪಂಚವಟಿ ತೀರ್ಥವಿದೆ. ಸೀತಾದೇವಿಯನ್ನು ಲಂಕೆಯ ಅರಸ ದೈತ್ಯ ರಾವಣೇಶ್ವರ ಕದ್ದು ಒಯ್ದನೆಂಬುದು ಇದೇ ಸ್ಥಳದಿಂದ ಅಲ್ಲದೆ ಲಕ್ಷ್ಮಣ ಮೂರು (ರೇಖೆಗಳನ್ನು) ಎಳೆದು ತಾಯಿ ಸೀತಾದೇವಿ ! ಇದನ್ನು ದಾಟಿ ಬರಬೇಡ ಬಂದರೆ ಕೇಡುಂಟು ಎಂದು ರೇಖೆಗಳನ್ನು ಎಳೆದು ಅಣ್ಣ ರಾಮನ ಸಹಾಯಕ್ಕೆ ಹೋದನು. ಈಗಲೂ ಈ ರೇಖೆಗಳನ್ನು ಕಾಣಬಹುದು. ಅಲ್ಲಿಯ ದರ್ಶನ ಪಡೆದುಕೊಂಡು ಮುಂದೆ ನರ್ಮದಾನದಿಯ ದಂಡೆಯಲ್ಲಿರುವ ಓಂಕಾರನಾಥನ ಪ್ರಸಿದ್ಧ ದೇವಾಲಯವಿದೆ. ಮತ್ತು ಮಮಲೇಶ್ವರ ಎಂಬ ದೇವಾಲಯವೂ ಮನೋಹರವಾಗಿದೆ. ಮುಂದಾರ ಪರ್ವತವಿರುವುದು. ಇಲ್ಲಿಯೇ ಅಲ್ಲದೆ ಲಿಂಗಪರ್ವತವೂ ಒಂದಿದೆ. ಈ ಪರ್ವ ತದಲ್ಲಿ ಎಲ್ಲಿ ನೋಡಿದರೂ ಲಿಂಗವೇ ಲಿಂಗ, ಲಿಂಗಗಳಿಂದ ತುಂಬಿಹೋಗಿದೆ. ಮಹಾಕೂಟ ಪರ್ವತ ನೋಡಿದರೆ ಇದನ್ನು ನೋಡಿದಂತೆಯೇ ಪಂಚ ಮಹಾ ಪೀಠಗಳಲ್ಲಿ ಒಂದಾದ ಉಜ್ಜೈಯಿನಿ ಪೀಠವು ಮರುಳಾರಾಧ್ಯರಿಂದ ಸ್ಥಾಪನೆ ಯಾದದ್ದು ಇದೇ ಸ್ಥಳದಲ್ಲಿ. ದಾರುಕಾ ಶಾಖೆಯ ವಟದ ಸಿದ್ಧೇಶ್ವರ ಲಿಂಗದಲ್ಲಿ ವಾಸುದೇವ ಮುಖದಿಂದ ಮರುಳಾರಾಧ್ಯರು ಹುಟ್ಟಿದರೆಂದು ಪುರಾಣಾಧಾರವಿದೆ.

ಇವಕ್ಕೆ ವಟಕ್ಷೇತ್ರವೆಂದೂ ಹೆಸರುಂಟು ಸಿದ್ಧೇಶ್ವರ ವಟುವೆಂದು ಒಂದು ಗಿಡವಿದೆ. ಇದು ಮುಂಗಳನ ಜನ್ಮಸ್ಥಾನವೆಂದೂ ಹೇಳುವುದುಂಟು. ಅಲ್ಲದೆ ಸಾನಂದ ಮಹರ್ಷಿಗಳು ಶ್ರೀಕೃಷ್ಣನಿಗೆ ವಿದ್ಯಾಭ್ಯಾಸ ಕಲಿಸಿದ್ದು ಇದೇ ಸ್ಥಳವಲ್ಲಿ ಎಂಬ ಪಂದತಿಯೂ ಪುರಾಣಾಧಾರದಿಂದ ತಿಳಿದು ಬರುತ್ತದೆ. ಕಾಳಿದಾಸನಿಗೆ ಕಾಳಿಕಾ ದೇವಿಯು ಪ್ರತ್ಯಕ್ಷಳಾದದ್ದು ಕೂಡಾ ಇದೇ ಸ್ಥಳವಲ್ಲಿ. ಕಾಳಿದಾಸನು ಭೋಜ ರಾಜನ ಆಸ್ಥಾನ ಕವಿಯಾಗಿದ್ದನು. ಇದು ಅಲ್ಲದೆ, ಭರ್ತೃಹರಿರಾಜನ ಗುಹೆಯೂ, ವಿಕ್ರಮಾದಿತ್ಯನಿಗೆ ಶನಿಯ ಕಾಡಾಟವೂ ಇದೇ ಸ್ಥಳದಲ್ಲಿ ಆಗಿದೆ. ಇಲ್ಲಿಂದ ಹೊರಟು ಕ್ಷಿಪ್ರಾನದಿಯ ದಂಡೆಯಲ್ಲಿರುವ ಮಹಾ ಕಾಲೇಶ್ವರ ಲಿಂಗದ ದರ್ಶನ ಪಡೆದುಕೊಂಡರು. ಇದು ಭೂಲೋಕದ ಲಿಂಗವೆಂದು ಪ್ರಖ್ಯಾತಿ ಪಡೆದಿದೆ. ಮತ್ತು ಮಹಾಕಾಲ ಶಕ್ತಿಪೀಠವು ಕೂಡಾ ಇರುವದು.

ಅಲ್ಲಿಂದ ಮುಂದೆ ಹೊರಟು ಭಾರತದಲ್ಲಿಯೇ ದೊಡ್ಡ ನದಿಯೆನಿಸಿದ ಗಂಗಾನದಿಯ ತಟದಲ್ಲಿರುವ ಕಾಶಿಗೆ ಬಂದರು. ಇದು ನಮ್ಮ ಭಾರತದಲ್ಲಿಯೇ ಅತಿ ಹೆಚ್ಚಿನ ಪುಣ್ಯಕ್ಷೇತ್ರವೆಂದು ಹೆಸರುವಾಸಿಯಾಗಿದೆ. ನೋಡುವವರ ಮನ ಕ್ಕಾನಂದವನ್ನೂ, ಕೇಳುವವರ ಕಿವಿಗಿಂಪನ್ನೂ ಕೊಡುವ ಸ್ಥಾನವಾಗಿದೆ. ನಯನ ಮನೋಹರ ರಮ್ಯ ರಮಣೀಯವಾದ ಈ ಕಾಶೀ ಕ್ಷೇತ್ರವನ್ನು ಹೊಕ್ಕೊಡನೆಯೇ ಹಸಿವೆ ನೀರಡಿಕೆಗಳೆಲ್ಲ ಹಾರಿ ಹೋಗುವವು. ವಿಶಾಲವಾದ ನದಿಯ ತಟದಲ್ಲಿ ಮನ ಮೋಹಕವಾದ ಮುಗಿಲೆತ್ತರ ಬೆಳೆದು ನಿಂತ ಗೋಪುರಗಳು ಘನವಾದ ಪಾವುಟಣಿಗೆಗಳಿಂದ ಕೂಡಿದ ಮಂದಿರಗಳು, ಗಂಗೆ ವಿಶ್ವೇಶ್ವರನ ಪಾದವನ್ನ ತೊಳೆಯುವಳೋ ಏನೋ ಎಂಬಂತೆ ಹಿಂದೆ ಮುಂದೆ ಸರಿಯುತ್ತ ಸಾವಧಾನವಾಗಿ ಹರಿಯುವಳು. ವಾರಣಾಸಿಯ ವಿಶ್ವೇಶ್ವರ (ವಿಶ್ವನಾಥ) ಲಿಂಗದಿಂದ ವಿಶ್ವಾರಾಧ್ಯರು ಜನಿಸಿ ಪಂಚಮಹಾ ಪೀಠಗಳಲ್ಲೊಂದಾದ ಕಾಶೀ ಜ್ಞಾನ ಸಿಂಹಾಸನವನ್ನು ಸ್ಥಾಪಿಸಿದರು. ಅಲ್ಲಿಯ ಪ್ರತಿಯೊಂದು ಲಿಂಗಕ್ಕೂ ರುದ್ರಾಭಿಷೇಕ ಮಾಡಿಸಿದರು. ತದನಂತರದಲ್ಲಿ ಅನ್ನಪೂರ್ಣೇಶ್ವರನಿಗೆ ಕುಂಕುಮಾರ್ಚನೆಯನ್ನು ಮಾಡಿಸಿದರು. ಗುರುಭಕ್ತ ಗಟ್ಟಿಯ ಚನ್ನಬಸಪ್ಪ ತಮ್ಮ ಧರ್ಮಪತ್ನಿ ಸಿದ್ದಮ್ಮನೊಡನೆ ಸಂಕಲ್ಪ ಮಾಡಿಕೊಂಡು ಬಂದದ್ದು ಇದೇ ಪ್ರಥಮ ದರ್ಶನದಲ್ಲಿ. ನಂತರ ಕಾಶಿಯ ಮಹಾರಾಜನ ಅರಮನೆ, ಹರಿಶ್ಚಂದ್ರ ಘಾಟ, ಲೋಹಿತಾಶ್ವನಿಗೆ ಹಾವು ಕಚ್ಚಿದ ಜಂಗಮ ವಾಡಿಯಲ್ಲಿರುವ ಸ್ಥಾನ, ಪಂಚಕ್ರೋಶ ಸ್ಥಳ,

ಸಾರನಾಥ ಇಲ್ಲಿ ಬುದ್ಧನು ತಪಸ್ಸು ಮಾಡಿದ ಸ್ಥಾನ, ಕಾಲಭೈರವನ ದರ್ಶನ ಇವೇ ಮೊದಲಾದ ಸ್ಥಳಗಳನ್ನು ನೋಡಿದರು. ಪಂಚಕೋಶಸ್ಥಳ 52 ಮೈಲು ಸುತ್ತಳತೆ ಇದೆ. ಜಗತ್ಪ್ರಳಯವಾದಾಗ ಅದು ಹಾಗೇ ಇತ್ತೆಂದು ಹೇಳುತ್ತಾರೆ. ಅಲ್ಲಿ ಪಂಚಲಿಂಗಗಳು ಇವೆ. ಅದರಿಂದಲೇ ಕಾಶಿಗೆ ಇಷ್ಟು ಮಹತ್ವ ಬಂದಿದೆ. ಲಾಲ್ ಬಹದ್ದೂರ ಶಾಸ್ತ್ರಿಗಳ ಜನನ ಹೊಳೆಯಾಚೆಗಿರುವ ರಾಮನಗರದಲ್ಲಿಯೇ ಆಗಿದೆ. ಕಾಶಿಯಲ್ಲಿ ಅನೇಕ ಧರ್ಮ ಛತ್ರಗಳು ಇವೆ. ನಮ್ಮ ಕರ್ನಾಟಕ ಆಂಧ್ರ, ತಮಿಳನಾಡು, ಮಹಾರಾಷ್ಟ್ರಗಳಿಂದ ಅನೇಕ ಯಾತ್ರಾರ್ಥಿಗಳು ಜಂಗಮ ವಾಡಿ ಮಠದಲ್ಲಿಯೇ ಇರುತ್ತಾರೆ. ಔರಂಗಜೇಬನ ಕಾಲದಲ್ಲಿ ಔರಂಗಜೇಬನು ಕಾಶಿಯ ವಿಶ್ವನಾಥನ ಗುಡಿಯಲ್ಲಿ ಹೊಕ್ಕು ಲಿಂಗವನ್ನು ಕಿತ್ತಿ ಅಲ್ಲಿಯೇ ಹತ್ತಿರ ವಿರುವ ಭಾವಿಯಲ್ಲಿ ಎಸೆದು ಜಂಗಮವಾಡಿ ಮಠಕ್ಕೆ ಬಂದನಂತೆ. ಔರಂಗಜೇಬನು ಮಹಾದ್ವಾರದ ಒಳಗೆ ಕಾಲು ಇಡುವದೇ ತಡ ಅಕರಾಳ ವಿಕರಾಳವಾಗಿ ಭೂಮಿಗೂ ಆಕಾಶಕ್ಕೂ ಏಕಾಗಿ ನಿಂತಿರುವವನ್ನು ನೋಡಿ ಭಯಭೀತನಾಗಿ ನಾನು ಬಂದಿರುವದು ತಪ್ಪಾಯಿತೆಂದು ಹೇಳಿ ಭೂಮಿ ಧನ ಇತ್ಯಾದಿ ಕೊಟ್ಟು ತಾಂಮ್ರದ ಲಿಪಿ ಬರೆದು ಕೊಟ್ಟು ಹೋಗಿದ್ದಾನೆ. ಅದು ಮಠದಲ್ಲಿ ಈಗಲೂ ಉಂಟು. ಮಠದಲ್ಲಿ ಪ್ರತಿಯೊಬ್ಬ ಯಾತ್ರಿಕರು ತಮ್ಮ ತಾಯಿ, ತಂದೆಯವರು ಮೃತರಾದವರ ಹೆಸರಿನಲ್ಲಿ ಲಿಂಗ ಸ್ಥಾಪನೆ ಮಾಡಿ ಬರುವ ವಾಡಿಕೆ ಇರುವದು. ಏಕೆಂದರೆ ಬ್ರಾಹ್ಮಣರು ಬುದ್ಧಗಯಾದಲ್ಲಿ ಹೋಗಿ ಪಿಂಡ ದರ್ಪಣ ಮಾಡಿ ಬಂದ ನಂತರ ಶ್ರಾದ್ಧ ಕರ್ಮವನ್ನು ಮಾಡುವದಿಲ್ಲ ಅವರಿಗೆ ಮುಕ್ತಿ ಸಿಕ್ಕಿದೆ ಎಂದು ಹೇಳುವರೋ ಅದೇ ರೀತಿ ಕಾಶಿಗೆ ಹೋಗಿ ಲಿಂಗಸ್ಥಾಪನೆ ಮಾಡಿದರೆ ಅವರು ಮುಕ್ತರಾದರೆಂದು ಪ್ರತೀತಿ ಇರುವದು. ದೊಡ್ಡ ದೊಡ್ಡ ಶ್ರೀಮಂತ ಮುಪ್ಪಿನ ವರು ಅಲ್ಲಿಯೇ ಹೋಗಿ ಇದ್ದು ತಮ್ಮ ಪ್ರಾಣ ತ್ಯಾಗ ಮಾಡುವರು. ಅಲ್ಲಿ ಮಡಿದರೆ ಸ್ವರ್ಗ ಸಿಗುವುದೆಂಬ ಕಲ್ಪನೆ ಇದೆ. ಕಾಶಿಯಿಂದ ಮುಂದೆ ಅಯೋಧ್ಯಾನಗರಕ್ಕೆ ಬಂದರು. ರಾಮನಾಳಿದ ಅಯೋಧ್ಯಾನಗರಕ್ಕೆ ಬಂದರು. ರಾಮ ನಾಳಿದ ಅಯೋಧ್ಯಾ ಈಗ ಹಾಳಾಗಿದೆ. ದಾರುಕಾವನದಲ್ಲಿರುವ ನಾಗೇಶ್ವರ ಲಿಂಗಕ್ಕೆ ಭೇಟ್ಟಿಯಿತ್ತರು. ಇದು ಮಹಾರಾಷ್ಟ್ರ ಪ್ರಾಂತದ ಪರಭಣಿ ಜಿಲ್ಹೆಯ ಲ್ಲಿದೆ. ಮುಂದೆ ಅವುಂದಾ ನಾಗನಾಥನ ದರ್ಶನ ತಕ್ಕೊಂಡು ಔರಂಗಾಬಾದ ಜಿಲ್ಹೆಯಲ್ಲಿರುವ ವೇರೂಳದಲ್ಲಿ ಘೃಶ್ಯಣೇಶ್ವರ ಲಿಂಗದ ದರ್ಶನ ಪಡೆದುಕೊಂಡು

ಪರಳಿಗೆ ಬಂದರು. ವೈಜನಾಥ ಲಿಂಗವು ವೈಜನ್ವೆಯ ಹೊಂಡದ ಹತ್ತಿರ ಇರು ವದು. ಅಲ್ಲಿಯ ದರ್ಶನ ಮಾಡಿಕೊಂಡು ಅಜಂತಾ, ಎಲ್ಲೋರ ಗುಹೆಗಳನ್ನು ನೋಡಿಕೊಂಡು ಪಂಢರಪುರ ವಿಠೋಬನನ್ನೂ, ತುಳಜಾಪೂರದ ಅಂಬಾಭವಾನಿ ಯನ್ನೂ ನೋಡಿಕೊಂಡು ಇಂಡಿಯ ಮಾರ್ಗವಾಗಿ ಒಂದನೇ ಸಲದ ಯಾತ್ರಾ ಪೂರ್ತಿ ಮಾಡಿಕೊಂಡು ಬಂದು ಊರನ್ನು ತಲುಪಿದರು.

## ೨ನೆಯ ಸಲ ರಾಮೇಶ್ವರಕ್ಕೆ ಹೋದದ್ದು

ಆರು ತಿಂಗಳ ನಂತರ ರಾಮೇಶ್ವರ ಯಾತ್ರೆಗಾಗಿ ಹೊರಟ ಗುರುಗಳು ಮೊಟ್ಟ ಮೊದಲು ಶ್ರೀಶೈಲ ಮಲ್ಲಿಕಾರ್ಜುನನ ದರ್ಶನ ಪಡೆದುಕೊಂಡು ತಿರು ಪತಿ ವೆಂಕಟರಮಣ ದರ್ಶನಕ್ಕೆ ಬಂದು ಭವ್ಯವಾದ ಗಿರಿ ಪರ್ವತಗಳನ್ನು ನೋಡಿ ಬೆರಗಾದರು. ಗುಡ್ಡದ ತುತ್ತ ತುದಿಯಲ್ಲಿ ಕಟ್ಟಿರುವ ವೆಂಕಟೇಶ್ವರ ದೇವಾಲ ಯವಂತೂ ಬಂಗಾರದ ತಗಡಿನಿಂದ ಆಚ್ಛಾದಿತವಾಗಿದೆ ದೇವಾಲಯಕ್ಕೆ ಹೋಗುವ ಮಾರ್ಗವನ್ನು ಅದ್ಭುತವಾಗಿ ಹಾವು ಮುರುಗಿಯಂತೆ ನಿರ್ಮಿಸಿದ್ದಾರೆ ಅಲ್ಲಿಯ ಬಸ್ಸಿನಲ್ಲಿ ಪ್ರಯಾಣ ಬೆಳಸಿ ದೇವದರ್ಶನ ಮಾಡಿಕೊಂಡು ಕಂಚಿ ಕಾಳ ಹಸ್ತಿಯ ಕಡೆಗೆ ಪ್ರಯಾಣ ಬೆಳೆಸಿದರು. ಕಾಳಹಸ್ತಿಯಲ್ಲಿ ಬೇಡರ ಕಣ್ಣಪ್ಪನು ಬೇಟೆಯಾಡಿದ ಸ್ಥಳವನ್ನು ನೋಡಿಕೊಂಡು ದೇವಾಲಯವನ್ನು ಹೊಕ್ಕರು. ಒಂದು ಮೈಲು ಉದ್ದಗಲವಿರುವ ಭಾರೀ ಪ್ರಮಾಣದ ಶಿಲ್ಪ ಕಲೆಯುಳ್ಳ ವಾಯು ತತ್ವಲಿಂಗದ ದೇವಾಲಯ ಅತ್ಯದ್ಭುತವಾದ ಶಿಲ್ಪದಲ್ಲಿ ಬೆಳಗುತ್ತಿದೆ. ಪುರಾತನ ರಿಂದ ನಿರ್ಮಿಸಲ್ಪಟ್ಟ ಶಿಲ್ಪಿ ಕಲೆ ಪಲ್ಲವ ಅರಸರ ಸ್ಮಾರಕವಾಗಿದೆ. ನಮ್ಮ ಭಾರತ ದಲ್ಲಿಯೇ ಇದನ್ನು ಸರಿಗಟ್ಟುವ ದೇವಾಲಯುಗಳಲ್ಲಿ ಅಂಥ ಅಗಾಧವಾದ ಶಿಲ್ಪಕಲೆ ಜೀವಂತ ಕಳೆ ತುಂಬಿಕೊಂಡು ಮೆರಗುಗೊಟ್ಟವೆ. ಈ ವಾಯು ತತ್ವಲಿಂಗ ದರ್ಶನವನ್ನು ಪಡೆದು ಮದ್ರಾಸ ಪಟ್ಟಣವನ್ನು ನೋಡಲು ಹೊರಟರು. ಪರಕೀ ಯರು ಬಂದು ಮೊದಲು ನೆಲೆಯೂರಿ ನಿಲ್ಲಲು ಆಶ್ರಯ ಕೊಟ್ಟ ಮದ್ರಾಸ ನಗರ ಸುಂದರವೂ ಮನಮೋಹಕವೂ ಆಗಿದೆ. ಆಕಾಶವನ್ನೇ ಮುದ್ದಿಡುವವೋ ಏನೋ ಎಂಬಂತೆ ಬೆಳೆದು ನಿಂತ ಮಹಲುಗಳು ಗುಡಿಗೋಪುರಗಳು ಆಂಗ್ಲರ ಚರ್ಚಗಳೂ ರಮ್ಯವಾಗಿವೆ. ವಿಶಾಲವಾದ ಸಮುದ್ರದ ಅಡಿಯಲ್ಲಿರುವ ಈ

ನಗರ ಅಗಾಧವಾಗಿ ತೋರುವುದು. ಇಲ್ಲಿಂದ ಹೊರಟು ಪಕ್ಷ ತೀರ್ಥವನ್ನು ತಲುಪಿದರು. ಇಲ್ಲಿಯ ಒಂದು ಮಹತ್ವವೆಂದರೆ ಪ್ರತಿನಿತ್ಯ ಒಂದು ಪಕ್ಷಿ ರಾಮೇಶ್ವರದಿಂದಲೂ, ಒಂದು ಪಕ್ಷಿ ಕಾಶಿಯಿಂದಲೂ ಬಂದು ಈ ಪಕ್ಷ ತೀರ್ಥದಲ್ಲಿ ಸ್ನಾನ ಮಾಡುವವು. ಭಕ್ತಾದಿಗಳು ಮಾಡಿ ಇಟ್ಟಂಥ ನೈವೇದ್ಯವನ್ನು ಭಕ್ಷಣ ಮಾಡಿ ಕಾಶಿಯಿಂದ ಬಂದದ್ದು ರಾಮೇಶ್ವರಕ್ಕೂ ರಾಮೇಶ್ವರದಿಂದ ಬಂದದ್ದು ಕಾಶಿಗೂ ಹೋಗುತ್ತವೆ. ಇವು ಸುಮಾರು ಮಧ್ಯಾಹ್ನ ಹನ್ನೆರಡು ಘಂಟೆಯ ಸುಮಾರಿಗೆ ಪ್ರತಿನಿತ್ಯವೂ ಬರುವವು. ಇದೊಂದು ಪಕ್ಷ ತೀರ್ಥದಲ್ಲಿರುವ ಮಹಿಮೆ ಅದಕ್ಕಾಗಿಯೇ ಇದು ಪಕ್ಷಿತೀರ್ಥವೆಂದು ಹೆಸರಾಗಿದೆ. ಇಲ್ಲಿಂದ ಶಿವಕಂಚಿಯತ್ತ ಪಾದ ಬೆಳೆಸಲಾಗಿ ಎದುರಿಗೆ ಕಾಣುವುದೇ ಏಕಾಂಬರೇಶ್ವರ ದೇವಾಲಯ ಇದರಲ್ಲಿ ಪೃಥ್ವಿ ತತ್ವದ ಲಿಂಗವಿದೆ. ಈ ಲಿಂಗಕ್ಕೆ ತೈಲಾಭಿಷೇಕ ಮಾಡಿಸಿ ಮುಂದೆ ಹೊರಟರು. ಇದೇ ಮಂದಿರದಲ್ಲಿಯೇ ಪಾರ್ವತಿ ಶಿವಲಿಂಗವನ್ನು ಪೂಜಿಸಿ ಶಿವನನ್ನು ಮದುವೆಯಾದಳು. ಮುಂದೆ ತಿರುವಣ್ಣಾಮಲೈಗೆ ಬಂದರು. ಇಲ್ಲಿಯೇ ಶಿವರಾತ್ರಿ ಮಹಿಮೆ ಜರುಗಿದ್ದು. ಇದು ಅಗ್ನಿ ತತ್ವದ ಲಿಂಗ ಇಲ್ಲಿಂದ ಎರಡು ಮೈಲುಗಳ ಮೇಲೆ ರಮಣ ಮಹರ್ಷಿಗಳ ಆಶ್ರಮವಿದೆ. ಆಂಗ್ಲರಿಗೆ ಪರಮಾತ್ಮನ ಇರುವಿಕೆಯನ್ನು ಪ್ರತ್ಯಕ್ಷ ನಿದರ್ಶನ ಮಾಡಿಸಿದ ಸ್ಥಳ. ಆದರಿಂದಾಗಿ ಆಂಗ್ಲರ ನೂರಾರು ಕುಟುಂಬಗಳು ಹಿಂದೂ ಸಂಸ್ಕೃತಿಯಂತ ಹಿಂದೂ ಧರ್ಮಕ್ಕನುಸಾರವಾಗಿ ತಮ್ಮ ನಡೆ ನುಡಿ ರೀತಿ ನೀತಿಗಳನ್ನು ಅಳವಡಿಸಿಕೊಂಡು ಇಲ್ಲಿಯೆ ವಾಸವಾಗಿದ್ದಾರೆ. ಮುಂದೆ ಚಿದಂಬರೇಶ್ವರಕ್ಕೆ ಬಂದರು. ಇದು ಆಕಾಶ ತತ್ವದ ಲಿಂಗ ಅಲ್ಲದೆ ವಜ್ರ ಖಚಿತವಾಗಿದೆ. ತ್ರಿಪುಂಡ್ರ ಸಂಪೂರ್ಣ ವಜ್ರ ಖಚಿತವಾಗಿದೆ. ಇಲ್ಲಿ ನಟರಾಜನನ್ನು ಒಲಿಸಿ ಕುಣಿಸಿದ್ದರಿಂದ ನಟರಾಜ ಲಿಂಗವೆಂದೂ ಕರೆಯುವರು. ಈಗಲೂ ಮೈಮರೆಸುವಂತೆ ಸಂಗೀತ ಕೇಳಬಹುದು. ಅಲ್ಲಿಂದ ಹೊರಟು ವಿಷ್ಣು ಕಂಚಿಗೆ ಬಂದರು. ಇಲ್ಲಿ ಕಾಮಾಕ್ಷಿ ಗುಡಿ ವರದರಾಜನ ಗುಡಿಗಳು ಪ್ರಸಿದ್ಧವಾಗಿವೆ. ಒಂದಾನೊಂದು ಕಾಲದಲ್ಲಿ ವರದ ರಾಜನ ತಲೆ ನಡುಗುತ್ತಿತ್ತಂತೆ. ರೇಣುಕಾಚಾರ್ಯ ಜಗದ್ಗುರುಗಳು ಒಮ್ಮೆ ಅಲ್ಲಿಗೆ ಹೋದಾಗ ನಡುಗುವ ತಲೆ ಮುಟ್ಟಿ ನಿಲ್ಲಿಸಿದ್ದಾರಂತೆ. ತದನಂತರದಲ್ಲಿ ತ್ರಿಚನಾಪಲ್ಲಿಗೆ ಬಂದು ಜಂಬುಕೇಶ್ವರ ಲಿಂಗಕ್ಕೆ ದರ್ಶನ ಕೊಟ್ಟರು. ಇದು ಜಲ ತತ್ವ ಲಿಂಗವಾಗಿದ್ದು ಲಿಂಗದ ವೈಶಿಷ್ಟ್ಯವೇನಂದರೆ ನೀರಿನಲ್ಲಿ ಇರುವುದು. ಅಲ್ಲದ

ಸದಾ ಬೆವರು ಬಿಡುತ್ತಿರುವುದೇ ಇದರ ವೈಶಿಷ್ಟ್ಯ. ಈ ಲಿಂಗದ ಅದ್ಭುತವಾದ ಮಹಿಮೆಯನ್ನು ಕಂಡು ಬಳಿಕ ಅಪಾರ ಮಹಿಮೆಯುಳ್ಳ ಮಹಾ ಪುಣ್ಯಕ್ಷೇತ್ರವೆಂದು ಹೆಸರಾದ ರಾಮೇಶ್ವರಕ್ಕೆ ಬಂದರು.

ಮೊದಲು ಕಾಶಿಯ ಯಾತ್ರೆ ಮಾಡಿದಾಗ ಕಾಶಿಯಿಂದ ತಂದ ನೀರಿನಿಂದ ಧನುಷ್ಕೋಟಿಯ ರಾಮೇಶ್ವರ ಲಿಂಗಕ್ಕೆ ತೀರ್ಥಾಭಿಷೇಕ ಮಾಡಿಸಿದರು. ರಾಮೇಶ್ವರ ದೇವಾಲಯ ಸುತ್ತಳತೆ 9 ಮೈಲುಗಳ ವರೆಗೆ ಇದೆ. ಅದರಲ್ಲಿ ಒಟ್ಟು 28 ತೀರ್ಥಗಳುಂಟು. ಪ್ರತಿಯೊಂದರಲ್ಲಿಯೂ ಸ್ನಾನ ಮಾಡಬೇಕು. ಆ ದೇವರ ಬೆಳ್ಳಿ ಬಂಗಾರದ ಸಾಮಾನುಗಳನ್ನು ನೋಡಬೇಕಾದರೆ ಆಗಿನ ಕಾಲದಲ್ಲಿ ಮೂರು ರೂಪಾಯಿ ಫೀ ತೆತ್ತಬೇಕಾಗಿತ್ತು. ಅಷ್ಟೊಂದು ಲೆಕ್ಕವಿಲ್ಲದಷ್ಟು ಸಾಮಾನುಗಳು ಬಿದ್ದುಕೊಂಡಿವೆ. ಪ್ರತಿನಿತ್ಯ ದೇವರ ಪಲ್ಲಕ್ಕಿ ಉತ್ಸವ ಹಾಗೂ ಶಯನೋತ್ಸವಗಳು ನಡೆಯುತ್ತವೆ. ಮಂಗಮ್ಮ ಎಂಬ ಭಕ್ತೆಯೋರ್ವಳು ದೇವರಿಗೆ 6 ಮಣದ ಬಂಗಾರದ ಮಂಚ ಹಾಗೂ 6 ಮಣದ ಬಂಗಾರದ ಪಲ್ಲಕ್ಕಿ ಮಾಡಿಸಿದ್ದಾಳೆ. ಇದೆಲ್ಲವನ್ನು ನೋಡಿಕೊಂಡು ಧನುಷ್ಕೋಟಿಯಲ್ಲಿ ಮಳಲು ಲಿಂಗವನ್ನು ಮಾಡಿ ಪೂಜೋಪಚಾರವನ್ನು ತೀರಿಸಿ ಅದೇ ಲಿಂಗವನ್ನು ಪ್ರಯಾಗದ ತ್ರಿವೇಣಿ ಸಂಗಮದಲ್ಲಿ ಬಿಡಲು ತೆಗೆದುಕೊಂಡು ಮುಂದೆ ಪ್ರಯಾಣ ಬೆಳೆಸಿದರು. ಅಲ್ಲಿಂದ ಮಧುರೆಗೆ ಬಂದು ಮೀನಾಕ್ಷಿಯ ದರ್ಶನ ಭಾಗ್ಯಪಡೆದು ಕುಂಕುಮಾರ್ಚನೆ ಮಾಡಿಸಿ ಮೈಸೂರಿಗೆ ಬಂದರು. ಮೈಸೂರಿನ ಅರಮನೆ ನೋಡುವ ಸಲುವಾಗಿ ಅನುಮತಿ ಬೇಡಲು ಹೊರಟಾಗ ಮಾರ್ಗ ಮಧ್ಯದಲ್ಲಿ ನಂಜುಂಡ ಶೆಟ್ಟಿ ಎಂಬಾತನೊಬ್ಬ ನಡುರಸ್ತೆಗೆ ಬಂದು ಗುರುಗಳಿಗೆ ಸಾಷ್ಟಾಂಗವೆರಗಿ ನಮ್ಮ ಅಂಗಡಿಯಲ್ಲಿ ಪಾದ ಹಾಕಬೇಕೆಂದು ಬೇಡಿಕೊಳ್ಳಲು ಅದರಂತೆ ಗುರುಗಳು ಭಕ್ತರನ್ನೊಡಗೂಡಿ ಅವನ ಅಂಗಡಿಗೆ ಬಂದರು. ಬಳಿಕ ಅವನು ನಮ್ಮ ಮನೆಯಲ್ಲಿಯೇ ಇಂದು ತೀರ್ಥ ಪ್ರಸಾದ ಮುಗಿಸಿಕೊಂಡು ಹೋಗಬೇಕೆಂದು ಭಿನ್ನವಿಸಿಕೊಳ್ಳಲು ಅವನ ಸೂತ್ರ ಗೋತ್ರಾದಿಗಳನ್ನು ವಿಚಾರ ಮಾಡಿ ಗುರುಗಳು ಒಪ್ಪಿಗೆಯಿತ್ತು ಅಂದು ಅವನ ಮನೆಯಲ್ಲಿಯೇ ಪಾದ ಪೂಜಾರ್ಚನೆಗಳನ್ನು ತೀರಿಸಿಕೊಂಡು ಊಟ ಮಾಡಿ ಮೈಸೂರ ರಾಜನ ಅರಮನೆ ನೋಡಲು ಹೊರಟರು. ನಂತರ ಚಾಮುಂಡೇಶ್ವರಿ ಬೆಟ್ಟ ನೋಡಿಕೊಂಡು ತಂಜಾವೂರಿನ ಬೃಹದೇಶ್ವರನ ದೇವಾಲಯ ನೋಡಲು ಹೊರಟರು. ಬೃಹದೇಶ್ವರನಿಗೆ ನಿಚ್ಚಣಿಕೆ ಇಟ್ಟು ಏರಿ ಪೂಜೆ

ನೆರವೇರಿಸಬೇಕು. ಹಾಗೂ ರಾಜನ ಅರಮನೆ ನೋಡಿಕೊಂಡು ಬೆಂಗಳೂರಿಗೆ ಬಂದರು. ಬೃಂದಾವನ ವಿಧಾನಸೌಧ ಮುಂತಾದವುಗಳನ್ನು ನೋಡಿಕೊಂಡು ಬೆಂಗಳೂರಿನಿಂದ ಸೀದಾ ಊರಿಗೆ ಬಂದು ಮುಟ್ಟಿದರು.

## ೩ನೆಯ ಸಲ ಕಾಶಿಯಾತ್ರೆ

ಎರಡನೆಯ ರಾಮೇಶ್ವರ ಯಾತ್ರೆ ಮುಗಿದ ಒಂದು ವರ್ಷದ ತರುವಾಯ ಫಾಲ್ಗುಣ ಬಹುಳ ಪಂಚಮಿಯಿಂದ ಮೂರನೆಯ ಕಾಶಿ ಯಾತ್ರೆಯನ್ನು ಅದೇ ಭಕ್ತ ಜನರೊಂದಿಗೆ ಕೈಕೊಂಡರು. ಮೊದಲು ಮುಂಬೈಗೆ ಹೋಗುವುದೆಂದು ನಿಶ್ಚಯವಾಯಿತು. ಅದರಂತೆ ಮುಂಬೈಗೆ ಬಂದು ಎಲ್ಲ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿಕೊಂಡು ಮುಂಬೈಯಿಂದ ಸೌರಾಷ್ಟ್ರದ ಸೋಮನಾಥ ದೇವಾಲಯಕ್ಕೆ ಬಂದರು. ಮಹಮ್ಮದ ಘಜನಿಯ ಕಾಲಕ್ಕೆ ಶಿಥಿಲವಾಗಿ ನೆಲಗುಂಪಾದ ಸೋಮನಾಥ ದೇವಾಲಯ ಆಗ ಸರ್ದಾರ ವಲ್ಲಭಭಾಯಿ ಪಟೇಲರಿಂದ ಜೀರ್ಣೋದ್ಧಾರ ನಡೆದಿತ್ತು. ನಾವು ಹೋದಾಗ ಸೋಮನಾಥ ಮೂರ್ತಿ ಒಬ್ಬ ಮಹಿಳೆಯ ಮನೆಯಲ್ಲಿತ್ತು ಅಲ್ಲಿಯೇ ಅಭಿಷೇಕ ಮಾಡಿಸಿ ಯಥಾ ಶಕ್ತ್ಯಾನುಸಾರ ಲಿಂಗಸ್ಥಾಪನೆಯ ಸ್ಥಳದಲ್ಲಿ ಧನ ಹಾಕಿದರು. ಅಲ್ಲಿಂದ ಸುಮಾರು 6 ಮೈಲು ದೂರದಲ್ಲಿ ಶ್ರೀಕೃಷ್ಣ ಪರಮಾತ್ಮ ಜೀವತ್ಯಾಗ ಮಾಡಿದ ಸ್ಥಳವಿದೆ. ಬೇಡ ಸಮುದ್ರದಲ್ಲಿ ನಿಂತು ಬಾಣ ಬಿಟ್ಟಿದ್ದಾನೆ. ಅಲ್ಲಿಯೇ ಕೌರವ ಪಾಂಡವರ ಉತ್ತರ ಕ್ರಿಯಾದಿಗಳನ್ನು ಮಾಡಿದ ಸ್ಥಳವುಂಟು. ಅಲ್ಲಿಂದ ಸುಭಾಷ ಪಟ್ಟಣವನ್ನು ನೋಡಿಕೊಂಡು ಬಳಿಕ ದ್ವಾರಕಾ ನಗರಕ್ಕೆ ಬಂದರು. ದ್ವಾರಕೆಯಿಂದ ವಾರಾಣಾಸಿಗೆ ಬಂದರು. ಅಲ್ಲಿ ಕಾಶೀ ವಿಶ್ವೇಶ್ವರ ಲಿಂಗಕ್ಕೆ ರಾಮೇಶ್ವರದಿಂದ ತಂದ ತೀರ್ಥದಿಂದ ಅಭಿಷೇಕಿಸಿ ರುದ್ರ ಪಾರಾಯಣವಾದ ಬಳಿಕ ಅನ್ನಪೂರ್ಣಾ ದೇವಿಗೆ ಕುಂಕುಮಾರ್ಚನೆಯನ್ನು ನೆರವೇರಿಸಿಕೊಂಡು ಅಲ್ಲಿಂದ ;.0 ಮೈಲುಗಳ ಮೇಲಿರುವ ಪ್ರಯಾಗಕ್ಕೆ ಬಂದರು. ಅಲ್ಲಿಯ ತ್ರಿವೇಣಿ ಸಂಗಮದಲ್ಲಿ ರಾಮೇಶ್ವರದ ಧನುಷ್ಕೋಟಿಯಲ್ಲಿ ತಂದ ಮಳಲ ಲಿಂಗವನ್ನು ವಿಸರ್ಜನೆ ಮಾಡಿದರು. ಗಂಗೆ, ಯಮುನೆ, ಸರಸ್ವತಿಯರ ಸಂಗಮದಲ್ಲಿ ಎಲ್ಲರೂ ಸ್ನಾನಮಾಡಿ ಪೂಜೋಪಚಾರದಲ್ಲಿ ತೊಡಗಿದರು. ಆ ಹೊತ್ತಿನಲ್ಲಿ ಒಂದು ಘಟನೆ ಜರಗಿತು

ಅನ್ನಪೂರ್ಣೇಶ್ವರಿ ಹಾಗೂ ಚನ್ನ ವೃಷಭೇಂದ್ರ ಗುರುಗಳವರ ಕೃಪಾಶೀರ್ವಾದ ವರ ಪ್ರಸಾದದಿಂದ ಮೊದಲನೆಯ ಯಾತ್ರಾ ಕುಂಕುಮಾರ್ಚನೆಯ ಸಮಯದಲ್ಲಿ ಮಾಡಿಕೊಂಡ ಸಂಕಲ್ಪದ ಪ್ರಕಾರ ಗಟ್ಟಿಯ ಚನ್ನಬಸಪ್ಪನಿಗೆ ಒಂದು ಹೆಣ್ಣು ಮಗುವಿನ ಜನನವಾಗಿತ್ತು. ಆ ಕೂಸಿಗೆ ಅನ್ನಪೂರ್ಣಮ್ಮಾನೆಂದೇ ಹೆಸರಿಟ್ಟಿದ್ದರು. ಆಗ ಆ ಕೂಸು ೯ತಿಂಗಳ ವಯಸ್ಸಿನದಿದ್ದು ಅತೀವ ಜ್ವರದ ತಾಪದಿಂದ ಬಳಲುತ್ತಿತ್ತು. ಎಲ್ಲರೂ ತ್ರಿವೇಣಿಯ ಮಡಿಲಲ್ಲಿ ಸ್ನಾನ ಮಾಡಿಸಲು ನಿರಾಕರಿದರು. ಆದರೆ ಆ ಮಹಾತಾಯಿ ಸಿದ್ದಮ್ಮನಿಗೆ ವಪ್ಪಿಗೆಯಾಗಲಿಲ್ಲ. ಪತಿ ಚನ್ನಬಸಪ್ಪನವರ ಆಜ್ಞೆಯನ್ನು ಮೀರಿ ನೀರಲ್ಲಿ ಮುಳುಗಿಸಿ ಸ್ನಾನ ಮಾಡಿಸಿದರು. ಅಲ್ಲದೆ ಎರಡು ತಂಬಿಗೆಯಷ್ಟು ನೀರನ್ನು ಕುಡಿಸಿದರು. ನೀರಿನ ದಾಹದಿಂದಾಗಿ ಕೂಸು ಬಾಯಿ ಬಿಡುವುದನ್ನು ಕಾಣಲಾರದೆ ತಾಯಿ ಸಿದ್ದಮ್ಮನವರು ಅಷ್ಟನ್ನು ಮಾಡಿ ಮುಗಿಸುವಷ್ಟರಲ್ಲಿಯೇ ಮತ್ತಷ್ಟು ಜ್ವರ ಏರುತ್ತ ಬಂದು ಕೂಸು ಸ್ಮೃತಿತಪ್ಪಿತು. ಅಷ್ಟರಲ್ಲಿ ಗುರುಗಳ ಲಿಂಗಪೂಜಾ ಮುಗಿಯುತ್ತ ಬಂದದ್ದರಿಂದ ಅವರ ಎದುರು ತಂದು ಹಾಕಿದರು. ಅದನ್ನು ಕೇಳಿದ ಗುರುಗಳು ತಮ್ಮ ಪಾದೋದಕವನ್ನು ಕೂಸಿನ ಬಾಯಲ್ಲಿ ಹಾಕಿ ವತ್ತಟ್ಟಿಗೆ ಮಲಗಿಸಿರಿ. ಆ ಮಹಾತಾಯಿ ಅನ್ನಪೂರ್ಣೇಶ್ವರಿಯ ಇಚ್ಛೆ ಇದ್ದಂತಾಗಲಿ ಎಂದು ಹೇಳಿದರು. ಇದ್ದರೆ ಇರ್ಲಿ ಹೋದರೆ ಹೋಗಲಿ, ಎಂಬ ನಿರ್ಭೀತಿಯಿಂದ ತಂದೆ-ತಾಯಿಗಳು ಗುರುಗಳ ಪಾದಪೂಜೆಯಲ್ಲಿ ತೊಡಗಿದರು. ಮುಂದೆ ಮೂರು ತಾಸುಗಳ ನಂತರ ಕೂಸನ್ನು ಎತ್ತಿಕೊಂಡಾಗ ಅನ್ನಪೂರ್ಣಮ್ಮ ನಗುನಗುತ್ತ ಆಡುತ್ತಿದ್ದಳು. ಇಲ್ಲಿಯ ವರೆಗೆ ಬಂದ ಅವಳನ್ನು ಹಾಗೇ ಕರೆದೊಯ್ಯುವುದು ಹೇಗೆ ? ಎಂದು ತಾಯಿ ಬಲವಂತದಿಂದ ಕೂಸಿನ ಜೀವದ ಆಶೆಯನ್ನು ತೊರೆದು ನೀರಿನಲ್ಲಿ ಮುಳುಗಿಸಿ ಸ್ನಾನ ಮಾಡಿಸಿದರು. ಸರಿ ಹೋಗುವುದೆಂದೇ ತಂದೆ-ತಾಯಿಗಳ ಭಾವನೆಯಾಗಿತ್ತು. ಆದರೆ ಗುರುಗಳ ಕೃಪಾಶೀರ್ವಾದದಿಂದ ಮತ್ತು ಅನ್ನಪೂರ್ಣೇಶ್ವರಿಯ ವರದಾನದಿಂದ ಆ ಕೂಸು ಗುಣಪಟ್ಟು ನಗುನಗುತ್ತ ಆಡತೊಡಗಿತು. ಅಲ್ಲಿಂದ ಪ್ರಯಾಗದಲ್ಲಿರುವ ಆನಂದಭವನ ನೋಡಲು ಹೊರಟರು. ಇದನ್ನು ಪಂಡಿತ ಜವಾಹರಲಾಲ ನೆಹರೂಜಿಯವರೇ ತಮಗಾಗಿ ಕಟ್ಟಿಸಿದ್ದಾರೆ. ಇದನ್ನು ನೋಡಿಕೊಂಡು ಅಂದು ಪ್ರಯಾಗದ ಜಂಗಮವಾಡಿ ಮಠದಲ್ಲಿಯೇ ಇದ್ದು ಮರುದಿನ ಯಮುನಾ ನದಿಯ ತಟದಲ್ಲಿರುವ ಮಥುರೆಗೆ ಬಂದರು. ಇಲ್ಲಿರುವ

ಬಲರಾಮ ಕೃಷ್ಣರ ಗುಡಿಗಳನ್ನು ಕಂಸಾಸುರನ ವಧೆಯ ಸ್ಥಾನವನ್ನೂ ನೋಡಿಕೊಂಡು ನದಿಯ ತೀರಕ್ಕೆ ಬಂದರು. ಸಾಯಂಕಾಲವಾಗುತ್ತಲೇ ಹೋದ ಭಕ್ತರೆಲ್ಲ ದೊಣ್ಣೆಗಳಲ್ಲಿ ಎಣ್ಣೆ ಬತ್ತಿಗಳನ್ನಿಟ್ಟು ದೀಪಹಚ್ಚಿ ಯಮುನಾ ನದಿಯಲ್ಲಿ ಬಿಡುವರು. ರಾತ್ರಿಯಾದಂತೆ ವಿಶಾಲವಾದ ನದಿಯು ತುಂಬೆಲ್ಲ ಚುಕ್ಕೆಗಳೋ ಪಾದಿಯಲ್ಲಿ ತೋರುವವು. ಪುನಃ ಸಂಜೆ ಕಂಸನ ವಧಾಃ ಸ್ಥಳದಲ್ಲಿ ಮಂಗಳಾರತಿ ಮಾಡುವರು. ನಂತರ ಕಂಸನ ಅರಮನೆ ದೇವಕಿ ವಸುದೇವರ ಜೇಲುವಾಸದ ಸ್ಥಳಗಳು, ಬೃಂದಾವನ ಯಶೋಧಾ ಮಹಲ ಗೋಪಿಕಾಸ್ತ್ರೀಯರ ಸೀರೆ ಕಳವಾದ ಸ್ಥಳ, ಘಟಸರ್ಪನ ವಧೆಯ ಸ್ಥಳ, ಕೃಷ್ಣಬಾಯಲ್ಲಿ ಜಗತ್ತನ್ನೇ ತೋರಿದ್ದು, ರಾಕ್ಷಸರ ವಧಾಸ್ಥಳ ಮೊದಲಾದವುಗಳನ್ನು ನೋಡಿಕೊಂಡು ಸರಯು(ಸಜ್ಜು) ನದಿಯ ದಂಡೆಯಲ್ಲಿರುವ ಅಯೋಧ್ಯಾನಗರಕ್ಕೆ ಬಂದರು. ಅಲ್ಲಿರುವ ಕೈಕೇಯ ವಿಲಾಸ ಮಂದಿರ, ಹನುಮಾನಗಡ, ಹನುಮಂತ ದೇವರ ದೇವಾಲಯಗಳನ್ನೆಲ್ಲ ನೋಡಿಕೊಂಡು ತದನಂತರದಲ್ಲಿ ದಿಲ್ಲಿಗೆ ಬಂದರು.

ದಿಲ್ಲಿಯಲ್ಲಿ ಬಂದಾಗ ಗುರುವರ್ಯರು ತಮ್ಮ ಶಿಷ್ಯರೊಂದಿಗೆ ಪ್ರೇಕ್ಷಣೀಯ ಸ್ಥಳಗಳನ್ನು ನೋಡುತ್ತ ಹೊರಟಾಗ ಏತ್ತರ ಪ್ರದೇಶದ ಪೀರಾಪೂರದ ದಂಪತಿಗಳು ತಮ್ಮ ಮಗಳಿಗೆ ತೋರಿಸಲು ದವಾಖಾನೆಗೆ ತಂದಿದ್ದರು. ಬಡವರಾದ ಅವರು ಎಲ್ಲಾ ದವಾಖಾನೆಗೆ ಹೋಗಿ ತೋರಿಸಲಾಗಿ ಈಕೆಯನ್ನು ನಿಮ್ಮ ಊರಿಗೆ ತೆಗೆದುಕೊಂಡು ಹೋಗಿರಿ ರೋಗ ಉಲ್ಬಣವಾಗಿದೆ ಉಳಿಯುವ ಪ್ರಸಂಗವಿಲ್ಲವೆಂದು ಹಕಿಮರು ಹೇಳಿದರಂತೆ. ಆಗ ಅವರು ದುಃಖಿಸುತ್ತ ದಾರಿ ಕ್ರಮಿಸಿದಾಗ ಶಿಷ್ಯರೊಂದಿಗೆ ಹೊರಟ ಯತಿವರರನ್ನು ನೋಡಿ ಓಡಿಹೋಗಿ ಅವರ ಪಾದಕ್ಕೆ ನಮಸ್ಕರಿಸಿ ಶಿವನ ಸ್ವರೂಪಿಗಳಾದ ತಾವು ನನ್ನ ಮಗಳನ್ನು ಹೇಗಾದರು ಮಾಡಿ ಕಾಪಾಡಿರೆಂದು ಅನಂತ ರೀತಿಯಿಂದ ಬೇಡಿಕೊಂಡರು. ಆಗ ಯೋಗಿವರ್ಯರು ಭಸ್ಮ ಮಂತ್ರಿಸಿ ಇದನ್ನು ಪ್ರತಿದಿನ ಸ್ನಾನ ಮಾಡಿಸಿದ ನಂತರವೇ ಹಚ್ಚಬೇಕು ಎಂದು ಹೇಳಿ ಹಸ್ತವನ್ನು ಕೂಸಿನ ಹಣೆಯಮೇಲೆ ಸ್ಪರ್ಶಿದಾಕ್ಷಣವೆ ಸ್ಮೃತಿತಪ್ಪಿದ ಮಗು ಎಚ್ಚತ್ತು ಅಡತೊಡಗಿತು. ಆಗ ದಂಪತಿಗಳು ಸಂತೋಷದಿಂದ ಪೀರಾಪೂರಕ್ಕೆ ಹೊರಟು ಹೋದರಂತೆ.

ದಿಲ್ಲಿಯಲ್ಲಿ ಕೆಂಪುಕೋಟೆ, ವ್ಹಾಯಿಸ್ರಾಯ್ ಹಾಲು, ಪಾರ್ಲಿಮೆಂಟ ಭವನ, ಕುತುಬ್ ಮಿನಾರ್, ಜಂತರ್‌ಮಂತರ್ ಖಗೋಳ ಶಾಸ್ತ್ರದ ತಿಳುವಳಿಕೆ ಯುಳ್ಳದ್ದು. ಇದರಲ್ಲಿ ಸಂಪೂರ್ಣ ಸೌರವ್ಯೂಹ ತೋರಿಸಿದ್ದಾರೆ. ಸೂರ್ಯನ ಸುತ್ತ ತಿರುಗುವ ಗ್ರಹಗಳ ಕೂಟವೇ ಇದರಲ್ಲಿದೆ ಬಹಳ ಆಗಾಧವಾದದ್ದು. ಮತ್ತು ಕಮಲಾ ನೆಹರು ಹೆಸರಿಗಿರುವ ಆಸ್ಪತ್ರೆ ಭವನ ಹಾಗೂ ಅಬುಲ್‌ಕಲಮ್ ಹೆಂಡತಿ ಆಸ್ಪತ್ರೆ ಮೊದಲಾದವುಗಳನ್ನು ನೋಡಿಕೊಂಡು ಆಗ್ರಾಕ್ಕೆ ಬಂದರು. ಅಲ್ಲಿ ತಾಜಮಹಲ್ ಪ್ರಖ್ಯಾತಿ ಪಡೆದದ್ದು ಎಲ್ಲರಿಗೂ ತಿಳಿದ ಮಾತೇ ಆಗಿದೆ. ಅಲ್ಲದೆ ಅಕ್ಬರನ ಗೋರಿ, ರಾಧಾಸ್ವಾಮಿಯ ಟೆಂಪಲ್ ತಾಜಮಹಲನ್ನೇ ಕಡೆಗಣಿ ಸಬೇಕೆಂಬ ಬಯಕೆಯಲ್ಲಿ ಕಟ್ಟಲ್ಪಡುತ್ತಿದೆ. ಇದು ವಟ್ಟು (50) ಐವತ್ತು ವರ್ಷಗಳ ವರೆಗೆ ಕಟ್ಟುವ ಏರ್ಪಾಡಿದೆ. ಒಟ್ಟು 50 ಐವತ್ತು ಲಕ್ಷ ರೂಪಾಯಿ ಗಳ ಖರ್ಚಿನ ಅಂದಾಜಿವೆಯೆಂದು ಹೇಳುತ್ತಿದ್ದರು. ಇದು ಭವ್ಯವಾದ ದೇವಾಲ ಯವಾಗಿದ್ದು ಕನ್ನಡಿಯಂತೆ ಹೊಳಪುಳ್ಳ ಕಲ್ಲುಗಳನ್ನೇ ಈ ಕಟ್ಟಡ ನಿರ್ಮಾಣಕ್ಕೆ ಉಪಯೋಗಿಸುತ್ತಿದ್ದರು. ಅಲ್ಲಿಂದ ಇಂದೂರಿಗೆ ಪ್ರಯಾಣ ಬೆಳೆಸಲಾಯಿತು. ಇಂದೂರಿನ ಮಹಾರಾಣಿಯು ದ್ವಾದಶ ಜ್ಯೋತಿರ್ಲಿಂಗಗಳ ದೇವಾಲಯಗಳೆಲ್ಲ ವನ್ನೂ ಕಟ್ಟಿಸಿದ್ದಾಳೆ. ಅಲ್ಲದೆ ಇಲ್ಲಿ ಸರ್ ಹುಕಮಿಚಂದ ಕಾಚನುಹಲ ಎಂಬು ತನು ಗೌತಮ್ ಬುದ್ಧನ ದೇವಾಲಯವೊಂದನ್ನು ಕಟ್ಟಿಸಿದ್ದಾನೆ. ಇದರ ಕಟ್ಟ ಡದ ಕಲ್ಲುಗಳಷ್ಟೇ ಅಲ್ಲದೇ ಜಂತಿ, ತುಂಟು, ಕಂಬಗಳೇ ಮೊದಲಾಗಿ ಸಂಪೂರ್ಣ ಕಾಜಿನಿಂದ ಮುಚ್ಚಿಹೋಗಿದೆ. ಸಂಪೂರ್ಣ ದೇವಾಲಯವನ್ನೇ ಕನ್ನಡಿಯಲ್ಲಿ ಕಟ್ಟಿದಂತಾಗಿದೆ. ಇವನದು ಬಂಗಾರದ ಕಾರು ಇದೆ. ದೇವರ ಮೆರುವಣಿಗೆ ಗಷ್ಟೇ ಕೊಡುತ್ತಾರೆ. ಅಲ್ಲಿಂದ ಸ್ವಾಮಿಗಳ ಮನಸ್ಸು ಅದೇಕೋ ಊರಿಗೆ ಹೋಗಬೇಕೆಂದು ಬಲವಾದ ಆಶೆಯಾಗಲು ಎಲ್ಲರೂ ಊರಿಗೆ ಹೊರಡಬೇಕೆಂದು ಅಪ್ಪಣೆ ಕೊಡಿಸಿದರು. ಅವರ ಆಜ್ಞೆಯನ್ನು ಯಾರೂ ಮೀರುವಂತಿಲ್ಲ. ಹಾಗೆ ಗಾಡಿಗೆ ಕುಳಿತು ಹೊರಟುಬಂದರು. ಊರಿಗೆ ಹೋಗಿಯೇ ಪೂಜೆ ಊಟವೆಂದ ಸ್ವಾಮಿಗಳು ಅಂದದ್ದರಿಂದ ಎಲ್ಲರೂ ಎರಡು ದಿನ ಉಪವಾಸ ಬಂದು ಇಂಡಿ ಸ್ಟೇಶನ್ ತಲುಪಿದರು. ನಂತರ ಇಂಡಿಯ ಭಾವಿಯೊಂದರಲ್ಲಿ ಸ್ನಾನ ಪೂಜಾ ಪ್ರಸಾದ ತೀರಿಸಿದರು. ಎರಡು ದಿನಗಳನವರೆಗೂ ಚನ್ನಬಸಪ್ಪನವರ ಪತ್ನಿ ಸಿದ್ದಮ್ಮನವರೂ ಸಹಿತ ಉಪವಾಸವಿದ್ದರು. ಮುಂದೆ ಕೇದಾರಕ್ಕೆ ಹೋಗಬೇಕೆ

ದರೆ ಭಕ್ತ ಬಸವಣ್ಣ ನೀಲಮ್ಮನವ: ಶಕ್ತಿ ಕುಂದಿ ಶಿಥಿಲವಾದದ್ದರಿಂದ ಅಲ್ಲಿಗೇ ಪ್ರವಾಸ ನಿಂತುಹೋಯಿತು. ಇಷ್ಟೆಲ್ಲ ಪ್ರವಾಸ ಕೈಕೊಂಡರೂ ಪೂಜಾನಿಷ್ಠ ಗುರುಭಕ್ತ ಬಸವಣ್ಣ ನೀಲಾಂಬಿಕೆ, ಬಾಲಪ್ಪಗೌಡ್ರ, ಕೆಂಭಾವಿ ಸ್ವಾಮಿಗಳು, ಅಸಕ್ಕಿ ಪಟ್ಟದ್ದೇವರು ಇನ್ನಿತರ ಭಕ್ತಶ್ರೇಷ್ಠರು ಪ್ರತಿನಿತ್ಯ ಗುರುಪಾದ ಪೂಜೆ ಪ್ರಸಾದ ತೆಗೆದುಕೊಂಡೇ ಪ್ರಯಾಣ ಬೆಳೆಸುತ್ತಿದ್ದರು. ಪೂಜೆಯ ವೇಳೆ ಎಲ್ಲಿಗೆ ಆಗುವುದೋ ಅಲ್ಲಿಯೇ ನಿಂತು ಪೂಜೋಪಚಾರ ಮುಗಿಸಿಕೊಂಡೇ ಮುಂದೆ ಪ್ರಯಾಣ ಬೆಳೆಸುತ್ತಿದ್ದರು. ಈ ಪ್ರವಾಸದಲ್ಲಿ ಸಣ್ಣವರೆಂದರೆ ಚನ್ನಬಸಪ್ಪ ಹಾಗೂ ಸಿದ್ದಮ್ಮ ಇವರೀರ್ವರೇ ಇದ್ದರು. ಉಳಿದೆಲ್ಲ 35 ಜನರೂ ಮುಪ್ಪಿನ ವರೇ 60 ರಿಂದ 70 ವರ್ಷ ವಯಸುಳ್ಳವರಾಗಿದ್ದರು. ಇವರೆಲ್ಲ ಒಂದುವರೆ (1½) ತಿಂಗಳಂತೆ ಒಟ್ಟು ಮೂರು ಪ್ರವಾಸ ಕೂಡಿ ನಾಲ್ಕುವರೆ ತಿಂಗಳು ಯಾವ ನೋವೂ ಇಲ್ಲದೇ ಸರಾಗವಾಗಿ ಪ್ರವಾಸ ಮುಗಿಸಿಕೊಂಡು ಬಂದರು. ಪ್ರವಾಸ ದಲ್ಲಿ ಯಾವ ಬಗೆಯ ತೊಂದರೆಯೂ ಆಗಲಿಲ್ಲ. ಗುರು ಚನ್ನವೃಷಭೇಂದ್ರರ ಆಶೀರ್ವಾದ ಪ್ರಸಾದದ ಬಲದಿಂದ ಯಾರಿಗೂ ಯಾವ ಪ್ರಕಾರದ ನೋವೂ ಇಲ್ಲದೆ ಕರೆದುಕೊಂಡು ಬಂದರು. ಇಲ್ಲಿಗೆ ಪ್ರವಾಸದ ಅವಧಿ ಮುಗಿಯಿತು.

## ನೇತ್ರಜ್ಯೋತಿ ಕರುಣಿಸಿದ್ದು

ಮಾಗಣಗೇರಿಯ ಒಬ್ಬ ಭಕ್ತನ ಮನೆಯಲ್ಲಿ ಗುರುಗಳಿಗೆ ಒಮ್ಮೆ ಬಿನ್ನ ಕೊಟ್ಟಿದ್ದರು. ಅದರಂತೆ ಮುಂಜಾನೆ ಗುರುಗಳು ಪಲ್ಲಕ್ಕಿ ಉತ್ಸವದೊಡನೆ ಕೆಲ ಭಕ್ತ ಜನರನ್ನೊಳಗೊಂಡು ಮಾಡಗಿಯ ಬಸಯ್ಯ ಮುತ್ತ್ಯಾ ಸಹಿತವಾಗಿ ಹೋಗಿದ್ದರು. ಆಗ ಬಸಯ್ಯನವರಿಗೆ ವಯಸ್ಸಾದದ್ದರಿಂದ ಕಣ್ಣು ಕಾಣಿಸುತ್ತಿರ ಲಿಲ್ಲ. ಎರಡು ಮೂರು ವರ್ಷಗಳಿಂದಲೂ ಕಣ್ಣು ಕಳೆದುಕೊಂಡು ಸುಮ್ಮನೇ ಕುಳಿತಿದ್ದರು. ಗುರುಗಳು ಅವರ ಮನೆಗೆ ಕಾಲಿಡುತ್ತಲೇ ಸ್ನಾನದ ಸಿದ್ಧತೆ ನಡೆ ಯಿತು. ಏಕೆಂದರೆ ಗುರುಗಳ ಸ್ನಾನ ಪೂಜಾ ಮುಗಿಯಬೇಕಾದರೆ ನಾಲ್ಕು ಘಂಟೆಗಳಾದರೂ ಬೇಕು. ಅಷ್ಟೊತ್ತಿಗೆ ಅಡಿಗೆಯಲ್ಲ ಸಿದ್ಧವಾಗಿ ಊಟ ಪ್ರಾರಂಭವಾಗುವುದೆಂದು ಆ ಮನೆಯ ಮಾಲಿಕನ ಅಭಿಪ್ರಾಯ. ಅದರಂತೆ ಗುರುಗಳು ಸ್ನಾನಕ್ಕೆದ್ದರು. ಅವರ ಶಿಷ್ಯವೃಂದವೂ ಜಳಕ ಮಾಡಿ ಪೂಜೆಯು

ವ್ಯವಸ್ಥೆಗೆ ತೊಡಗಿದರು. ಗುರುಗಳು ಜಳಕ ಮುಗಿಸಿಕೊಂಡು ಬಂದು ಪೂಜೆಯ ಗದ್ದುಗೆ ಏರಿದರು. ಬಸಯ್ಯನವರೂ ಜಳಕ ಮುಗಿಸಿಕೊಂಡು ಶಿಷ್ಯರ ಸಹಾಯ ದಿಂದ ಬಂದು ಗುರುಗಳ ಪಕ್ಕದಲ್ಲಿ ಕುಳಿತರು. ಗುರುಗಳು ತಮ್ಮ ಶಿವಪೂಜೆ ಮುಗಿಸಿಕೊಂಡು ನಂತರ ಪಾದ ಪೂಜೆಗೆ ಅಣಿಯಾದರು. ಗುರುಪಾದ ಪೂಜೆ ಬಹಳ ಅದ್ದೂರಿಯಲ್ಲಿ ನಡೆಯಿತು. ಆ ವೈಭವವನ್ನು ಕಿವಿಯಾರೆ ಕೇಳಿದ ಬಸಯ್ಯನವರು ಇನ್ನೊಮ್ಮೆ ಪೂಜೆಯ ವೈಶಿಷ್ಟ್ಯವನ್ನು ನೋಡಬೇಕೆಂಬ ಇಚ್ಛೆ ಯುಳ್ಳವರಾದರು. ಈ ಮೊದಲು ಪ್ರತಿ ಪೂಜೆಗಳು ತಮ್ಮ ಸ್ವಹಸ್ತದಿಂದಲೇ ನೆರವೇರಿಸಿದ್ದರೂ ಇನ್ನೊಮ್ಮೆ ನೋಡಬೇಕೆಂಬ ಸದಿಚ್ಛೆಯಾಗಲು ಹತ್ತಿರದಲ್ಲಿಯೇ ಕುಳಿತ ಗುರುಗಳಿಗೆ ಅರಿಕೆ ಮಾಡಿಕೊಂಡರು. "ಗುರುಗಳೇ ತಮ್ಮ ಪೂಜೆಯ ವೈಭವವನ್ನು ಈ ಕಣ್ಣಾರೆ ಇನ್ನೊಮ್ಮೆ ಕಾಣಬೇಕೆಂಬ ಹಂಬಲವಾಗಿತ್ತು. ಏನು ಮಾಡುವುದು ? " ಎಂದೆನ್ನಲಾಗಿ ಆಗಲಿ ನೋಡಿರಿ ಧಾರಾಳವಾಗಿ ನೋಡಿರೆಂದು ಮಸ್ತಕದ ಮೇಲೆ ಅಮೃತಹಸ್ತವನ್ನಿರಿಸಿದರು. ಆ ಕೂಡಲೇ ಮಿನುಗುವ ನೇತ್ರ ಜ್ಯೋತಿಗಳು ಬಂದು ಸಂಪೂರ್ಣ ಪೂಜಾ ವೈಖರಿಯನ್ನು ವೀಕ್ಷಿಸಿದರು. ಬಾಲ್ಯ ದಲ್ಲಿ ಕಂಡಂತೆಯೇ ಎಲ್ಲವನ್ನೂ ಕಂಡು ಹರ್ಷಚಿತ್ತರಾಗಿ ಆನಂದಾತಿರೇಖದಲ್ಲಿ ಮೈಮರೆದಿದ್ದರು. ಪೂಜೆ ಸಂಪೂರ್ಣಗೊಳ್ಳಲು ಬಸಯ್ಯನವರು ಇಂತೆಂದರು— ಗುರುದೇವಾ ! ಮುಪ್ಪಾವಸ್ಥೆಯಲ್ಲಿರುವ ನಾನು ಪರಮಾತ್ಮನ ಇಚ್ಛಾನುಸಾರ ಇರುವುದೇ ಒಳ್ಳೆಯದು. ಅವನು ಆಡಿಸಿದಂತೆ ಆಡುವುದೇ ಮಾನವ ಧರ್ಮ ಅದಕ್ಕಾಗಿ ಮೊದಲಿನಂತೆ ಕುರುಡನಾಗಿಯೇ ಇರುವೆ. ಹಾಗೆ ದಯಪಾಲಿಸಿರಿ ಎನ್ನಲಾಗಿ ನಿನ್ನಿಚ್ಛೆಯೆಂದು ಗುರುಗಳು ಅಂದದ್ದೇ ತಡ ಮತ್ತೆ ನೇತ್ರಜ್ಯೋತಿ ಇಂಗಿ ಹೋದವು.

## ಘೋಸಿ ಪ್ರಕರಣ

ಮಾಗಣಗೇರಿಯಲ್ಲಿ ಮಹಾದೇವಪ್ಪ ಘೋಸಿ ಎಂಬಾತನೊಬ್ಬ ಇದ್ದಾನೆ ಇನ್ನೂ ಅವನನ್ನು ಕಾಣಬಹುದು. ಇವನು ನಾಸ್ತಿಕನಿದ್ದು ಜಂಗಮರನ್ನು ಕಂಡರೆ ಆಗುತ್ತಿರಲಿಲ್ಲ. ಯಾವಾಗಲೂ ಜಂಗಮರ ನಿಂದೆಯಲ್ಲಿಯೇ ಇರುವ ಇವನು ಒಮ್ಮೆ ಗುರುಮಠದಿಂದ ಕಂತಿ ಭಿಕ್ಷೆಗಾಗಿ ಊರಲ್ಲಿ ಒಬ್ಬ ಜಂಗಮ ಪಟ್ಟು ಬರುತ್ತಿದ್ದನು. ಗುರುಗಳು ಮಠದಲ್ಲಿ ದಾಸೋಹ ನಡೆಸುತ್ತಿದ್ದರಿಂದ

ಊರಲ್ಲಿ ಎತ್ತಿದ ರೊಟ್ಟಿಯನ್ನು ದಾಸೋಗಕ್ಕೆ ಉಪಯೋಗ ಮಾಡುತ್ತಿದ್ದರು. ಆಗ ಮಹಾದೇವಪ್ಪ ಜಂಗಮ ವಟುವನ್ನು ಹೀಯಾಳಿಸಿ ಮಾತನಾಡುತ್ತಿದ್ದ. "ಸುರು ಮಾಡಿದರೆಸ! ಐಗೋಳು ತಿನ್ನು ಕಾಯಕಾ"? ಎಂದು ಜರಿದು ಮಾತನಾಡುತ್ತಿದ್ದನು. ಇದನ್ನು ದಿನಂಪ್ರತಿ ಕೇಳಿ ಬೇಸತ್ತು ವಟು ಒಸ್ಮೆರಡು ಸಲ ಗುರುಗಳಲ್ಲಿ ಅರಿಕೆ ಮಾಡಿಕೊಂಡೂ ಆಗಿತ್ತು. ಆದರೂ ಗುರುಗಳು ಆ ಮಾತನ್ನು ಲಕ್ಷದಲ್ಲಿ ತರಲಿಲ್ಲ. ಮಹಾದೇವಪ್ಪ ಘೋಸಿಯ ದುರ್ದೈವವೋ ಏನೋ ಒಮ್ಮೆ ಗುರುಗಳು ಪೂಜಾ ತೀರಿಸಿ ಊಟಕ್ಕೆ ಕುಳಿತುಕೊಳ್ಳುವ ಸಮಯಕ್ಕೇ ಕಂಥಿಭಿಕ್ಷೆಯ ಹುಡುಗ ಬಂದು ದುಃಖಿಸುತ್ತ ಗುರುಗಳೇ! ಮಹಾದೇವಪ್ಪ ಬೈದು ಮಾತನಾಡಿದ್ದಲ್ಲದೇ ಕಜ್ಜಾ ಕೊಡದೇ ಹೊರ ದಬ್ಬಿದನೆಂದು ಹೇಳದನು. ಕೂಡಲೇ ಕೋಪೋದ್ರಿಕ್ತರಾದ ಗುರುಗಳು ನೊಂದುಕೊಂಡರು.

ಅಂದಿನಿಂದ ಕಣ್ಣು ಹೊಡೆತಿಟ್ಟು ಮಂದವಾಗುತ್ತ ನಡೆದು ಮುಂದೆ ಹಡಿನೈದು ಇಪ್ಪತ್ತು ದಿನಗಳಲ್ಲಿ ಸಂಪೂರ್ಣ ಕಣ್ಣು ಕಾಣದಂತೆಯೇ ಆದವು. ಮುಂದೆ ತಿಂಗಳೆರಡು ತಿಂಗಳಲ್ಲಿಯೇ ಎರಡೂ ಕಣ್ಣುಗಳು ಕವಡೆಯ ಗಾತ್ರದಷ್ಟು ಗೊಡಚಿ ಬೆಳೆದುಕೊಂಡವು. ಅಲ್ಲಿಂದ ಮತ್ತಷ್ಟು ಕಣ್ಣುಗಳು ಹೊಡೆತಿಟ್ಟು ಭಯಂಕರ ತ್ರಾಸು ನಡೆಯಿತು. ಕೂಡಲೇ 16 ಜಮೀನು ಮಾರಿ ಬಂದ ಹಣವನ್ನೆಲ್ಲ ಕಟ್ಟಿಕೊಂಡು ಬಿಜಾಪೂರದಲ್ಲಿರುವ E. R. ಶೆಟ್ಟಿ ಎಂಬ ಹಂದಿಗನೂರ ಡಾಕ್ಟರರ ಕಡೆಗೆ ತೋರಿಸಲು ಹೋದರು. ಅಲ್ಲಿಯೇ ಎರಡು ಮೂರು ತಿಂಗಳು ಇದ್ದರೂ ಕಣ್ಣು ಕಡಿಮೆಯಾಗದೇ ಮತ್ತಿಷ್ಟು ಬೆಳೆದು ಲಿಂಬಿ ಹಣ್ಣಿನ ಗಾತ್ರದಷ್ಟು ಗೊಡಚೆ ಬೆಳೆದವು. ಕೈಯಲ್ಲಿಯ ದುಡ್ಡು ಎಲ್ಲಾ ತೀರಿ ಹೋದವು. ಬಳಿಕ ಹೆಂಡತಿಯ ತವರೂರಾದ ಹಂದಿಗನೂರಲ್ಲಿಯೇ ಹೋಗಿ ಇದ ಹತ್ತಿದನು. ಒಮ್ಮೆ ಆ ಊರಿನ ಜ್ಯೋತಿಷಿ ಧೂಳಯ್ಯ ಎಂಬಾತನೊಬ್ಬ ಜಂಗನು ಮೂರ್ತಿ ಮಹಾದೇವನಿಗೆ ಭವಿಷ್ಯ ಹೇಳಿದ ಏನಂದರೆ? ನಿಮ್ಮೂರಿನ ಚರಪಟ್ಟಾಧ್ಯಕ್ಷ ಚನ್ನವೃಷಭೇಂದ್ರರ ಕೃಪಾಶೀರ್ವಾದದಿಂದಲೇ ನಿನ್ನ ನೇತ್ರಜ್ಯೋತಿ ಪುನಃ ಬರುವವೆಂದು ಹೇಳಿದ. ಅದನ್ನು ಕೇಳಿ ಮಹಾದೇವಪ್ಪನು ಹೆಂಡತಿಯನ್ನು ಅಲ್ಲಿಯೇ ಬಿಟ್ಟು ತನ್ನೂರಾದ ಮಾಗಣಗೇರಿಗೆ ಬಂದು ಗುರುಗಳ ಹತ್ತಿರ ಸಾಷ್ಟಾಂಗವೆರಗಿ ತಪ್ಪಾಯಿತೆಂದು ಬೇಡಿಕೊಂಡು ಅಲ್ಲಿಯೇ ಅವರ ಪಾದದಡಿಯಲ್ಲಿ ಬಿದ್ದು ಅವರ ಸೇವೆ ಮಾಡುತ್ತ ಮೂರು ತಿಂಗಳು ಮಠದಲ್ಲಿಯೇ ಇದ್ದು

ಗುರುಗಳ ಪಾದೋದಕ ಕುಡಿಯುವುದು ಕಣ್ಣಲ್ಲಿ ಹಾಕಿ ಕೊಳ್ಳುವುದು ಈ ತೆರನಾಗಿ ಪ್ರತಿನಿತ್ಯ ನೇಮದಿಂದಿರುತ್ತಿರಲಾಗಿ ಮೂರು ತಿಂಗಳಲ್ಲಿ ಗೊಡಚೆಗಳೆಲ್ಲ ಕಳಚಿ ಮುಸುಕು ಮಸಕಾಗಿ ಕಾಣತೊಡಗಿದವು. ಇನ್ನೇನು ಕಣ್ಣು ಕಾಣತೊಡಗಿವೆ. ನಿನ್ನ ಹೆಂಡತಿಯನ್ನು ಕರೆದುಕೊಂಡು ಬಾ ಎಂದು ಗುರುಗಳು ಅಪ್ಪಣೆ ಕೊಡಿಸಿದರು. ಅವರ ಇಚ್ಛಾನುಸಾರ ಮಹಾದೇವಪ್ಪನ ಜೊತೆಯಲ್ಲಿ ಒಂದು ಆಳನ್ನು ನೇಮಿಸಿಕೊಂಡು ಮರುದಿನ ಹೋಗಲುದ್ಯುಕ್ತನಾದನು ಆದರೆ ಮುಂಜಾನೆ ಜೊತೆಯಲ್ಲಿ ತಯಾರಾದ ಆಳಿಗೆ ಭಯಂಕರ ಜ್ವರ ಬಂದು ಮಲಗಿ ಬಿಟ್ಟನು. ಆಗ ಹೇಗೆ ಹೋಗುವುದೆಂದು ಮಹಾದೇವಪ್ಪ ತಡಸಡಿಸುತ್ತಿದ್ದ. ಮುಂಜಾನೆ ಗುರುಗಳು ಅಸ್ಕಿ ಪಟ್ಟದ್ದೇವರ ಜೊತೆಯಲ್ಲಿ ಕುಳಿತಾಗ ಘೋಸಿಯನ್ನು ವಿಚಾರಿಸಿದರು. ಆದರೆ ಆಳು ಸುಳ್ಳಾದ ವಿಷಯ ಹೇಳಿ ಹೋಗುವುದನ್ನೇ ಬಿಡಬೇಕೆಂದು ಮಾಡಿರುವೆ ಗುರುಗಳೇಎನ್ನಲಾಗಿ ಛೀ ! ಹೇಸಿ ಹೋಗು ಕಣ್ಣು ಸಂಪೂರ್ಣ ಕಾಣುವವು ಹೋಗೆನಲಾಗಿ ಹಾಗೇ ಮಹಾದೇವ ಹೊರಟೇ ಬಿಟ್ಟ ಮುಂದೆ ಒಂದೆರಡು ಹರದಾರಿ ತಡವರಿಸುತ್ತ ಹೋಗುವುದರೊಳಗಾಗಿ ಸಂಪೂರ್ಣ ನೇತ್ರಜ್ಯೋತಿ ಬಂದವು. ಈ ಘಟನೆ ಯಾರೆ ಕೇಳಬಹುದು. 1957 ರಲ್ಲಿ ಈ ಘಟನೆ ಜರುಗಿದೆ.

## ತ್ರಿಮೂರ್ತಿ

ಹೈದರಾಬಾದ ಕರ್ನಾಟಕ ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲೂಕಾ ಪೈಕಿ ಕಡಕೋಳದಲ್ಲಿ ಒಬ್ಬ ಕಬ್ಬಲಿಗರ ಜಾತೆಗೆ ಒಳಪಟ್ಟ ಮಹಾಪುರುಷನಿಗೆ ಸಂಬಂಧಿಸಿದ ಶ್ರೇಷ್ಠ ಯೋಗವಿದು. ಇದೇ ಗ್ರಾಮದಲ್ಲಿ ನಿರ್ಗುಣ, ನಿರಂಜನ, ನಿರವಯ, ನಿರಾಭಾರಿ, ಶಿವೋತ್ತಮ ಯೋಗೀಶ್ವರನೊಬ್ಬ ಆಗಿ ಹೋಗಿದ್ದಾನೆ. ಗುಡ್ಡದ ಮಹಾಂತ ಶಿವಯೋಗಿಗಳ ಶಿಷ್ಯನಾದ ಇವನು ಕಡಕೋಳದ ಮಡಿವಾಳ ಯೋಗಿಯೆಂದು ಇಂದಿಗೂ ಹೆಸರುವಾಸಿಯಾಗಿದ್ದಾನೆ. ಅರಳಗುಂಡಗಿಯ ಶ್ರೀ ಶರಣಬಸವೇಶ್ವರ ಗುರುಗಳಾದ ಶಿವಾಚಾರ್ಯನಿಂದ ದೀಕ್ಷೆಯನ್ನು ಹೊಂದಿ ಮಹಾನ್ ತತ್ವಜ್ಞಾನಿಯಾಗಿ ಬೆಳಗಿ ಬಾಳಿದ ವೇದಾಂತಿಗಳು. ಇವರು ಬೋಧಿಸಿದ ಎಲ್ಲ ಪದಗಳ ಸಾರಾಂಶವೆಂದರೆ ಲಿಂಗಾಂಗ ಸಾಮರಸ್ಯ, ಜೀವಪರಮಾತ್ಮರ ಐಕ್ಯತೆ, ದೇಹನಶ್ವರತ್ವ, ಮಾಯಾನಿರಸನ, ಸತ್ಯ ಅಹಿಂಸಾ, ಸದಾಚಾರ,

ಸದ್ವಿಚಾರಗಳ ತವರು ಮನೆಗಳಾಗಿವೆ. ಸಾಧಕನು ತಿಳಿದು ಆಚರಿಸಬೇಕಾದ ಆಚರಣೆಗಳಿಂದೊಡಗೂಡಿವೆ. ಇದು ಜ್ಞಾನಯೋಗಿಗಳಿಗೆ ಜ್ಞಾನಮಾರ್ಗವನ್ನು ತೋರಿಸುವ ದಾರಿದೀಪವಂತಿದೆ. ಮಡಿವಾಳ ಯೋಗಿಗಳು ಪರಮಾತ್ಮನ ಪರ ಮಾವತಾರ, ಕನ್ನಡ ಕವಿತಿಲಕ ವೀರಶೈವ ಷಟಸ್ಥಳ ತತ್ವವೇತ್ತರರೂ ಹೌದು. ಈ ಎಲ್ಲ ಅಂಶಗಳನ್ನು ತಿಳಿಯಬೇಕಾದರೆ ಅವರಿಂದಲೇ ವಿರಚಿತವಾದ "ಕೈವಲ್ಯ ಕಾವ್ಯಾಮೃತ"ವನ್ನು ಓದಿ ತಿಳಿದುಕೊಳ್ಳಬೇಕು. ಇಂಥ ಮಹಾ ಪುರುಷನಿದ್ದ ಪುಣ್ಯ ಭೂಮಿಯಲ್ಲಿಯೇ ಇವನೊಬ್ಬ ಯೋಗಿಶ್ವರ ಹುಟ್ಟಿ ಬೆಳೆದಿದ್ದಾನೆ. ಮೊದ ಮೊದಲು ಹುಂಬನಾದ ಕಡಕೋಳ ಗೌಡಪ್ಪಗೌಡ ಭೋದ (ಉಪದೇಶ) ಪಡೆಯಬೇಕೆಂದು ಗುರುಚನ್ನ ವೃಷಭೇಂದ್ರರಲ್ಲಿ ಬಂದು ಸಾಷ್ಟಾಂಗವೆರಗಿ ಗುರು ಗಳೇ ನನಗೆ ! ಕರುಣೆದೋರಿ ಉಪದೇಶ ಕೊಡಬೇಕೆಂದು ಬೇಡಿಕೊಂಡನು. ಅದಕ್ಕವರು "ಬೋಧ ಅಂದ್ರ ಕಿರಾಣಿ ಅಂಗಡಿಯ ಕೊಬ್ಬರಿ, ಬೆಲ್ಲ, ಎಣ್ಣಿ ಉಪ್ಪ ಅಲ್ಲ ಮಗನ" ಹೋಗು ಏನಾದರೂ ವ್ರತ ಮಾಡಿಕೊಂಡು ಬಾಹೋಗು ಎಂದು ಬೆದರಿಸಿ ಕಳಿಸಿದರು.

ಗೌಡಪ್ಪಗೌಡನು ತನ್ನೂರಿಗೆ ಹೋದವನೆ ಎರಡು ತೊಲಿ ಬಂಗಾರ 500 ರೂಪಾಯಿಗಳನ್ನು ತೆಗೆದುಕೊಂಡು ಸೀದಾ ಬೇಗರ ಊರಾದ ಕೊಂಡಗೂಳಿಗೆ ಹೋದನು. ಹೋಗಿ ಬೇಗರ ಪೈಕಿ ನಾಲ್ವರನ್ನು ಕರೆದು ಬಂಗಾರ ರೂಪಾಯಿ ಗಳನ್ನು ಒಪ್ಪಿಸಿ ನಾನು ಹೇಳಿದಂತೆ ಕೇಳಿರಿ. ಅಲ್ಲದೆ ಒಂದು ತಿಂಗಳವರೆಗೆ ನನ್ನನ್ನು ಕಾಯಬೇಕು ಎಂದು ಹೇಳಿದನು. ಇಂದಿಗೆ ಒಂದು ತಿಂಗಳ ಸರಿಯಾಗಿ ನನ್ನನ್ನು ಹೊರತಂದು ಮಾಗಣಗೇರಿಗೆ ಒಯ್ಯಬೇಕೆಂದು ಹೇಳಿದನು. ಅದರಂತೆ ಅವರು ಒಪ್ಪಿಕೊಳ್ಳಲು ಊರ ಮುಂದಿರುವ ಡೋಣಿಯ ದಂಡೆಗೆ ಹೋಗಿ ಒಬ್ಬ ನಿಗೆ ಕೂಡ್ರಲು ಬರುವಷ್ಟು ಚಚೌಕಾದ ಕುಣಿ (ತಗ್ಗು)ಯನ್ನು ತೋಡಿದರು. ಒಳಗೆ ಗೌಡಪ್ಪಗೌಡನನ್ನು ಕೂಡ್ರಿಸಿ ಯಾರಿಗೂ ತಿಳಿಯದಂತೆ ಮೇಲೆ ಅರೆ (ಬಂಡಿ) ಎಳೆದು ಮಣ್ಣುಮುಚ್ಚಿ ಮನೆಗೆ ಬಂದುಬಿಟ್ಟರು. ಒಳಗೆ ಗೌಡಪ್ಪಗೌಡ ತಪೋನಿಷ್ಟನಾಗಿ ಕುಳಿತನು. ಮುಚ್ಚಿ ಬಂದವರಿಗೆ ಅದರ ಯಾವ ಪರಿವೆಯೂ ಇರಲಿಲ್ಲ. ಮುಂದೆ ಒಂದು ತಿಂಗಳಿಗೆ ಸರಿಯಾಗಿ ಮಳೆ ಬಂದು ಡೋಣಿ ಬಂದು ಅವನು ಕುಳಿತ ಜಾಗೆಯನ್ನು ಕೊರೆದುಕೊಂಡು ಹೋಗಿತ್ತು. ಅಂದು ಆ ಊರಿನ ಹೆಂಗಳೆಯರು, ಕಟ್ಟಿಗೆ ಕುಳ್ಳಿಗೆಂದು ಅಡವಿಯಲ್ಲಿ ತಿರುಗುತ್ತಿರುವಾಗ

ಅವೇ ಸ್ಥಳಕ್ಕೆ ಬಂದು ಕಟ್ಟೆಗೆ ಆರಿಸುತ್ತಿದ್ದರು. ನೆಲದಲ್ಲಿ ಬೇರು ತೆರೆದಿದೆ ಎಂದು ಒಬ್ಬಾಕೆ ಗೌಡಪ್ಪಗೌಡನ ಮೊಳಕಾಲನ್ನೇ ಹಿಡಿದು ಜಗ್ಗಿದಳು. ಅದು ಬೇರು ಹೋಗಿ ಮನುಷ್ಯನ ಮೊಳಕಾಲವೆಂದು ಅರ್ಥವಾದಾಗ ಹೌಹಾರಿ ಚೀರುತ ಮನೆಗೆ ಓಡಿಬಂದಳು. ಹೆಣದ ಕಾಲು ತೆರೆದಿದೆ ಎಂದು ಹೇಳಹತ್ತಿದಳು. ಅದನ್ನು ಕೇಳಿದ ಜನರೆಲ್ಲ ಗೌಡಪ್ಪಗೌಡನನ್ನು ಮುಚ್ಚಿಬಂದ ಜನರಿಗೆ ಅವರ ಅರಿವಾಯಿತು. ಕೂಡಲೇ ಓಡೋಡುತ್ತ ಹೋಗಿ ಮುಚ್ಚಿದ ಅರಿ (ಬಂಡಿ) ತೆಗೆದು ಗೌಡಪ್ಪಗೌಡನನ್ನು ಹೊರಗೆತಂದು ಅದೇ ಡೋಣಿಯಲ್ಲಿ ಮೈತೊಳೆದು ನೋಡಲಾಗಿ ಇನ್ನೂ ಉಸಿರಾಡುತ್ತಿರುವದನ್ನು ಕಂಡು ಬೆರಗಾದರು. ಮನೆಗೆ ತಂದವರೇ ಅವನ ಮಾತಿನ ಪ್ರಕಾರ ಗಾಡಿಕಟ್ಟಿ ಗಾಡಿಯಲ್ಲಿ ಹಾಕಿಕೊಂಡು ಮಾಗಣಗೇರಿಗೆ ತಂದರು. ಮಾಗಣಗೇರಿಯ ಊರತುಂಬೆಲ್ಲ ಕಡಕೋಳದ ಗೌಡಪ್ಪಗೌಡನ ಸುದ್ದಿಯೇ ಸುದ್ದಿ. ಮಠಕ್ಕೆ ಬಂದವರೇ ಗುರುಗಳ ಮುಂದೆ ಮಲಗಿಸಿ ನಡೆದ ವೃತ್ತಾಂತವನ್ನೆಲ್ಲ ತಿಳಿಸಿದರು. ಕೂಡಲೇ ಗುರುಗಳು ಎದ್ದು ಮುಖದ ಮೇಲೆ ತಮ್ಮ ಪಾದೋದಕ ಸಿಂಪಡಿಸಿ ಬಾಯಲ್ಲಿಯೂ ಹಾಕಿದರು. ಪಾದೋದಕವನ್ನು ಗುಟಕಿಸುತ್ತ ಶಿವಶಿವಾ ಎಂದು ಗೌಡಪ್ಪಗೌಡ ಎದ್ದು ಕುಳಿತನು. ಅವನನ್ನು ಕರೆದುಕೊಂಡು ಸೀದಾ ಗುರುಮಠದಲ್ಲಿ ಬಂದು ತಮ್ಮ ಎದುರಿನಲ್ಲಿ ಕೂಡಿಸಿಕೊಂಡು ಪಾದಪೂಜೆಗೆ ತೊಡಗಿದರು. ಗೌಡಪ್ಪಗೌಡ ಗುರುಪಾದ ಕೈಯಲ್ಲಿ ಹಿಡಿದು ಪಾದ ಪೂಜೆಗೆ ಕುಳಿತರು. ಈ ಸುದ್ದಿ ಒಂದು ಅರಘಳಿಗೆಯಲ್ಲಿ ಊರ ತುಂಬ ಹರಡಿತು. ಊರಿನ ಪ್ರಮುಖರೆಲ್ಲ ಬೆರಗಾದರು. ಶ್ರೇಷ್ಠ ಜಾತಿಯವರಾದ ನಾವೇ ಗುರುಮಠದಲ್ಲಿ ಹೋಗದೇ ಇದ್ದಾಗ ಆ ಕೆಟ್ಟ ಕಬ್ಬಲಿಗ್ಯಾನೇ ಶ್ರೇಷ್ಠನಾದನೇ ಸ್ವಾಮಿಗೆ ? ಎಂದು ಜರಿಯುತ್ತ ಬಯ್ಯುತ್ತ ಮಠಕ್ಕೆ ಬಂದರು. ಆ ಊರಿನ ಮತ್ತೊಬ್ಬ ಹಿರಿಯ ಜಂಗಮನಾದ ಗುರುಲಿಂಗಯ್ಯನನ್ನು ಕರೆದುಕೊಂಡು ಬಂದು ಸ್ವಾಮಿಗಳನ್ನು ನಿಂದಿಸುತ್ತ ನಡೆಯಿರಿ ವಳಗೆ ಗುರುಮಠ ಅಪವಿತ್ರವಾಯಿತು. ವಳಗೆ ಏನು ಮಾಡುತ್ತಿದ್ದಾರೋ ನೋಡೋಣ ಎಂದು ಮಠದೊಳಗೇ ಬಂದರು. ಇದನ್ನರಿತ ತಂಗಿ ಗುರುಲಿಂಗಮ್ಮ ಹೋಗಿ ಗುರುಗಳಿಗೆ ಈ ವಿಷಯವನ್ನು ಅರುಹಿದಳು. ಕೋಪಗೊಂಡ ಗುರುಗಳು ಬರ್ರಿ ಯಾರು ಬರುವಿರೋ ಬಂದು ನೋಡಿರಿ ನನ್ನನ್ನು ಗುರುತು ಹಿಡಿಯಿರಿ ಎಂದು ಆಹ್ವಾನಿಸಿದರು. ಗುರುಲಿಂಗಯ್ಯ ಸಿಟ್ಟಿನಲ್ಲಿ ಗುರುಮಠದ ಬಾಗಿಲಿಗೆ ಹಾಕಿದ

ಪರದೆಯನ್ನು ಹಾರಿಸೊಡೆದು ನೋಡಿದ. ನೋಡಿದವನೇ ಬೆಕ್ಕಸ ಬೆರಗಾದನು. ಏನನ್ನೂ ತಿಳಿಯದವನಾಗಿ ಸಂಗಡಿಗರನ್ನು ಕರೆದನು. ಅವರೂ ಬಂದು ನೋಡಿ ಗುರುತು ಹಿಡಿಯಡೇ ತಲ್ಲಣಿಸಿ ಹಾಹಾರಿ ಸಾಷ್ಟಾಂಗವೆಗಿದರು. ಇಲ್ಲಿಯ ವರೆಗೆ ತ್ರಿಮೂರ್ತಿಗಳಾಗಿ ತೋರುತ್ತಿದ್ದ ಗುರುಗಳು, ಗೌಡಪ್ಪಗೌಡ ಈಗ ಇಬ್ಬರೇ ಇಬ್ಬರಾಗಿ ತೋರಿದರು. ಇದನ್ನು ಕಣ್ಣಾರೆ ಕಂಡು ಭಯಪಟ್ಟು ಏನನ್ನೂ ನುಡಿ ಯದೆ ಹೊರಳಿ ತಂತಮ್ಮ ಮನೆಗೆ ಹೋದರು. ತ್ರಿಮೂರ್ತಿಗಳ ರೂಪವನ್ನು ಕಣ್ಣಾರೆ ಕಂಡ ಗುರುಲಿಂಗಯ್ಯನವರು ಈಗಲೂ ಇದ್ದಾರೆ. ಅವರಿಗೆ ಕೇಳಿ ತಿಳಿಯಬಹುದು. ನೋಡಿದವರೆಲ್ಲ ತಪ್ಪಾಯಿತೆಂದು ಬೇಡಿಕೊಂಡು ಹೊರ ಟರು. ನಂತರ ಗುರುಗಳು ಗೌಡಪ್ಪಗೌಡನಿಗೆ ಶಿವ ಮಂತ್ರವನ್ನು ಭೋಧ ಕೊಟ್ಟು ಹೊರಗೆ ಬಂದರು.

## ಬಹುಭಾಷಾ ಮಹಾಜ್ಞಾನಿಯ ಭೂತದರ್ಶನ

ಕರಭಾವಿ ಎಂಬ ಊರಲ್ಲಿ ದೊಡ್ಡ ಶ್ರೀಮಂತ ಗೌಡನೊಬ್ಬ ವಾಸವಾಗಿ ದ್ದನು. ಅವನಿಗೆ ಒಬ್ಬಳೇ ಒಬ್ಬ ಮಗಳಿದ್ದು ಬಹಳ ಸುಂದರಿಯಾಗಿದ್ದಳು. ಅತ್ಯಂತ ಸುಂದರಿಯಾಗಿದ್ದ ಮಗಳನ್ನು ಜೋಪಾನಮಾಡಿ ವಯಸ್ಸಿಗೆ ಬರುವದ ರೊಳಗಾಗಿಯೇ ಧಾರೆ ಎರೆದುಕೊಟ್ಟನು. ಅವಳು ವಯಸ್ಸಿಗೆ ಬಂದಕೂಡಲೇ ಒಂದೆರಡು ಸಲ ಗಂಡನ ಮನೆಗೆ ಹೋಗಿ ಬಂದಳು. ಅವಳ ಪೂರ್ವಜನ್ಮದ ಕರ್ಮವೊ ಏನೋ ಕೆಟ್ಟ ಘಳಿಗೆಯಲ್ಲಿ ಭಯಂಕರವಾದ ಭೂತವೊಂದು ಹಿಡಿದು ಕೊಂಡಿತು. ಈ ಬಹುಭಾಷಾ ಪಂಡಿತನಾದ ಭೂತ ಅವಳ ಮೈಯಲ್ಲಿ ಬಂದು ತಾನೇ ಹೇಳುವಂತೆ ಮುಸ್ಲೀಮನಾಗಿದ್ದು ತನ್ನ ಹೆಸರು ಖರೀಮಸಾ ಮಹಾರಾಜ ನೆಂದೂ ನಾನು ಬಹು ಜ್ಞಾನಿಯಾಗಿದ್ದು ಪ್ರತಿ ಭಾರತೀಯ ಭಾಷೆಗಳೆಲ್ಲವನ್ನೂ ಬಲ್ಲವನೆಂದು ಹೇಳುತ್ತಿದ್ದನು. ಬಹುಭಾಷಾ ಮಹಾಜ್ಞಾನಿಯ ಭೂತ ಮೇಲಿಂದ ಮೇಲೆ ಅಂದರೆ ದಿನದಲ್ಲಿ ಮೂರು ನಾಲ್ಕುಬಾರಿ ಅವಳ ಮೈಯಲ್ಲಿ ಬಂದು ಬಹಳ ತೊಂದರೆ ಕೊಡುತ್ತಿತ್ತು. ಇದನ್ನು ಕಂಡು ಗೌಡ ತನ್ನ ಪ್ರೀತಿಯ ಮಗಳಿಗೆ ಬಂದೊದಗಿದ ಸಂಕಷ್ಟವನ್ನು ನೋಡಿ ಸಹಿಸದಾದನು. ಆ ಕೂಡಲೇ ದೇಶದ ನಾನಾ ಭಾಗಗಳಲ್ಲಿರುವ ಮಹಾ ಮಹಾ ಪಂಡಿತರಿಗೂ,

ಮಂತ್ರವಾದಿಗಳಿಗೂ, ಯಂತ್ರ ಪ್ರವೀಣರಿಗೂ, ಬಾನಾಮತಿಯ ಜ್ಞಾನಿಗಳಿಗೂ, ಸರ್ವವಿಧ ವಿಶಾರದರಿಗೂ ತೋರಿಸಿದನು. ಅದರಿಂದ ಏನೂ ಪ್ರಯೋಜನ ವಾಗಲಿಲ್ಲ. ಮಗಳ ದೀನತೆಯನ್ನು ಕಂಡು ಅವಳು ಸೊರಗಿ ಸಣ್ಣಾಗುವುದನ್ನು ನೋಡಿ ವಿಲಿವಿಲಿ ಒದ್ದಾಡಿದನು. ನಿಸ್ಸಹಾಯಕನಾಗಿ ಸದಾ ಮಗಳ ಚಿಂತೆ ಯಲ್ಲಿಯೇ ತಾನೂ ಕೊರಗಿ ಸಣ್ಣಾಗ ಹತ್ತಿದನು. ತೋರಿಸಲು ಹೋದ ಕಡೆ ಗಳಲ್ಲೆಲ್ಲಾ ಭೂತ ತನ್ನ ಅಗಾಧ ಪಾಂಡಿತ್ಯವನ್ನು ಪ್ರದರ್ಶನ ಮಾಡುತ್ತಿತ್ತು. ಯಾವ ಜ್ಞಾನಿಯೇ ಇರಲಿ ಇವನಿಗೆ ಬರುವ ಭಾಷೆಗಳಲ್ಲೆಲ್ಲ ಸರ್ವವಿದ್ಯೆಯ ನಿಪುಣತೆಯನ್ನೆಲ್ಲ ಅವನಿಗಿಂತ ಮೊದಲೇ ಅವನು ಕಲಿತಿದ್ದಕ್ಕಿಂತಲೂ ಹೆಚ್ಚಿಗೆ ಮಾತಾಡಿ ಆ ಪಂಡಿತೋತ್ತಮನನ್ನು ಸೋಲಿಸಿ ಮುಂದೆ ಮಾತಾಡಗೊಡದಂತೆ ಮಾಡಿ ಬಿಡುತ್ತಿತ್ತು. ಎಂಥ ನಾನಾ ಎಂಬುವ ಮಹಾ ಪಂಡಿತರನ್ನೂ ಕೂಡಾ ವಾದ ಪ್ರತಿವಾದದಲ್ಲಿ ಸೋಲಿಸಿ ಬಿಡುತ್ತಿತ್ತು. ಅವರು ಸೋತು ತಪ್ಪಾಯಿ ತೆಂದು ಇವರ ಕಾಲ ಹಿಡಿದಾಗ ಮಾತ್ರ ಬಿಡುತ್ತಿತ್ತು. ಶಿಕ್ಷಣವನ್ನೇ ಕಂಡರಿ ಯದ ಗೌಡನ ಮಗಳು ಭೂತ ದರ್ಶನವಾದಾಗ ಈ ತೆರನಾಗಿ ಪ್ರತಿ ಭಾಷೆಗಳ ಲ್ಲಿಯೂ ಪ್ರತಿಯೊಂದು ತರದ ವಿದ್ಯೆಗಳನ್ನೆಲ್ಲ ಹೇಳುತ್ತ ಚಾಣಕ್ಯನಂತೆ ಮಾತಾ ಡುವ ಇವಳನ್ನು ಕಂಡು ಗೌಡ ಹಾಗೂ ಅವರ ಮನೆಯವರೆಲ್ಲ ಗಾಬರಿಯಾಗಿ ದ್ದರು. ಇಷ್ಟೇ ಅಲ್ಲ ಇವಳ ಮೈಯೊಳಗಿನ ಭೂತ ಓಡಿಸಲು ಬಂದ ಮಹಾ ಪಂಡಿತರೇ ಬೆರಗಾಗಿ ಸೋತು ತಪ್ಪಾಯಿತೆಂದು ಹಾಗೇ ತೆರಳುತ್ತಿರುವುದನ್ನು ಕಂಡ ಊರಿನ ಜನರೆಲ್ಲ ಗಾಬರಿಯಾದರು. ಶ್ರೀಮಂತನಾದ ಗೌಡ ಬೇಕಾ ದಷ್ಟು ಹಣ ಖರ್ಚುಮಾಡಿದ ಉಪಯೋಗವಾಗಲಿಲ್ಲ. ಈತರದ ಭೂತವನ್ನೇ ನಾವೆಲ್ಲೂ ಕಂಡಿಲ್ಲವೆಂದು ಹೇಳುತ್ತ ಮಂತ್ರವಾದಿಗಳೆಲ್ಲ ತಮ್ಮ ತಪ್ಪನ್ನೊಪ್ಪಿ ಕೊಳ್ಳುತ್ತ ಹಿಂದಿರುಗುತ್ತಿದ್ದರು. ನಾವು ಯಾಕರೆ ಬಂದೆವಪ್ಪಾ ಇಲ್ಲಿ ನಮ್ಮ ಅಜ್ಞಾನವೆಲ್ಲ ಹೊರಬಿದ್ದು ನಮ್ಮ ಮಾನ ಮರ್ಯಾದೆಗಳೆಲ್ಲ ಹೋಗಿಬಿಟ್ಟವಲ್ಲ ಎಂದು ಪಶ್ಚಾತ್ತಾಪ ಪಡುತ್ತ ಹೊರಬೀಳುತ್ತಿದ್ದರು. ಎಲ್ಲ ಜ್ಞಾನಿಗಳನ್ನು ಮೀರಿದ ಭೂತ ವೈಚಿತ್ರ್ಯವನ್ನು ಕಂಡು ಎಲ್ಲರೂ ಗಾಬರಿಯಾದರು. ಅದು ಹೋಗುವ ಪರಿಸ್ಥಿತಿಯಲ್ಲಿಲ್ಲ ಎಂದು ಕಂಡು ಬಂದಾಗ ಎಲ್ಲರಿಗೂ ಬಿಕ್ಕಟ್ಟಿಗಿಟ್ಟು ಕೊಂಡಿತು.

ಯಾವುದನ್ನೂ ತಿಳಿಯದಂತವನಾಗಿ ಗೌಡ ಮೂಕನಾಗಿ ಇರುತ್ತಿರಲು ಒಂದು ದಿನ ಮಾಗಣಗೇರಿಯ ಮಹಾಸ್ವಾಮಿಗಳ ಹೆಸರನ್ನು ಕೇಳಿದ ಪ್ರತಿಯೊಬ್ಬ ಪಂಡಿತನನ್ನೂ ಇಂಥಾ ಅದೆಷ್ಟೋ ಪಟ್ಟಚರ ಮೂರ್ತಿಗಳನ್ನೂ ಕಂಡ ಗೌಡ ನಿರುತ್ಸಾಹದಿಂದ ಮೈಮರೆತು ಕುಳಿತ. ಮಾಗಣಗೇರಿಯವರು ಎಲ್ಲ ಸ್ವಾಮಿಗಳಂತಲ್ಲ ಎಂಥಾ ಭಯಂಕರ ಭೂತವನ್ನೂ ಅವರ ಸೀಮೆಯಲ್ಲಿಯೇ ಇಲ್ಲದಂತೆ ಮಾಡುವುರಂತೆ ಪ್ರತ್ಯಕ್ಷ ಪರಮಾತ್ಮನ ಅವತಾರವೆಂದು ಕಂಡವರು ಹೇಳುತ್ತಾರೆ. ಅಲ್ಲದೆ ಅವರನ್ನು ಕಂಡ ಕೂಡಲೇ ಎಷ್ಟೋ ಬ್ರಹ್ಮಪಿಶಾಚಿಗಳೂ ಕೂಡಾ ಓಡಿ ಹೋಗಿವೆಯಂತೆ ಭೂತಗಳನ್ನೇ ಪ್ರತ್ಯಕ್ಷ ಕಂಡು ಕೆಲಸ ಮಾಡಿಸಿಕೊಂಡ ಮಹಾನುಭಾವರವರು. ಎಂದು ಮೂರು-ನಾಲ್ಕು ದಿನಗಳವರೆಗೆ ಒಬ್ಬರ ಬಾಯಿಯಿಂದ ಕೇಳಿದ ಬಳಿಕ ಗೌಡ ಒಮ್ಮೆ ನೋಡಿಯಾದರೂ ಬಂದರಾಯಿತೆಂದು ಮಗಳನ್ನು ಕರೆದುಕೊಂಡು ಬಂಡಿ ಹೂಡಿಕೊಂಡು ಮಾಗಣಗೇರಿಗೆ ಬಂದರು. ಮಾಗಣಗೇರಿಯ ಸೀಮೆಗೆ ಬಂದೊಡನೆಯೇ ಗೌಡನ ಮಗಳ ಮೈಯಲ್ಲಿ ಭೂತ ಕಾಣಿಸಿಕೊಂಡಿತು. ಆದರೆ ಹೊರಟು ಹೋಗಲಿಲ್ಲ. ಸ್ವಾಮಿಗಳು ದೂರದಿಂದಲೇ ಆ ಹೆಣ್ಣು ಮಗಳನ್ನು ಕಂಡು "ಏನಿದು ವಿಚಿತ್ರ ಈ ಭೂತ ಇನ್ನೂ ಹಾಗೇ ಬಂದಿದೆಯಲ್ಲ" ಸೀಮೆ ದಾಟಿ ಬಂದರೂ ಹೋಗಿಲ್ಲವೆಂದ ಬಳಿಕ ಇದೇನೋ ವೈಚಿತ್ರ್ಯವನ್ನು ನೋಡೋಣವೆಂದು ಅಂದುಕೊಳ್ಳುತ್ತ ಮಹಾಸ್ವಾಮಿಗಳು ಬರುವವರಿಗೆ ಸ್ವಾಗತ ಹೇಳಿದರು. ಆ ಹೆಣ್ಣುಮಗಳು ಬಂದು ಕುಳಿತ ಬಳಿಕ ಸ್ವಾಮಿಗಳು "ಯಾರು ನೀನು ? ಎಂದು ವಿಚಾರಿಸಿದಾಗ ನಾನು ಕಾಮಸಾ ಮಹಾರಾಜನಿರುವೆ" ನನ್ನನ್ನು ಯಾರೆಂದು ತಿಳಿದಿರುವಿರಿ ? ನಾನು ಸಹ ಮಹಾತತ್ವಜ್ಞಾನಿಯಾಗಿದ್ದು ಪ್ರತಿ ಭಾರತೀಯ ಭಾಷೆಗಳಲ್ಲೂ ಮಾತಾಡಬಲ್ಲೆ, ಯಂತ್ರ, ಮಂತ್ರ, ತಂತ್ರಗಳಲ್ಲೂ ನಿಪುಣತೆ ಪಡೆದಿರುವೆ, ವೈದ್ಯದಲ್ಲಂತೂ ನನ್ನನ್ನು ಮೀರಿಸುವವರಿಲ್ಲ. ಯಕ್ಷಣಿ, ಮೋಡಿ, ಬಾನಾಮತಿ, ಮಹಾಮಂತ್ರವಾದಿತ್ವ, ಸಂಗೀತ ಮೊದಲಾದ ಸರ್ವವಿಧ ವಿದ್ಯೆಗಳಲ್ಲೂ ವಿಶಾರದನಿದ್ದೇನೆ. ಇಲ್ಲಿಯವರೆಗೆ ಯಾರಿಗೂ ನಾನು ತಲೆ ಬಾಗಿದವನಲ್ಲ ಎಲ್ಲರನ್ನೂ ಸೋಲಿಸಿದ್ದೇನೆ. ಆದರೆ ಇಂದು ತಮಗೆ ತಲೆಬಾಗುವ ಪ್ರಸಂಗ ಬಂದಿದೆ. ತಮ್ಮೊಬ್ಬರಿಗೆ ಮಾತ್ರ ಅಂಜಿರುವೆ ಸೋತು ತಲೆ ಬಾಗಿರುವೆ ಏಕೆಂದರೆ ನಾನು ಎಲ್ಲ ಬಲ್ಲವನಾದರೂ ಒಂದನ್ನೂ ಮಾತ್ರ ಕಳೆದುಕೊಂಡಿರುವೆ ಅದನ್ನು ನೀವು ಉಳಿಸಿಕೊಂಡು ಬಂದಿರು

ವಿರಿ, ಅಷ್ಟೆ ಅಲ್ಲದೆ ಅದರಲ್ಲಿ ನಿಪುಣತೆಯನ್ನು ಹೊಂದಿ ಮೆರೆದ ಮಹಾತೇಜಸ್ವೀ ತಪೋನಿಧಿಗಳಾಗಿದ್ದೀರಿ. ನೀವು ಕಾಯ್ದುಕೊಂಡ ಆ ಬ್ರಹ್ಮಚರ್ಯಕ್ಕೆ ತಲೆ ಬಾಗುವೆ. ಸರ್ವಜ್ಞನು ಈ ರೀತಿಯಾಗಿ ಹೇಳಿದ್ದಾನೆ ಉದಾ—

ಇಂದ್ರಿಯವು ಪುತ್ರಸ್ಥಂ। ಒಂದೇ ನಾಳದಿ ಬಕ್ಕ।
ಒಂದ ಬಿಟ್ಟೊಂದ ತಡೆದರೇ ಪರಬೊಮ್ಮವೇ.
ತಾನಕ್ಕು ಸರ್ವಜ್ಞ॥

ನಿಮ್ಮ ಕರಾರಗಳೇನು ಹೇಳಿರಿ ನಾನೂ ನನ್ನ ಕರಾರುಗಳನ್ನು ಹೇಳುವೆ ಎಂದು ನುಡಿಯಿತು. ಕೂಡಲೇ ಸ್ವಾಮಿಗಳು ಹೇಳುವುದೇನಿದೆ ನಿನಗೆ ಏನು ಬೇಕೋ ಬೇಡು ಕೊಡಿಸುವೆ ಹೊರಟು ಹೋಗಿ ಬಿಡು ಇನ್ನೊಮ್ಮೆ ಈ ಕಡೆ ಸುಳಿಯಬೇಡ ಎಂದು ಹೇಳಿದರು. ಆಗ ಕರೀಮುಸಾ ಮಹಾರಾಜ ಭೂತ ಹೇಳಿಕೊಂಡಿದ್ದೇನಂದರೆ ಅತ್ಯುತ್ತಮವಾದ ಪಕ್ವಾನ್ನದ ಊಟ ಮಾಡಿಸಿ (1000) ಒಂದು ಸಾವಿರ ಜಂಗಮರ ಊಟ ಮಾಡಿಸಬೇಕು ಮತ್ತು ಅವರಿಗೆ ತಲಾ ಒಂದು ರೂಪಾಯಿಯಂತೆ ದಕ್ಷಿಣೆ ಕೊಡಿಸಬೇಕು ಅಲ್ಲದೆ ಅದರಂತೆ (315) ಮೂರು ನೂರಾ ಹದಿನೈದು ಫಕೀರರನ್ನೂ ಊಟ ಮಾಡಿಸಿ ಅವರಿಗೂ ಒಂದೊಂದು ರೂಪಾಯಿ ಕೊಡಿಸಿದರೆ ನನಗೆ ತೃಪ್ತಿಯಾಗುತ್ತದೆ. ಆಗ ನಾನು ಈ ಕಡೆ ಸುಳಿಯದೇ ನನ್ನ ಸ್ಥಾನಕ್ಕೆ ನಾನು ಹೋಗುವೆ. ಅಡುಗೆಯಲ್ಲಿ ಯಾವ ತರದ ದೋಷವೂ ಆಗಬಾರದು. ನಾನು ಹೇಳಿದ ಪ್ರಕಾರ ಚಾಚೂ ತಪ್ಪದೇ ಮಾಡಬೇಕು ಶುದ್ಧವಾದ ಮೃಷ್ಟಾನ್ನ ಭೋಜನವಾಗಬೇಕು ಎಂದು ಹೇಳಿತು. ಅದಕ್ಕೆ ಸ್ವಾಮಿಗಳು ಗೌಡನನ್ನು ವಿಚಾರಿಸಲಾಗಿ ಅದಕ್ಕೆ ಗೌಡನು ಒಪ್ಪಿಗೆಯನ್ನಿತ್ತನು. ಬಳಿಕ ಸ್ವಾಮಿಗಳು ಕರೀಮು ಸಾಹೇಬನ ಭೂತಕ್ಕೆ ಅಭಯ ವಚನವಿತ್ತು ಕಳಿಸಿದರು. ಊರಿಗೆ ಹೋದ ನಾಲ್ಕೈದು ದಿನಗಳಲ್ಲಿಯೇ ಈ ಸಿದ್ಧತೆ ಪ್ರಾರಂಭವಾಯಿತು. ಅಡಿಗೆಗೆ ಬೇಕಾದ ಸರ್ವ ಸಾಹಿತ್ಯದ ಸಿದ್ಧತೆ ಮುಗಿದ ಬಳಿಕ ಇನ್ನೂ ಎರಡು ದಿನ ಪೂರ್ವದಲ್ಲಿಯೇ ಜಂಗಮರಿಗೂ ಫಕೀರರಿಗೂ ಆಮಂತ್ರಣ ಕೊಟ್ಟಾಯಿತು. ನಿಶ್ಚಯಿಸಿದ ದಿನದಂದು ನಸುಕಿನಲ್ಲಿಯೇ ಹುಗ್ಗಿ ಕುದಿಯಲು ಇಟ್ಟರು. ಆದರೆ ಅವರ ಮನೆಯಲ್ಲಿಯ ಹೆಂಗಳೆಯರು ಹುಗ್ಗಿ ಹೆಚ್ಚಾಗಿ ದಪ್ಪನಂತೆ ಮಾಡುವುದಕ್ಕಾಗಿ ಸೇವಣಿಯನ್ನು ಕುಟ್ಟಿಸಿ ಗೋದಿಯ ಅಕ್ಕಿಯಲ್ಲಿ ಕಲೆಸಿ ಕುದಿಯಲು ಹಾಕಿದರು. ಕೂಡಲೇ ಕರೀಮು ಸಾಬನು (ಭೂತ) ಓಡುತ್ತ ಬಂದು

ಮಹಾಸ್ವಾಮಿಗಳನ್ನು ಕರೆದುಕೊಂಡು ಹೋಗಿ ನೆವಣಿಯ ನಿದರ್ಶನ ಮಾಡಿ ಕೊಟ್ಟಿತು. ಮನೆಯಲ್ಲಿಯ ಹಾಕಿದ ಹೆಂಗಳೆಯರನ್ನು ಕರೆದು ಕೇಳಿದಾಗ ನಿಜ ವೆಂದು ಹೇಳಿದರು. ಅಲ್ಲದೆ ಹುಗ್ಗಿಯಲ್ಲಿ ಹುಟ್ಟು ಆಡಿಸಿದಾಗ ಅಕ್ಕಿ ಅರ್ಧ ದಷ್ಟು ಕೂಡಿದ್ದು ಕಂಡು ಬಂದಿತು. ಆ ಕೂಡಲೇ ಕರೀಮ ಸಾಬನ ಭೂತ ಸ್ವಾಮಿಗಳಿಗೆ ಇಂತೆಂದಿತು. "ಸ್ವಾಮಿಗಳೇ ! ನಾನು ಹೇಳಿದ ಪ್ರಕಾರ ಇವರು ಮಾಡಲಿಲ್ಲ. ನಿಮಗೆ ಕೊಟ್ಟವಚನ ಮುಟ್ಟಿತು. ನಾನು ಮಾತ್ರ ಹೋಗುವುದಿಲ್ಲವೆಂದು ಹೇಳಿದ್ದೆ ಆ ಪ್ರಕಾರವಾಗಿ ನಾನು ಇವಳನ್ನು ಬಿಟ್ಟು ಹೋಗುವುದಿಲ್ಲವೆಂದು ಹೇಳಿ ಮತ್ತೆ ಪ್ರವೇಶ ಮಾಡಿತು. ಮುಂದೆ ಕೆಲವು ದಿನ ಗಳಲ್ಲಿಯೇ ಮತ್ತಷ್ಟು ಸಣ್ಣ (ಕೃಷ) ವಳಾಗಿ ಸ್ವರ್ಗ ವಾಸಿಯಾದಳು.

## ಲಿಂಗ ಸ್ಥಾಪನಾ

ಸೋಮನಾಳ ಎಂಬ ಗ್ರಾಮದಲ್ಲಿ ಬಸವಲಿಂಗಪ್ಪನೆಂಬೊಬ್ಬ ಶರಣ ವಾಸ ವಾಗಿದ್ದನು. ಅವನು ಪ್ರತಿನಿತ್ಯ ತನ್ನ ಹೊಲದಲ್ಲಿ ದುಡಿದು ಬಡತನದಲ್ಲಿದ್ದರೂ ಬಂದದ್ದರಲ್ಲಿಯೇ ಊಟ ಮಾಡಿಕೊಂಡು ಹೆಂಡರು ಮಕ್ಕಳೊಂದಿಗೆ ಸಂತುಷ್ಟ ನಾಗಿದ್ದನು. ದಿನಂಪ್ರತಿ ಎಷ್ಟು ದುಡಿಯುವನೋ ಅಷ್ಟನ್ನೇ ಊಟ ಮಾಡಿ ಸಂತೋಷದಿಂದ ಇರುತ್ತಿದ್ದನು. ಬೇರೆಯವರಲ್ಲಿ ಕೂಲಿ ಮಾಡಲು ಹೋದರೆ ಅದಕ್ಕೆ ತಕ್ಕ ಸಂಭಾವನೆ ಪಡೆದು ಬಂದು ಅಷ್ಟರಲ್ಲಿಯೇ ಹೆಂಡತಿ ಮಕ್ಕಳು ಹಂಚಿ ಕೊಂಡು ಊಟ ಮಾಡುತ್ತಿದ್ದರು. ಇವನು ಬಹು ನಿಷ್ಠಾವಂತ ಶಿವಪೂಜಕ ನಾಗಿದ್ದು ಜಂಗಮ ನಿಷ್ಠಾವಂತನಾಗಿದ್ದು ಶ್ರೇಷ್ಟ ಭಕ್ತನಾಗಿದ್ದನು. ಅಣ್ಣ ಬಸ ವಣ್ಣನು ಹೇಳಿದಂತೆ "ಕಾಯಕವೇ ಕೈಲಾಸ" ಎಂಬ ವಾಕ್ಯದಂತೆ ಬಸವಲಿಂಗಪ್ಪ ಅದನ್ನು ತನ್ನ ನಿಜ ಜೀವನದಲ್ಲಿ ಅಳವಡಿಸಿಕೊಂಡು ಬದುಕುತ್ತಿದ್ದನು. ಆ ಊರಲ್ಲಿ ಯಾರೇ ಯಾತಕ್ಕಾಗಿಯೇ ಆಗಲಿ ಊಟಕ್ಕೆ ಹೇಳಿದರೆ ಅವರ ಹೊಲದಲ್ಲಿ ಅವರಿಗೆ ಅರಿಯದಂತೆಯೇ ಹೋಗಿ ಕರಕಿ ಕಣಗೆಗಳನ್ನು ಕಡಿದು ಬಂದು ಅವರ ಮನೆಯಲ್ಲಿ ಊಟ ಮಾಡಿ ಬರುತ್ತಿದ್ದನು. ಬಳಿಕ ಹೊಲದವರ ವಿಚಾರಿಸಲಾಗಿ ಬಸವಲಿಂಗಪ್ಪನೇ ಕಡಿದು ಹೋದನೆಂದು ನೆರೆಯವರು ಹೇಳಿದಾಗ ಅವನ ಸಂಭಾ ವನೆಯನ್ನು ಕೊಡಲು ಹೋದರೆ ಬಸವಲಿಂಗಪ್ಪ ಅದನ್ನು ತೆಗೆದುಕೊಳ್ಳದೇ ತನ್ನ ತತ್ವನಿರೂಪಣೆಯನ್ನು ಮಾಡಿ ಅವರನ್ನು ಸಮಾಧಾನಗೊಳಿಸಿ ಕಳಿಸಿ ಕೊಡುತ್ತಿ

ದ್ದನು. ಇಂಥಃ ಶರಣ ಬಸವಲಿಂಗಪ್ಪನವರು ಊರ ಪ್ರಮುಖರನ್ನು ಕರೆದು ಇಂತೆಂದನು— ನಮ್ಮ ಗ್ರಾಮವಲ್ಲಿ ಪುರಾಣ ಪುಣ್ಯಕಥೆಗಳೆ ಆಗಿಲ್ಲ. ಆದ ಕಾರಣ ಬಸವಪುರಾಣ ಇಟ್ಟುಕೊಳ್ಳೋಣ. ಪುರಾಣಕ್ಕೆ ಮಾಗಣಗೇರಿಯ ಯೋಗಿವರ್ಯರಾದ ಶ್ರೀಗುರು ಚನ್ನವೃಷಭೇಂದ್ರರನ್ನು ಕರೆಸೋಣ ಪುರಾಣ ನಡೆಯುವದರಿಂದ ಅನೇಕ ಶಿವಶರಣರು ಯಾವ ಯಾವ ರೀತಿ ನಡೆದು ಯಾವ ಯಾವ ಪದ ಹೊಂದಿದರು. ಭಕ್ತಿ ಅಂದರೇನು ? ಯಾವ ರೀತಿ ಮಾಡಬೇಕು. ಶಾಸ್ತ್ರ ಅಂದರೇನು ? ಯಾವ ರೀತಿ ನಡೆಯಬೇಕು. ಅನ್ನುವದರ ಬಗ್ಗೆ ನಮ್ಮೆಲ್ಲರ ನಯ, ವಿನಯ, ಭಕ್ತಿಯ ಜ್ಞಾನವು ಪ್ರಾಪ್ತವಾಗುವದು ಎಂದು ಹೇಳಿದರು. ಅದಕ್ಕೆ ಊರ ಜನರು ಒಪ್ಪಿಗೆಯನ್ನಿತ್ತು ಬಸವಪುರಾಣವನ್ನು ಏರ್ಪಡಿಸಿದರು. ಅದರ ಮಂಗಲಕಾರ್ಯಕ್ಕೆ ಮಾಗಣಗೇರಿಯ ಗುರುವರ್ಯರನ್ನು ಕರೆಯಲು ಶರಣಬಸವಲಿಂಗಪ್ಪ ಮತ್ತು ಎತ್ತಿನ ದುಂಡಪ್ಪ ಕೂಡಿಯೇ ಕರೆಯಲು ಬಂದರು. ಆಗ ಸ್ವಾಮಿಗಳು ನಿಮ್ಮಲ್ಲಿ ಯಾವ ದೇವಾಲಯಗಳು ಪ್ರಸಿದ್ಧ ಅವೆ ಎಂದು ಪ್ರಶ್ನಿಸಿದಾಗ ನಮ್ಮಲ್ಲಿ ಒಟ್ಟಿಗೆ ಹೇಳಬೇಕಾದರೆ ಶಿವಲಿಂಗದ ದೇವಾಲಯಗಳೇ ಇರುವುದಿಲ್ಲವೆಂದು ಹೇಳಿದರು. ಆಗ ಗುರುಗಳು ಹಾಗಾದರೆ ನಿಮ್ಮ ಊರಿಗೆ ನಾವು ಬರುವುದಿಲ್ಲವೆಂದು ಹೇಳಿದರು. ಅಲ್ಲದೆ ನಾವು ಬರಬೇಕಾದರೆ ನಿಮ್ಮಲ್ಲಿ ಶಿವದೇವಾಲಯ ಕಟ್ಟಿಸಿ ಶಿವಲಿಂಗ ಸ್ಥಾಪನೆಯಾದರೆ ಮಾತ್ರ ಬರುವೆವೆಂದು ಹೇಳಿದರು. ಅದರಂತೆ ಅವರು ಸೋಮನಾಳಕ್ಕೆ ಬಂದು ಆ ಪುರಾಣವನ್ನು ಹಾಗೇ ಮುಂದುವರೆಸಿ ಪುನಃ ಊರ ನಡುಮಧ್ಯದಲ್ಲಿ ದೇವಮಂದಿರವನ್ನು ಕಟ್ಟಿಸಿ ಸ್ವಾಮಿಗಳವರನ್ನು ಕರೆದೊಯ್ದು ಅವರ ಅಮೃತ ಹಸ್ತದಿಂದ ಲಿಂಗ ಸ್ಥಾಪನೆ ಮಾಡಿಸಿ ಪುರಾಣ ಮಂಗಲ ಮಾಡಿಸಿದರು. ಅಂದಿನಿಂದ ಆ ಊರಿಗೆ ಶರಣ ಸೋಮನಾಳವೆಂದು ಹೆಸರಿಟ್ಟರು. ಅಂದಿನಿಂದಲೂ ಪ್ರತಿ ವರ್ಷ ಗುರುವರ್ಯರನ್ನು ಕರೆದುಕೊಂಡು ಹೋಗಿ ಪುರಾಣ ಮಂಗಲ ಗೊಳಿಸುತ್ತಿದ್ದರು. ಮತ್ತು ಶ್ರಾವಣ ಮಾಸದ ಕೊನೆಗೆ ಸೋಮನಾಳರ ಭಜನಾ ಮಂಡಳಿಯೂ ಮಾಗಣಗೇರಿಗೆ ಶಿವ ಭಜನೆ ಮಾಡುತ್ತ ಪಾದಚಾರಿಯಿಂದ ಬರುತ್ತಿದ್ದರು.

# ದೇವಿ ಪುರಾಣಾರಾಧನೆ

ಖಾನಾಪೂರದ ಗೌಡರ ಮನೆಗೆ ಮೊದಲಿನಿಂದಲೂ ಒಂದೊಂದೇ ಸಂತಾನ ವಾಗುತ್ತ ಬಂದಿತ್ತು. ಹೀಗಿರುತ್ತಿರಲು ಒಮ್ಮೆ ಅದೂ ದಕ್ಕದೇ ಹೋಯಿತು. ಆಗ ಸೂಪಿನ ಹಿಪ್ಪರಿಗಿಯಿಂದ ಸಿದ್ರಾಮಪ್ಪಗೌಡನನ್ನು ದತ್ತಕ ತೆಗೆದು ಕೊಂಡರು. ದತ್ತಕ ಪುತ್ರ ದೊಡ್ಡವನಾಗುವದರೊಳಗಾಗಿಯೇ ಮನೆಯ ಯಜ ಮಾನ ತೀರಿಕೊಂಡಪ್ಪರಿಂದ ಮುಂದೆ ಸಿದ್ರಾಮಪ್ಪಗೌಡ ದೊಡ್ಡವನಾದ ಬಳಿಕ ಇವನ ದತ್ತಕವನ್ನೇ ಸುಳ್ಳು ಮಾಡಬೇಕೆಂದು ಖಾನಾಪೂರದ ದೂರದ ಅಣ್ಣ ತಮ್ಮಂದಿಯರು ಫಣತೊಟ್ಟು ನಿಂತರು. ಕೋರ್ಟಿನಲ್ಲಿ ಕೇಸು ಥಾಖಲ್ ಆಯಿತು. ಆಗ ಹೆರನಾಳದ ತೀರ್ಥಪ್ಪಗೌಡನು ಗುರುಗಳಲ್ಲಿಗೆ ಧಾವಿಸಿ ಬಂದು ಸರ್ವ ವಿಷಯ ನಿವೇದಿಸಿಕೊಂಡನು. ಆಗ ಗುರುಗಳು ನೀನು ಏನೂ ಚಿಂತೆ ಮಾಡಬೇಡಾ ದತ್ತಕ ಪುತ್ರ ಖಾಯಂ ಆಗುವದು, ಕೋರ್ಟಿನಲ್ಲಿ ಜಯ ಸಿಗು ವದು, ಬಳಿಕ ಪ್ರತಿವರ್ಷ ಮಹನವಮಿಗೊಮ್ಮೆ ದೇವಿ ಪಾರಾಯಣ ನಡೆಯ ಬೇಕು ಎಂದು ಆಶೀರ್ವಾದ ಮಾಡಿ ಕಳಿಸಿದರು. ಮುಂದೆ ಎರಡು ಮೂರು ವರ್ಷಗಳಲ್ಲಿ ಸಿದ್ರಾಮಪ್ಪಗೌಡನಿಗೆ ಕೋರ್ಟಿನಲ್ಲಿ ಜಯ ಸಿಕ್ಕಿತು. ಗುರುಗಳಿಗೆ ವಚನ ಕೊಟ್ಟ ಪ್ರಕಾರ ಪ್ರತಿವರ್ಷ ದೇವಿ ಪಾರಾಯಣ ನಡೆಸಿಕೊಂಡು ಬರು ತ್ತಲಿದ್ದಾರೆ. ದೇವಿಪುರಾಣ ಮುಕ್ತಾಯ ಸಮಾರಂಭಕ್ಕೆ ಯೋಗಿವರ್ಯರನ್ನು ಬರಮಾಡಿಕೊಳ್ಳುತ್ತಿದ್ದರು. ಈಗಲೂ ಸಹ ನೂತನ ಮಠಾಧ್ಯಕ್ಷರನ್ನು ಕರೆದು ಕೊಂಡು ಹೋಗಿ ದೇವಿ ಪುರಾಣವನ್ನು ನೆರವೇರಿಸುವರು. ಅಂದಿನಿಂದ ಗೌಡ ರಿಗೆ ಪುತ್ರ ಸಂಪತ್ತಿನಿಂದಲೂ ಹಾಗೂ ಸಕಲ ಐಶ್ವರ್ಯದಿಂದಲೂ ಕೂಡಿಕೊಂಡು ಸುಖದಿಂದಿದ್ದಾರೆ.

# ಕ್ಷೇತ್ರ ಗೋಲಗೇರಿಯಲ್ಲಿ ಗೊಲ್ಲಾಳೇಶ್ವರ ತೇರು ಅಪೂರ್ಣ ಎಳೆದಿದ್ದು ಪೂರ್ಣ ಎಳೆಸಿದ್ದು

ಪ್ರತಿ ಚೈತ್ರಮಾಸದ ಪೌರ್ಣಿಮೆಯೆಂದು (ದವನದ ಹುಣ್ಣಿಮೆ) ಗೊಲ್ಲಾಳೇಶ್ವರ ರಥೋತ್ಸವ ಬಹು ವಿಜೃಂಭಣೆಯಿಂದ ಜರಗುತ್ತದೆ. ಅದರಂತೆ ಪ್ರತಿ ವರ್ಷವೂ ನಡೆಯುತ್ತಿರಲಾಗಿ ಒಂದು ವರ್ಷ ತೇರು ಸಾಗುತ್ತಿದ್ದಂತೆಯೇ ಅರ್ಧಕ್ಕೇನೆ ನಿಂತುಬಿಟ್ಟಿತು, ಇದು ಯಾವಾಗಲೂ ನಡೆದು ಬಂದದ್ದೇ. ನಿಂತು ನಿಂತು ಹೋಗುವುದು ಒಂದು ದಿನವೋ, ಎರಡು ದಿನವೋ, ಒಟ್ಟಿನಲ್ಲಿ ಐದು ದಿನಗಳಲ್ಲಿ ಪುನಃ ಬಂದು ಸ್ಥಳದಲ್ಲಿ ನಿಲ್ಲುತ್ತದೆ. ಒಮ್ಮೊಮ್ಮೆ ವೇಗವಾಗಿ ಹೋಗಿ ವೇಗವಾಗಿ ಬಂದು ನಿಲ್ಲುವುದೂ ಉಂಟು. ಅಲ್ಲಿ ನೆರೆದ ಜನ ಈ ಸಮಯದ ಮೇಲೆ ಆಯಾ ವರ್ಷದ ಕಾಲಮಾನ ಮಳೆ ಬೆಳೆಗಳನ್ನು ಅಳತೆ ಮಾಡಿಕೊಂಡು ಹೋಗುವುದು ವಾಡಿಕೆ ಆದರೆ ಆ ವರ್ಷ ಮಾತ್ರ ಅರ್ಧದಲ್ಲೇ ನಿಂತ ತೇರು ಹತ್ತು ದಿನ ಕಳೆದರೂ ಹೋಗಿ ಬರುವ ಲಕ್ಷಣಗಳೇ ತೋರಲಿಲ್ಲ. ಪ್ರತಿನಿತ್ಯವೂ ನೆರೆದ ಜನಸ್ತೋಮ ದಿನಕ್ಕೆ ನಾಲ್ಕು ಐದು ಬಾರಿಯಂತೆ ಎಳೆಯಲು ಪ್ರಯತ್ನಿಸುತ್ತಲೇ ಇದ್ದರು. ಜಾತ್ರೆ ಹದಿನೈದು ದಿನಗಳ ವರೆಗೆ ವಿರಾಜಮಾನವಾಗಿ ತನ್ನ ರಾಜಠೀವಿಯಲ್ಲಿಯೇ ಜರಗುತ್ತಿತ್ತು. ತೇರು ನಿಂತಸುದ್ದಿ ಸುತ್ತಲು ನಾಡಿನಲ್ಲಿ ಪಸರಿಸಿ ಮತ್ತಷ್ಟು ಜನ ಧಾವಿಸಿ ಗೋಲಗೇರಿಯತ್ತ ಬರತೊಡಗಿದರು. "ಎಂಥಾದೋ ಗುರುವಿನ ನಿದ್ದಿ ಒಂದು ಘಳಿಗ್ಯಾಗ ಹರದಿತ್ತೋ ದೇಶಲ್ಲ್ಯಾ ಸುದ್ದಿ" ಎಂಬಂತೆ ಸಗರನಾಡ ತುಂಬ ಪಸರಿಸಿತು. ಅಪ್ಪನ ತೇರಿನ ಮಿಣ ಮನೆಗೆ ಬರುವವರೆಗೂ ಮನೆಯ ಯಜಮಾನ ಯಜಮಾನಿತಿಯರು ಉಪವಾಸ ಇರಬೇಕು ಯಜಮಾನ ಹೊಳೆಪ್ಪ ಸಾಹುಕಾರನ ಅಣ್ಣನ ಹೆಂಡತಿ ಜಾನವ್ವ ಇಬ್ಬರೂ ನಮ್ಮ ಗುರುಗಳಲ್ಲಿ ಅತ್ಯಂತ ನಿಷ್ಠಾವಂತ ಭಕ್ತಿಯುಳ್ಳವರಾಗಿದ್ದರು. ಗೊಲ್ಲಾಳೇಶ್ವರನೇ ಸಾಕಾರ ಮೂರ್ತಿಯೆಂದೂ, ಗೊಲ್ಲಾಳೇಶ್ವರನಿಗೂ ಗುರುಗಳಿಗೂ ಯಾವ ಭೇದಭಾವವಿಲ್ಲದೆ ನಡೆದುಕೊಳ್ಳುತ್ತಿದ್ದರು. "ಆದ್ಯರ ವಚನವೇ ಪರುಷ ಕಂಡಯ್ಯಾ" ಎನ್ನುವಂತೆ ಗುರುವಿನ ವಚನವೇ ಗೊಲ್ಲಾಳೇಶ್ವರ ವಚನವೆಂದು ತಿಳಿದು ನಡೆಯುತ್ತಿದ್ದರು. ಸ್ವಾಮಿಗಳವರನ್ನು ಯುಗಾದಿ ಪ್ರತಿಪದೆಯಿಂದ

ಕಳಸ ಇಳಿಯುವವರೆಗೆ ಇವರೆ ಕ್ರಿಯಾಮೂರ್ತಿಗಳಾಗಿ ಪ್ರತಿವರ್ಷ ಕರೆದು ಕೊಂಡು ಹೋಗುತ್ತಿದ್ದರು. ಹತ್ತನೇಯ ದಿವಸ ಮಹಾ ಸ್ವಾಮಿಗಳವರಲ್ಲಿ ದುಪತಿಗಳಿಬ್ಬರು ನಿವೇದಿಸಿಕೊಂಡಾಗ ಗುರುಗಳು ಇರ್ಲಿ ಹೊಳೆಪ್ಪ ಸಾಹುಕಾರ ಜಾನವ್ವ, ಯಾವದಕ್ಕೂ ಚಿಂತಿಸಬೇಡ ನಾಳಿಗೆ ಹನ್ನೊಂದು ದಿವಸವಾಗುವದು ಮುಂಜಾನೆ ಡಂಬಳದ ಬೋರಮ್ಮನನ್ನು ಹನ್ನೊಂದು ಜನ ಮುತ್ತೈದಿಯರನ್ನು ಕರೆದುಕೊಂಡು ಹೋಗೋಣ ಎಂದು ನುಡಿದರು.

ಅದೇರೀತಿ ಹನ್ನೊಂದನೇ ದಿನ ಮುತ್ತೈದಿಯರೊಂದಿಗೆ ಬಾಜಿ ಬಜಂತ್ರಿ ಮಂಗಳ ವಾದ್ಯಗಳೊಂದಿಗೆ ಡಂಬಳದ ಬೋರಮ್ಮನ ಭಾವಿಗೆ ಬಂದು ಪೂಜೆ ಯನ್ನು ನೆರವೇರಿಸಿ ಮಂಗಳಾರತಿ ಮಾಡಿ ಒಂದು ಕೊಡ ಗಂಗೆಯನ್ನು ತುಂಬಿ ಕೊಂಡು ತೇರಿನ ಬಳಿ ಬಂದು ಪೂಜೆಯನ್ನು ನೆರವೇರಿಸಿ ಆರತಿ ಎತ್ತಿ ಹನ್ನೊಂದು ಮಂದಿ ಮುತ್ತೈದಿಯರಿಂದ ಮಿಣಿ ಹಿಡಿಸಿ ಅಪ್ಪನ ತೇರಿಗೆ ದೇವಪುರುಷ ಮಹಾ ಗುರುಗಳು ತಮ್ಮ ಅಮೃತ ಹಸ್ತದಿಂದ ತೇರುಮುಟ್ಟಲಾಗಿ ತೇರುಮುಂದೆಸಾಗಿತ್ತು. ನೆರೆದ ಜನಸ್ತೋಮ ಹರಹರ ಮಹಾದೇವ ಹರಹರ ಶ್ರೀ ಗುರು ವೃಷಭೇಂದ್ರ ಮಹಾರಾಜಕೀ ಎಂದು ಜಯ ಜಯಕಾರ ಮಾಡುತ್ತಿದ್ದಂತೆಯೇ ತೇರು ಆಪಾದ ಗಟ್ಟಿ ಮುಟ್ಟಿ ತಿರುಗಿ ಬಂದು ತನ್ನ ಸ್ಥಳವನ್ನು ಮುಟ್ಟಿತು. ಗುರುಗಳೇ ಗೊಲ್ಲಾ ಳೇಶ್ವರ, ಗೊಲ್ಲಾಳೇಶ್ವರನೇ ಗುರುಗಳೆಂದು ನಂಬಿದ ಹೊಳೆಪ್ಪ ಅಣ್ಣನ ಹೆಂಡತಿ ಜಾನವ್ವರಿಗೆ ಅತ್ಯಂತ ಆನಂದವಾಯಿತು. ಜನರು ಗುರುವರ್ಯರ ಮಹಿಮೆ ಯನ್ನು ಕಂಡು ಬೆರಗು ಕಟ್ಟಿದರು. ದಶ ದಿಕ್ಕು ದಿಕ್ಕುಗಳೆಲ್ಲ ಗುರುವಿನ ಮಹಿಮೆ ಹಬ್ಬಿಕೊಂಡಿತು.

## ಮಳೆ ತಡೆದದ್ದು

ಎಂದಿನಂತೆ ಮಹಾ ಗುರುಗಳು ವೈಶಾಖ ಮಾಸದ ಪೂರ್ಣಿಮೆಯ ನಂತರ ಬರುವ ಗುರುವಾರದಂದು ಭಂಟನೂರ ಗ್ರಾಮದ ಕಲ್ಲಪ್ಪಗೂಳಿ ಸಾಹುಕಾರನ ಮನೆಗೆ ಹೋಗುವುದು ರೂಢಿ, ಪ್ರತಿ ಸಲದಂತೆ ಅವರು ಭಂಟನೂರ ಗ್ರಾಮಕ್ಕೆ ಆಗಮಿಸಿದರು. ಇದು ಸಿಂದಗಿ ತಾಲೂಕಾದ ಬಿಜಾಪೂರ ಜಿಲ್ಲೆಯ ಒಂದು ಹಳ್ಳಿ ಗುರುಗಳು ಒಂದು ವಾರದ ವರೆಗೆ ಅಲ್ಲಿದ್ದು ಅಲ್ಲಿಯ ಎಲ್ಲ ಭಕ್ತರ ಬಿನ್ನಹ

ಗಳನ್ನೂ ತೀರಿಸಿ ಮರಳಿ ಮಾಗಣಗೇರಿಗೆ ಹೊರಟರು. ಶಿವಲಿಂಗಪ್ಪ ಎಂಬವನು ಗಾಡಿ ಹೂಡಿಕೊಂಡು ಗುರುಗಳನ್ನು ಮಾಗಣಗೇರಿಗೆ ಕಳಿಸಿಬರಲು ಹೊರಟನು. ಶಿವಲಿಂಗಪ್ಪನೇ ಹೇಳಿದಂತೆ ಭಂಟನೂರದಿಂದ ಹೊರಡುವಾಗ ಆಕಾಶ ನಿರಭ್ರ ವಾಗಿ ಸೂರ್ಯ ಬಿಸಿಲು ಪ್ರಖರವಾಗಿತ್ತೆಂದು ಹೇಳುತ್ತಾನೆ. ಅಲ್ಲಿಂದ ಒಂದು ಹರದಾರಿ ಬಂದ ಬಳಿಕ ಸುಂಗಠಾಣ ಗ್ರಾಮದ ಸಮೀಪ ಎಲ್ಲಿಂದಲೋ ಜಮಾ ಯಿಸಿದ ಕರ್ರಗಿನ ಮೋಡ ಬಿರುಗಾಳಿಯನ್ನೆಬ್ಬಿಸಿತು. ಅಲ್ಲದೆ ಗುಡುಗು ಸಿಡಿಲು ಗಳ ಅರ್ಭಟ ಭಯಂಕರವಾಗಿ ಭಯಾನಕ ಸ್ಥಿತಿಯನ್ನು ನಿರ್ಮಾಣಮಾಡಿತು. ಎಲ್ಲಿ ಮೋಡ ಕುಸಿದು ಮೈಮೇಲೆ ಬೀಳುವದೋ ಏನೋ ಎಂಬಂತೆ ಭಯಗ್ರಸ್ಥ ನಾದ ಶಿವಲಿಂಗಪ್ಪ ಗುರುಗಳೇ ! ಇದೇ ಗ್ರಾಮದಲ್ಲಿ ನಿಂತುಬಿಡೋಣ ಮಳೆ ಬರುವದು ಖಂಡಿತ ಎಂದು ಅಂದಾಗ, ನೀನು ಹೆದರಬೇಡ ಶಿವಲಿಂಗ, ಗಾಡಿ ಹೊಡಿ ಮಳೆ ಬರುವದಿಲ್ಲ ನನ್ನನ್ನು ತೋಯಿಸುವ ಇಚ್ಛೆ ಮಳೆರಾಯನಿಗೆ ಇಲ್ಲ" ಎಂದು ಅಪ್ಪಣೆ ಕೊಡಿಸಿದರಂತೆ. ಮೂಕನಾಗಿ ಶಿವಲಿಂಗಪ್ಪ ಗಾಡಿ ಹೊಡಿಯು ತ್ತಲೇ ಇದ್ದ. ಬಂಡಿ ಮುಂದೆ ಮುರಡಿ ಗ್ರಾಮದ ಮೇಲಿಂದ ಖೈನೂರ ಗ್ರಾಮ ದಾಟಿದರೂ ಮಳೆ ಬೀಳುವ ಯಾವ ಗುರುತೂ ಇಲ್ಲ. ಕೇವಲ ಗುಡುಗು ಮಿಂಚು ಗಳ ಮೇಘಘರ್ಜನೆ ಕೇಳುತ್ತಿತ್ತು. ಮಾಗಣಗೇರಿಗೆ ಬಂದು ಗಾಡಿ ಇಳಿದು ತಲಬಾಗಿಲ ಒಳಗೆ ಗುರುಗಳು ಪಾದ ಹಾಕುತ್ತಲೇ ಮಳೆ ರಭಸದಿಂದ ಬೀಳಲು ಪ್ರಾರಂಭಿಸಿತು. ಬೆರಗಾದ ಶಿವಲಿಂಗಪ್ಪ ಅದನ್ನೇ ನೋಡುತ್ತ ನಿಂತುಬಿಟ್ಟ.

## ಗುರುವಚನ ಪರಿಪಾಲನೆ

ಗಟ್ಟಿಯಭಕ್ತ ಶಿರೋಮಣಿ ಬಸಪ್ಪನ ಸೊಸೆ ಸಿದ್ದಮ್ಮನಿಗೆ ಭಯಂಕರವಾದ ಪಿಶಾಚಿ ಹಿಡಿದುಕೊಂಡಿತ್ತು. ಇದು ಆ ಕುಟುಂಬದ ಸದಸ್ಯರೆಲ್ಲರಿಗೂ ಚಿಂತಾ ಜನಕವಾಗಿತ್ತು. ಪತಿ ಚನ್ನಬಸಪ್ಪನಿಗಂತೂ ತಿಳಿಯಲಾರದ ಮಗಟಾಗಿತ್ತು. ತಂದೆ ಬಸಪ್ಪ ತಾಯಿ ನೀಲಮ್ಮ ಹಾಗೂ ಚನ್ನಬಸಪ್ಪ ಎಲ್ಲರೂ ಕೂಡಿ ಸಿದ್ದಮ್ಮ ನನ್ನು ಎತ್ತಿನ ಬಂಡಿಯಲ್ಲಿ ಕೂಡ್ರಿಸಿಕೊಂಡು ಮಾಗಣಗೇರಿಯತ್ತ ನಡೆದರು. ಶಹಾಪೂರದಿಂದ ಮಳ್ಳಿಗೆ ಬರುವಷ್ಟರಲ್ಲಿ ಕತ್ತಲಾಯಿತು. ಅಲ್ಲದೆ ಸಿದ್ದಮ್ಮನಿಗೆ ಪಿಶಾಚಿಯ ಭಾದೆ ಅತೀ ಹೆಚ್ಚಾಗಿ ಸ್ಮೃತಿತಪ್ಪಿ ಬಿದ್ದುಕೊಂಡಳು. ನಾಲ್ಕಾರು

ದಿನಗಳಿಂದಲೂ ಸತತ ಕಾಡುತ್ತಿರುವ ಪಿಶಾಚಿ ಭಾದೆಯಿಂದಾಗ ಊಟ, ನೀರು, ಎಲ್ಲಾ ಬಿಟ್ಟು ಬಿಟ್ಟಿರುವ ಸಿದ್ಧಮ್ಮನವರು ಅತಿಯಾದ ಆಯಾಸದಿಂದಲೂ ಭಯಂಕರ ನೆರಳುವಿಕೆಯಲ್ಲಿ ಸಂಕಟ ಪಡುತ್ತ ಬೇಹುಷ ಆಗಲು ಎಲ್ಲರೂ ಗಾಬರಿಯಾದರು. ಆದರೂ ಗುರು ಚನ್ನವೃಷಭೇಂದ್ರರ ಮೇಲಿನ ವಿಶ್ವಾಷದಿಂದ ಧೈರ್ಯ ತಂದುಕೊಂಡು ಹೇಗೋ ರಾತ್ರಿಗಳೆದು ಬೆಳಗಿನ ಜಾವದಲ್ಲಿಯೇ ಮತ್ತೆ ಬಂಡಿ ಹೊಡಿಕೊಂಡು ಮಳ್ಳಿಯಿಂದ ಮಾಗಣಗೇರಿಯ ಮಾರ್ಗ ಹಿಡಿದರು. ಮಾಗಣಗೇರಿಯ ಸೀಮೆಯಲ್ಲಿ ಹೆಜ್ಜೆ ಹಾಕುತ್ತಲೇ ಭೂತ ಮಾಯವಾಗಿ ಸಿದ್ದಮ್ಮ ಎಂದಿನಂತೆ ಹುಷಾರಾಗಿ ಎದ್ದು ಕುಳಿತಳು. ಮಠಕ್ಕೆ ಬಂದು ಗುರುಗಳ ದರ್ಶನಭಾಗ್ಯ ಪಡೆದೊಡನೆಯೇ ಗುರುಗಳು ಎಲ್ಲರ ಯೋಗಕ್ಷೇಮದ ಬಗ್ಗೆ ವಿಚಾರಿಸಿ ಎಲ್ಲರಿಗೂ ಹಾಲು ಕೊಡುವಂತೆ ತಂಗಿ ಗುರುಲಿಂಗಮ್ಮನಿಗೆ ಹೇಳಿದರು. ಭಕ್ತ ಬಸಪ್ಪ ನಡೆದ ಸಮಾಚಾರವನ್ನು ಹೇಳಿ ಹೇಗಾದರೂ ಮಾಡಿ ಸಿದ್ಧಮ್ಮನನ್ನು ಉಳಿಸು ತಂದೆ ಎಂದು ದುಃಖಿಸತೊಡಗಿದನು. "ಆಗ ಗುರುಗಳು ಸಾಂತ್ವಾನ ಮಾಡಿದರು." ಅದು ಹೇಗೆ ಇಲ್ಲಿಯ ವರೆಗೆ ಬಂತೋ ಶೀಮೆಯಲ್ಲಿಯೇ ಭೂತ ಪಿಶಾಚಿಗಳನ್ನು ಕಟ್ಟಿ ಹಾಕಿರುವೆ ? ಎಂದು ಅಂದರು ಅದರಂತೆ ಶೀಮೆಗೆ ಬಂದೊಡನೆಯೇ ಎಚ್ಚರಾದ ವಿಷಯವನ್ನು ತಿಳಿಸಿದನು. ಭೂತಚೇಷ್ಟೆಯ ಪರಿಹಾರಕ್ಕಾಗಿ ಯಾವಕ್ರಮ ಕೈಕೊಳ್ಳಬೇಕೋ ಅದನ್ನು ಆಗಲೇ ಗುರುಗಳು ನಿರ್ವಹಿಸಿ ಸಿದ್ಧಮ್ಮನಿಗೆ ಎಂದೂ ಬರಲಾರದಂತೆ ಮಾಡಿದರು.

ನಂತರ ಸಿದ್ಧಮ್ಮನಿಗೆ (ಚನ್ನಬಸಪ್ಪ) ತಮ್ಮ ಹಾಗೂ ಕಾಶೀ ಅನ್ನಪೂರ್ಣಾರವರ ಕೃಪಾಶೀರ್ವಾದಗಳಿಂದ ಒಂದು ಹೆಣ್ಣು ಮಗು ಹುಟ್ಟಿದೆ ಆ ಹೆಣ್ಣು ಮಗುವಿನ ತರುವಾಯ ಮತ್ತೆ ಮಕ್ಕಳಾಗಿರಲಿಲ್ಲ ವ್ಯಾಪಾರದ ಬೆಳವಣಿಗೆಗಾಗಿ ಶಹಾಪೂರದಲ್ಲಿ ಮನೆ ಮಾಡಿಕೊಂಡು ಇರುತ್ತಿರುವೆ ಮತ್ತೆ ಗುರುಗಳಲ್ಲಿ ಗಂಡು ಸಂತಾನಕ್ಕಾಗಿ ಅರಿಕೆ ಮಾಡಿಕೊಂಡರು. ನಿಧಾನವಾಗಿ ವಿಚಾರಿಸುತ್ತ ಕುಳಿತು ಗುರುಗಳು ಭಕ್ತೆ ಸಿದ್ಧಮನನ್ನುದ್ದೇಶಿಸಿ ಏನಮ್ಮ ! ನಿನ್ನ ಗಂಡನಿಗೆ ಇನ್ನೊಂದ್ಮ ಲಗ್ನ ಮಾಡು ಎಂದು ಅಪ್ಪಣೆ ಕೊಡಿಸಿದರು ಇಬ್ಬರಿಗೂ ಸಂತಾನವಾಗುವದು ನಿನಗೆ ಸವತಿಯ ಮೇಲೆ ಗಂಡು ಮಕ್ಕಳಾಗುವವು ಎಂದು ಚನ್ನಬಸಪ್ಪನಿಗೂ ಹಾಗೂ ಸಿದ್ಧಮ್ಮನಿಗೂ ಹೇಳಿ ಕಳುಹಿಸಿಕೊಟ್ಟರು. ತಮ್ಮ ಪತಿಗೆ ಎರಡನೇ ಲಗ್ನ ಮಾಡಲು ವಪ್ಪದ ಸಿದ್ಧಮ್ಮನವರು ಚಿಂತೆಗೊಳಗಾದರು ಮತ್ತೊಮ್ಮೆ

ತನ್ನ ತಾಯಿಯವರನ್ನು ಕರೆದುಕೊಂಡು ಪುನಃ ಅದನ್ನೇ ಕೇಳಿಕೊಂಡರು ಆಗಲೂ ಅದೇ ಉತ್ತರ ಬಂದಿತು ಸಿದ್ದಮ್ಮನವರ ತಾಯಿ ಇಂತೆಂದಳು ನಾವು ಕಲಬುರ್ಗಿಯ ಶರಣಬಸವೇಶ್ವರನ ಗುಡಿಗೆ ಹೋಗಿದ್ದು ಅವರು ಒಂದು ಟೆಂಗಿನ ಕಾಯಿ ಕೊಟ್ಟಿರುವರು ಎಂದು ಹೇಳಿದರು ಅದಕ್ಕೆ ಗುರುಗಳು "ನೀವು ಬಲ ಅವರು ಬಲ" ಎಂದಿಷ್ಟೇ ಅಂದು ಸುಮ್ಮನಾದರು ಮುಂದೆ ಚನ್ನಬಸಪ್ಪನು ಅನುಗ್ರಹ ತೆಗೆದುಕೊಳ್ಳಬೇಕೆಂಬ ಬಲವಾದ ಬಯಕೆ ಹೆಚ್ಚಿತು ನಯ ವಿನಯದಿಂದ ಗುರುಗಳಲ್ಲಿ ತನ್ನ ಅಳಲನ್ನು ತೋಡಿಕೊಂಡನು ಅದಕ್ಕೆ ಗುರುಗಳು ಸಂತೋಷರಾಗಿ ಈ ರೀತಿ ಅಪ್ಪಣೆ ಕೊಡಿಸಿದರು ನೀನು ಮಾಘ ಮಾಸ ಶುದ್ಧ ಚತುರ್ದಶಿ ಗುರುವಾರ ಪುಷ್ಯ ನಕ್ಷತ್ರದಂದು ಬಾ ನಿನಗೆ ಅನುಗ್ರಹ ಉಪದೇಶ ಮಾಡುವೆ ಎಂದು ಆಶೀರ್ವಾದ ಮಾಡಿದರು. ಇದನು ಕೇಳಿಕೊಂಡು ಚನ್ನಬಸಪ್ಪ ತಿರುಗಿ ಶಹಾಪೂರಕ್ಕೆ ಬಂದು ಗುರುಗಳು ಹೇಳಿದ ವೇಳೆಯ ಹಾದಿ ಕಾಯುತ್ತ ಕುಳಿತನು ಅಷ್ಟರಲ್ಲಿಯೇ ಅಂದರೆ ಮಾಘಮಾಸ ಬರುವದರಲ್ಲಿಯೇ ಶಿವನ ಕರೆಗೆ ಓಗೊಟ್ಟು ಗುರುಗಳು ಮಾರ್ಗಶಿರ ಬಹುಳ ನವಮಿಯ ದಿನದಂದು ಲಿಂಗೈಕ್ಯರಾದರು ಆ ಎಲ್ಲ ಕೆಲಸಗಳು ಹಾಗೆ ನಿಂತಬಿಟ್ಟವು.

ಮುಂದೆ ಗುರುಗಳ ಲಿಂಗಸ್ಥಾಪನೆಯ ತರುವಾಯ ಚನ್ನಬಸಪ್ಪ ಗುರುಗಳ ಮೊದಲಿನ ಆ ಜ್ಞಾನುಸಾರ ಅವರ ಗದ್ದುಗೆಯ ಸಮ್ಮುಖದಲ್ಲಿಯೇ ಅವರ ಆಶೀರ್ವಾದದ ಬಲದಿಂದ ಸಂಕಲ್ಪ ಅನುಗ್ರಹ ಪಡೆದರು ಅವರು ಲಿಂಗೈಕ್ಯರಾದ ಮೇಲೂ ಅವರಿಗೆ ಕೊಟ್ಟ ವಚನ ಪಾಲಿಸಿದರು. ಅಲ್ಲದೆ ಅವರ ಧರ್ಮಪತ್ನಿ ಸಿದ್ದಮ್ಮನವರೂ ಕೂಡಾ ಉಪದೇಶ ಹೊಂದಿದರು.

## ಗುರುಗಳ ಅನುಗ್ರಹ

ಚಬನೂರದ ಬಾಲಪ್ಪಗೌಡರು ಒಮ್ಮೆ ತಮ್ಮ ಊರಿಂದ ಪರ ಊರಿಗೆ ಹೋಗುವಾಗ ಗಾಡಿಯಿಂದ ಬಿದ್ದು ಕಾಲು ಮುರಿದುಕೊಂಡರು. ಅತೀವ ನೋವಿನಿಂದ ನರಳುತ್ತ ಮನೆಯಲ್ಲಿ ಮಲಗಿದರು. ಗುರುಗಳಿಂದ ಅನುಗ್ರಹ ಪಡೆದವನ್ನು ಗುರುಗಳು ಲಿಂಗೈಕ್ಯರಾದ ತರುವಾಯ ಅವರನ್ನು ಮರೆತೇ ಗೌಡರು ಬೇರೆ ಉಪಚಾರಗಳನ್ನೇ ಮಾಡಿಸಿದರೂ ಗುಣವಾಗದೇ ತಡಪಡಿಸುತ್ತಿರುವಾಗ ಒಂದುದಿನ

ರಾತ್ರಿ ಗುರುಗಳ ಧ್ಯಾನ ಮಾಡುತ್ತ ಶಾಂತಚಿತ್ತದಿಂದ ಮಲಗಿದ್ದರು. ಗುರುಗಳು ಕನಸಿನಲ್ಲಿ ಬಂದು ನಿನ್ನ ಕಾಲು ಹತ್ತುವುದು ಏನೂ ಚಿಂತಿಸಬೇಡವೆಂಧು ಹೇಳಿದಂತಾಗಲೂ ಗೌಡರು ಫಕ್ಕನೇ ಎಚ್ಚತ್ತು ಪಶ್ಚಾತ್ತಾಪ ಪಟ್ಟರು. ಎಂಥ ಕಷ್ಟದಲ್ಲಿಯೂ ಕೂಡಾ ನಾನು ಗುರುಗಳನ್ನು ಮರೆತದ್ದು ಮಹಾಪರಾಧವಾಯಿತೆಂದು ಪುನಃ ಪುನಃ ಗುರುಗಳನ್ನು ಭಕ್ತಿಯಿಂದ ಧ್ಯಾನಿಸುತ್ತ ಮಲಗಿದರು. ಮುಂದೆ ಕೆಲ ದಿನಗಳಲ್ಲಿಯೇ ನೋವು ಕಡಿಮೆಯಾಗಿ ಕಾಲು ಹತ್ತಿಕೊಂಡಿತು. "ನಂಬಿ ಕರೆದೊಡೆ ಓ ಎನ್ನನೇ ಶಿವನು" ಎನ್ನುವಂತೆ ನಂಬಿದ ಭಕ್ತರ ಕಾಯುವನೆಂಬ ಸಿದ್ಧಾಂತಕ್ಕನುಗುಣವಾಗಿ ಈಗಲೂ ನಂಬಿರುವ ಭಕ್ತರ ಇಷ್ಟಾರ್ಥಗಳನ್ನು ಕೈಗೂಡಿಸುತ್ತಲೇ ಇದ್ದಾರೆ. ಗುರುಗಳ ನಂಬಿ ಬರುವ ಭಕ್ತರಿಗೆ ಯಾವ ಯಾವ ಪರಿಹಾರಗಳು ಬೇಕೋ ಸಂಕಲ್ಪ ಮಾಡಿಕೊಂಡು ಬಂದರೆ ಈಗಲೂ ಪರಿಹಾರ ದೊರೆಯುತ್ತದೆ. ಅವರು ಬಂದು ಗದ್ದುಗೆಗೆ ನಮಸ್ಕರಿಸಿ ಗುಡಿಯ ಪ್ರದಕ್ಷಿಣೆ ಹಾಕಿ ಹೋಗುವುದೇ ತಡ ಅವರ ಇಷ್ಟಾರ್ಥಗಳು ನೆರವೇರುವವು. ಗುರು ಚನ್ನವೃಷಭೇಂದ್ರರ ಭಕ್ತವೃಂದ ಈಗಲೂ ಪ್ರತಿ ಅಮವಾಸಿಗೊಮ್ಮೆ, ಗುರುವಾರ, ರವಿವಾರಗೊಮ್ಮೆ ಬಂದು ತಮ್ಮ ತಮ್ಮ ಇಷ್ಟಾರ್ಥಗಳನ್ನು ನಿವೇದಿಸಿಕೊಂಡು ಹೋಗುವರು. ತಂತಮ್ಮ ಮನಸ್ಸಿನಲ್ಲಿಯೇ ಸಂಕಲ್ಪ ಮಾಡಿಕೊಂಡು ಹೋಗುವರು. ಅವೆಲ್ಲ ನೆರವೇರಿದರೆ ತಾನೇ ಪ್ರತಿ ಅಮವಾಸಿಗೊಮ್ಮೆ, ಗುರುವಾರ, ರವಿವಾರಕೊಮ್ಮೆ ಬಂಡಿ ಕಟ್ಟಿಕೊಂಡು, ಪಾದಚಾರಿಯಾಗಿ ಭಕ್ತರು ಬರುವರು.

## ಸ್ಮರಣ ಮಾತ್ರದಿಂದ ರೋಗ ನಿವಾರಣೆ

ಕೇವಲ ಗುರುವರ್ಯರ ಧ್ಯಾನಮಾಡಿ ಮಗನ ಹೊಟ್ಟೆಕಡಿತ ಕಳೆದ ಮಹಾನ್ ಘಟನೆ ಇಲ್ಲಿ ವರ್ಣಿಸಲಾಗಿದೆ.

ಬಿಜಾಪೂರ ಜಿಲ್ಲೆಯ ತಾಲೂಕಾ ಸಿಂದಗಿ ಗ್ರಾಮದಲ್ಲಿ ಅತ್ಯಂತ ಪ್ರಮುಖರೂ ಶ್ರೀಮಂತರೂ ಆದ ಘನಲಿಂಗಪ್ಪ ಬಮ್ಮಣ್ಣಿ ಇವರ ಮಗನಿಗೆ ಅಸಾಧ್ಯವಾದ ಹೊಟ್ಟೆನೋವು ಇತ್ತು. ಅವರು ಅನೇಕ ವೈದ್ಯರಲ್ಲಿಯೂ ಪಂಡಿತರಲ್ಲಿಯೂ ತೋರಿಸಿದ್ದರು. ಅಲ್ಲದೆ ದವಾಖಾನೆಗೂ ತೋರಿಸಿ ಬೇಸತ್ತಿದ್ದರು. ಆದರೂ ಭಯಂಕರ ರೋಗ ಗುಣವಾಗದೇಹೋಯಿತು. ಮಗನ ಈ ದಾರುಣ

ಸ್ಥಿತಿಯನ್ನು ಕಂಡು ಚಿಂತಾಕ್ರಾಂತರಾದ ಫನಲಿಂಗಪ್ಪನವರು ನಮ್ಮ ಗುರು ಚನ್ನ ವೃಷಭೇಂದ್ರ ಮಹಾ ಸ್ವಾಮಿಗಳವರಲ್ಲಿ ಸದಾ ಬರ ಹೋಗುತ್ತಿದ್ದರು. ಅವರ ಮಹಿಮೆಯನ್ನು ಅರಿತಿದ್ದರು. ಅವರ ನೆನಪಾದ ಕೂಡಲೇ ತುಂಬಿದ ಕೊಡ ಪಲ್ಲಿಯ ನೀರು ತೆಗೆದುಕೊಂಡು ಬಂದು ಎರಡನ್ನೂ ಮಿಶ್ರಣ ಮಾಡಿ ಕುಡಿಸಿದರು. ಮಾಗಣಗೇರಿಯ ಗುರುಗಳವರ ಧ್ಯಾನ ಮಾಡುತ್ತ ಕುಡಿಸಿದಾಕ್ಷಣಕ್ಕೆ ಕುಮಾರ ಶಿವಾನಂದ ಬಮ್ಮಣ್ಣಿಯ ರೋಗ ನಿವಾರಣೆಯಾಗಿ ಸುಖವಾಗಿ ಬೆಳೆದು ದೊಡ್ಡವ ನಾವನು. ಅಲ್ಲದೇ ಈಗ ಪ್ರಸಿದ್ಧ ಡಾಕ್ಟರರಾಗಿದ್ದಾರೆ. ಮತ್ತು ಸಮಾಜ ಸೇವಾ ಧುರೀಣರೂ ಆಗಿ ಬೆಳಗುತ್ತಿದ್ದಾರೆ. ಕೇವಲ ಸ್ಮರಣ ಮಾತ್ರದಿಂದ ಅನೇಕರಿಗೆ ಬೇಡಿದ್ದ ವರವನ್ನು ಕೊಟ್ಟು ಕಾಪಾಡಿದ್ದಾರೆ.

## ಅಮರಪ್ಪ ಬದುಕಿದ

ಸಿಂದಗಿ ತಾಲೂಕಿಗೆ ಸೇರಿದ ಹೊನ್ನಳ್ಳಿ ಗ್ರಾಮದಲ್ಲಿ ಗುರುಲಿಂಗಪ್ಪ ಧ್ಯಾನಪ್ಪ ಹೆಬ್ಬಾಳ ಎಂಬೀ ದಂಪತಿಗಳು ವಾಸವಾಗಿದ್ದರು. ಅವರಿಗೆ ಅಮರಪ್ಪನೆಂಬ ಮಗನಿದ್ದನು. ಅಮರಪ್ಪನಿಗೆ ಅದೇನೋ ರೋಗ ಆವರಿಸಿ ಚಡಪಡಿಸುತ್ತಿದ್ದನು. ಕಣ್ಣುಗಳು ನಿಸ್ತೇಜವಾಗಿದ್ದವು. ಶರೀರದಲ್ಲಿ ತ್ರಾಣವಿಲ್ಲದೆ ಹೋಯಿತು. ನಿಲ್ಲಲು ಆಗುತ್ತಿರಲಿಲ್ಲ. ರಾತ್ರಿ ಹಗಲು ಬಂತೂ, ಬಂತೂ, ಹೋಯಿತು, ಹೋಯಿತು, ನನ್ನನ್ನು ಏನೋ ನುಂಗಲಿಕ್ಕೆ ಬಂದಿದೆ ಎಂದು ಭಾವೋದ್ವೇಗದಿಂದ ಬಡಬಡಿಸುತ್ತಿದ್ದನು. ಅಮರಪ್ಪನ ಸ್ಥಿತಿಯನ್ನು ಕಂಡು ಇನ್ನು ಉಳಿಯಲಾರನೆಂದು ಗುರುಲಿಂಗಪ್ಪ ರೋಧಿಸತೊಡಗಿದನು. ಇದನ್ನು ಕೇಳಿ ಅವರ ಮಾವನಾದ ಕಾಚಾಪೂರದ ಗುರುಲಿಂಗಪ್ಪ ಬಿರೇದಾರನು ಹೊನ್ನಳ್ಳಿಗೆ ಹೋಗಿ ಅಮರಪ್ಪನ ಸ್ಥಿತಿಯನ್ನು ನೋಡಿದನು. ಆಗ ಮಾಗಣಗೇರಿಗೆ ಹೋಗೋಣ ನಮ್ಮ ಗುರುಗಳಿದ್ದಾರೆ ಅವರಿಗೆ ತೋರಿಸೋಣವೆಂದು ಹೇಳಿ ಅಮರಪ್ಪನನ್ನು ಕರೆದುಕೊಂಡು ಮಾಗಣಗೇರಿಯ ಮಠಕ್ಕೆ ಬಂದರು. ಗುರುಗಳವರನ್ನು ಕಂಡು ಅವರ ದುಃಖ ಮತ್ತಿಷ್ಟು ಪತ್ತರಿಸಿ ಬಂತು. ಹಡೆದ ಕರುಳಲ್ಲವೆ ? ಬಿಕ್ಕಿ ಬಿಕ್ಕಿ ಅಳುವವನ್ನು ಕಂಡು ಮಹಾಸ್ವಾಮಿಗಳವರು ವಿಚಾರಿಸಿದರು. ಅಮರಪ್ಪ ನಿಶ್ಚೇಷ್ಟಿತನಾಗಿ ಮಲಗಿಕೊಂಡಿದ್ದನು. ಅವನಿಗೆ ಯಾವ ಪ್ರಜ್ಞೆಯು ಕೂಡಾ ಇರಲಿಲ್ಲ ಗುರು

ಗಳು ಅಮೃತ ಹಸ್ತದಿಂದ ಸ್ಪರ್ಶಿಸಿದರು. ಗುರುಲಿಂಗಪ್ಪ ನೀನೇನೂ ಚಿಂತೆ ಮಾಡಬೇಡ ಅಮರಪ್ಪನಿಗೆ ಏನೂ ಆಗುವದಿಲ್ಲ ಗುರು ತೋಂಟದಾರ್ಯನು ಒಳ್ಳೆಯದು ಮಾಡುತ್ತಾನೆ ಎಂದು ಸಮಾಧಾನ ಹೇಳಿದರು. ಯಾರ ಮುಖದಲ್ಲಿಯೂ ಆಶೆ ಆಕಾಂಕ್ಷೆ ಗೆಲವು ಇರಲಿಲ್ಲ. ಅಮರಪ್ಪ ಮತ್ತಷ್ಟು ಅಚೇತನವಾಗಿ ಬಿದ್ದುಬಿಟ್ಟಿದ್ದನು.

ಶ್ರೀಗುರು ಚನ್ನವೃಷಭೇಂದ್ರ ಮಹಾಸ್ವಾಮಿಗಳು ಅಮರಪ್ಪನಿಗೆ ಸ್ನಾನ ಮಾಡಿಸಿ ಮಡಿಬಟ್ಟೆ ತೊಡಿಸಿ ಗುರುಮಠದ ಕೋಣೆಯಲ್ಲಿ ಮಲಗಿಸಿ ಹೊರಗೆ ಬನ್ನಿರಿ ಎಂದು ಹೇಳಿದರು. ಗುರುಗಳವರ ಅಪ್ಪಣೆಯಂತೆ ಮಾಡಿ ಹೊರಗೆ ಬಂದರು. ಗುರುಗಳು ಸ್ನಾನ ಮುಗಿಸಿಕೊಂಡು ಗುರುಮಠದಲ್ಲಿ ಹೋಗಿ ಬಾಗಿಲು ಹಾಕಿಕೊಂಡು ಅಮರಪ್ಪನ ಶರೀರಕ್ಕೆಲ್ಲಾ ವಿಭೂತಿ ಲೇಪಿಸಿ ಪಾದೋದಕ ಹಾಕಿ ಪದ್ಮಾಸನ ಹಾಕಿಕೊಂಡು ಯೋಗ ಸಮಾಧಿಯಲ್ಲಿ ಕುಳಿತರು. ಗುರುಮಠದ ಬಾಗಿಲ ಹತ್ತಿರ ಗುರುಲಿಂಗಪ್ಪ ದ್ಯಾಮವ್ವ ದಂಪತಿಗಳು ಭಯ ಭಕ್ತಿಯಿಂದ ಕೈಮುಗಿದು ಗುರುಧ್ಯಾನ ಮಾಡುತ್ತ ಕುಳಿತುಕೊಂಡರು. ಈ ಎಲ್ಲ ಘಟನೆ ವೀಕ್ಷಿಸುತ್ತಿದ್ದರು.

ಗುರುಗಳು ಯೋಗ ಸಮಾಧಿಯಿಂದ ಎಚ್ಚೆತ್ತು ಅಮರಪ್ಪನ ಮೇಲೆ ಕೈಯಾಡಿಸಿದರು. ಆಗ ಅಮರಪ್ಪನು ಕಣ್ತೆರೆದು ನೋಡಿದನು ಗುರುಗಳು ಅಮರಪ್ಪನನ್ನು ಕರೆದುಕೊಂಡು ಗುರುಮಠದಿಂದ ಹೊರಗೆ ಬರುವದನ್ನು ನೋಡಿ ದಂಪತಿಗಳಿಬ್ಬರು ಹರುಷ ಆನಂದ ಸಾಗರದಲ್ಲಿ ತೇಲಾಡಿದರು. ಎಲ್ಲೀಗೂ ಹಿಗ್ಗಿನ ಸುದ್ದಿಯಾಯಿತು. ಅಮರಪ್ಪ ಬದುಕಿದ; ಅಮರಪ್ಪ ಬದುಕಿದ; ಎಂದು ಸುತ್ತ-ಮುತ್ತಲ್ಲ ಸುದ್ದಿ ಹರಡಿತು ಇದೊಂದು ಪವಾಡವಲ್ಲದೆ ಮತ್ತೇನು ? ಈ ಸಮಾಚಾರ ಊರಲ್ಲಿ ಪಸರಿಸಿತು. ಎಲ್ಲರಿಗೂ ಆಶ್ಚರ್ಯವಾಯಿತು. ಸಂತೋಷದಿಂದ ಅಮರಪ್ಪನನ್ನು ಅಪ್ಪಿ ಗುರುಚರಣ ಕಮಲಗಳಿಗೆ ನಮಸ್ಕರಿಸಿ ಆಶೀರ್ವಾದ ಪಡೆದುಕೊಂಡು ಹೋದರು.

ಗುರುಕೃಪೆ ಇದ್ದರೆ ಯಾವ ಸಂಕಷ್ಟಗಳೂ ಮಾನವನನ್ನು ಬಾಧಿಸಲಾರವು "ಹರ ಮುನಿದರೆ ಗುರು ಕಾಯುವನೆಂಬ" ಮಹನೀಯರ ಉಕ್ತಿಯಂತೆ ಸದ್ಭಕರಾದವರು ಉಕ್ತಿಯ ನುಡಿಮುತ್ತುಗಳನ್ನು ಸವಿದು ಅಚಲ ಶ್ರದ್ಧೆಯಿಂದ ನಡೆದು

ದಾದರೆ ಎಲ್ಲ ಸಂಕಷ್ಟಗಳು ದೂರವಾಗಿ ಸೂಸಾಗರವಾಗಿ ಪರಿಣಮಿಸುವದರಲ್ಲಿ ಸಂಶಯವಿಲ್ಲ.

## ಭಕ್ತನ ಸಾಲವೇ ಗುರುಕಾಣಿಕೆ ಎಂದು ಸ್ವೀಕರಿಸಿದ ಮಹಾನ್‌ಗುರು

ಕಲಕೇರಿ ಗ್ರಾಮದಲ್ಲಿ ಮಡಿವಾಳಪ್ಪ ಸಗರ ಸಾಹುಕಾರನೆಂಬಾತನು ಹದಿನೈದು ಇಪ್ಪತ್ತು ವರ್ಷಗಳಿಂದ ಕಲಕೇರಿ ಗ್ರಾಮದಲ್ಲಿಯೇ ವಾಸಮಾಡಿಕೊಂಡು ಎತ್ತಿನ ಗಾಣ ಮತ್ತು ಕಿರಾಣಿ ಅಂಗಡಿ ಮಾಡಿಕೊಂಡು ನಾಲ್ಕು ಜನರಲ್ಲಿ ಹೆಸರು ಗಳಿಸಿದ್ದನು. ಹೀಗಿರುತ್ತಿರಲಾಗಿ ದುರದೃಷ್ಟವಶಾತ್ ವ್ಯಾಪಾರದಲ್ಲಿ ಲುಕ್ಸಾನಾಗಿ ಅಂಗಡಿ ಮುಚ್ಚಿ ಸಾಲಿಗರು ಕೊಡುವ ತ್ರಾಸಿಗೆ ಅತ್ತಿತ್ತ ಅಲೆದಾಡತೊಡಗಿದನು ಮನೆಯಲ್ಲಿ ಹೆಂಡತಿ ಮಕ್ಕಳು ಊಟಕ್ಕೆ ಏನೂ ಇಲ್ಲದಂತಾಗಿ ಒಪ್ಪತ್ತಿನ ಗಂಜಿಗೂ ಇಲ್ಲದಂತಾಯಿತು. ಇಂಥ ದುರ್ಘರ ಪ್ರಸಂಗ ಆತನಿಗೆ ಬಂದೊದಗಿತು,

ಪರಿ ಪರಿಯಿಂದಾ ದೇವಾ ನನ್ನ ಕಷ್ಟಗಳನ್ನು ದೂರ ಮಾಡು ಎಂದು ಪ್ರತಿನಿತ್ಯ ದೇವರನ್ನು ಬೇಡಿಕೊಳ್ಳಲಾರಂಭಿಸಿದನು. "ಧೀನರಿಗೆ ದೇವರೆ ದಿಕ್ಕಲ್ಲದೇ ಮತ್ತಾರು" ಉಣ ಉಡುವ ಧನ ಕನಕಾದಿ ವೃದ್ಧಿ ಇದ್ದರೆ ಈ ಪ್ರಪಂಚದಲ್ಲಿ ಎಲ್ಲ ಬಂಧು-ಭಾಂಧವರು ಇಲ್ಲದಿರೆ ಎಲ್ಲರೂ ಬೇರೆಯವರೆ ತನ್ನಲ್ಲಿ ವಿಚಾರ ಮಗ್ನತೆಯಿಂದ ಅಲೆಯತೊಡಗಿದನು. ಹೀಗೆ ಅಲೆಯುತ್ತಿರಲಾಗಿ ಕಲಕೇರಿ ಸಮೀಪದ ಅಸ್ಕಿ ಎಂಬ ಗ್ರಾಮದಲ್ಲಿ ವೈದ್ಯಕೀ ವೃತ್ತಿಯಲ್ಲಿ ಕಾಲ ಕಳೆಯುತ್ತಿದ್ದ ಬಸವಂತ್ರಾಯ ಸಿಂದಗೀರಿ ಎಂಬಾತ ಮಡಿವಾಳಪ್ಪನಿಗೆ ಭೆಟ್ಟಿಯಾಯಿತು. ಕಷ್ಟ ಸಂಕಷ್ಟಗಳನ್ನು ಯಾರಾದರೂ ಭೆಟ್ಟಿಯಾದಾಗ ತೋಡಿಕೊಳ್ಳುವುದು ಸಾಂಪ್ರದಾಯಿಕವಾಗಿ ಬಂದ ಪದ್ಧತಿ. ಅದೇ ಪ್ರಕಾರವಾಗಿ ಬಸವಂತ್ರಾಯ ಡಾಕ್ಟರನ ಮುಂದೆ ಹೃದಯ ಬಿಚ್ಚಿ ಎಲ್ಲಾ ತನ್ನ ಕಷ್ಟದ ಕಥೆಯನ್ನು ಹೇಳಿದನು. ಆಗ ಆತನ ಕರುಣಾಜನಕ ಕಥೆಯನ್ನು ಕೇಳಿ ಕಳವಳಗೊಂಡು ಕರಗಿ ನೀರಾದರು. ಹಾಗೂ ಹಿರಿಯರು ಹೇಳಿದ "ಗುರು ಕರುಣದಿಂದಧಿಕ ಸುಧೆಯುಂಟೆ ಜಗದೊಳ್" ಎಂದು ಹೇಳಿ ಸಂತೈಸಿ ಕರುಣೆಯ ಕಕ್ಕುಲತೆಯಿಂದ

ಆತನಿಗೆ ಉಪಚರಿಸಿ ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಅಂದು ರಾತ್ರಿ ಬಸವಂತ್ರಾಯ ಡಾಕ್ಟರರು ಶ್ರೀ ಗುರು ಚನ್ನವೃಷಭೇದ್ರ ಮಹಾಸ್ವಾಮಿಗಳವರ ತಪೋನಿಧಿಗಳ ಅನಂತ ಲೀಲೆಯಲ್ಲಿ ಗೈದ ಪವಾಡಗಳನ್ನು ಬಿಚ್ಚು ಹೃದಯ ದಿಂದ ಗುರು ಕರುಣೆ ಹೊಂದಿದ ಬಸವಂತ್ರಾಯ ಡಾಕ್ಟರರು ಪ್ರತ್ಯಕ್ಷ ತನ್ನ ಕಣ್ಣಾರೆ ಕಂಡ ಲೀಲೆಗಳನ್ನು ತುಂಬು ಹೃದಯದಿಂದ ತನ್ನ ಗುರು ಸ್ಮರಣೆಯಲ್ಲಿ ಹೇಳಲಾರಂಭಿಸಿದರು. ಎಲ್ಲಾ ಲೀಲಾ ಕಥೆಗಳನ್ನು ಕೇಳಿ ಮಡಿವಾಳಪ್ಪ ಸಾಹುಕಾರ ಭಾವೋದ್ರೇಕದಿಂದ ಗುರುಗಳು ಎಲ್ಲರನ್ನೂ ಉದ್ಧರಿಸಿದಂತೆ ನನ್ನನ್ನೂ ಉದ್ಧರಿಸೆಂದು ಬಿದ್ದು ಬಿಟ್ಟನು ನಂತರ ಆತನನ್ನು ಎಬ್ಬಿಸಿ ಈಗ ಶ್ರಾವಣ ಮಾಸ ನಾಳೇ ಸೋಮವಾರ ಗುರುಗಳ ದರ್ಶನಕ್ಕೆ ಹೋಗೋಣವೆಂದು ನಿರ್ಧರಿಸಿ ಮಲಗಿಕೊಂಡರು.

ಬೆಳಿಗ್ಗೆ ಐದು ಘಂಟೆಗೆ ಎದ್ದು ಇಬ್ಬರೂ ಸ್ನಾನ ಸಂಧ್ಯಾವಂದನೆ ಮುಗಿಸಿ ಕೊಂಡು ಗುರುಗಳ ದರ್ಶನ ಯಾವಾಗ ಆದೀತು ಎಂಬ ಉದ್ವೇಗದಿಂದ ಎತ್ತಿನ ಗಾಡಿಯಲ್ಲಿ ಕುಳಿತುಕೊಂಡು ಮಾಗಣಗೇರಿ ಗ್ರಾಮಕ್ಕೆ ಗುರು ಸನ್ನಿ-ಧಾನಕ್ಕೆ ಬಂದರು. ಆಗ ಮುಂಜಾನೆ ಹತ್ತು ಹನ್ನೊಂದು ಘಂಟೆಯಾಗಿರ-ಬಹುದು. ಗುರುಗಳು ಇನ್ನೂ ಶಿವಪೂಜಾಧ್ಯಾನಸ್ಥರಾಗಿದ್ದರು. ಶ್ರಾವಣ ಕಡೆಯ ಸೋಮವಾರವಾಗಿದ್ದರಿಂದ ಸದ್ಭಕ್ತರಾದ ಹಾಗೂ ನೆಚ್ಚಿನ ಸತ್ಪುರುಷ ಹಾಗೂ ಶರಣರಾದ ಶ್ರೀ ಬಸಯ್ಯಪ್ಪನವರು ಶ್ರೀ ಕಂತೆಪ್ಪ ಕೆಂಭಾವಿ (ಕೋಡಿ ಹಾಳ) ಇನ್ನೂ ಅನೇಕ ಶ್ರೀಮಂತ ಭಕ್ತರು ಸಾವಿರಾರು ಮೈಲು ದೂರದಿಂದ ಬಂದಿದ್ದರು. ಹಾಗೂ ಸುತ್ತ ಮುತ್ತಲಿನ ಗ್ರಾಮದ ಶಿಷ್ಯ ಮಂಡಳಿಯವರು ಬಂದಿದ್ದರು ಶ್ರಾವಣ ಮಾಸದಲ್ಲಿ ಗುರುಗಳ ದರ್ಶನಕ್ಕೆ ಹೋದರೆ ಶಿವನ ಸಭೆಯಲ್ಲಿ ಋಷಿ ವೃಂದ ಹಾಗೂ ದೇವ ದೇವತೆಗಳಿಂದೊಡಗೂಡಿದ ಕೈಲಾಸದಲ್ಲಿ ಶ್ರೀ ಪಾರ್ವತಿ ಪರಮೇಶ್ವರನ ಸಭೆ ಕಂಡಂತೆ ಕಾಣಿಸುತ್ತಿತ್ತು.

ಪೂಜೆಯಿಂದೆದ್ದು ಶ್ರೀ ಗುರುಗಳು ಅಂತಃಕರುಣ ತಮ್ಮ ಕೃಪಾಕಟಾಕ್ಷ ವನ್ನು ತಮ್ಮ ಎಲ್ಲಾ ಸದ್ಭಕ್ತರ ಮೇಲೆ ದೃಷ್ಟಿ ಬೀರಿದರು. ಆಗ ಗುರುಗಳ ಕೃಪಾಕಟಾಕ್ಷ ಪಡೆಯಲು ಪ್ರತಿಯೊಬ್ಬರು ತಮ್ಮ ಶಕ್ತ್ಯಾನುಸಾರ ಕಾಣಿಕೆಯನ್ನು ಇಟ್ಟು ನಮಸ್ಕರಿಸಿ ಕೃಪಾಶೀರ್ವಾದ ಪಡೆದುಕೊಂಡು ಹೋಗುತ್ತಿದ್ದರು. ಆಗ

ಮಡಿವಾಳಪ್ಪನ ಸರತಿಯ ಪ್ರಕಾರ ಹೋಗಿ ನಿಂತು ದುಃಖದಿಂದ ಅಳಲು ಆರಂಭಿಸಿದನು. ಯೇಕಪ್ಪ ಸೀನಳುವದು ಎಂದು ಕರುಣೆಯಿಂದ ಗುರುಗಳು ಕೇಳಲಾಗಿ ಕೊಡಲು ನನ್ನಲ್ಲಿ ಏನೂ ಇಲ್ಲ. ಸಾಲದಿಂದ ಬಳಲಿ ಬೆಂಡಾಗಿದ್ದೇನೆ ಎಂದು ದುಃಖಿಸಲು ಸ್ವಲ್ಪ ಕಾಲ ಗುರುಗಳು ಮೌನದಿಂದಿದ್ದು ಆ ಸಾಲ- ವನ್ನೇ ಗುರುಕಾಣಿಕೆ ಎಂದು ಪಡೆದಿದ್ದೇನೆ ಎಂದು ಹೇಳಿ ತಲೆಯ ಮೇಲೆ ಕೈಯಾಡಿಸಿ ಆಶೀರ್ವದಿಸಿ ಕಳಿಸಿದರು. ಮುಂದೆ ವ್ಯಾಪಾರದಲ್ಲಿ ಲಾಭವಾಗಿ ಗುರು ಕರುಣೆಯಿಂದ ಒಂದು ವರ್ಷ ತುಂಬುವದರಲ್ಲಿ ಆತನ ಸಾಲವೇ ಇಲ್ಲ- ದಾಗಿ ಮೊದಲಿನಕಿಂತಲೂ ಸ್ಥಿತಿವಂತನಾಗಿ ಬಾಳಿ ಬದುಕುತ್ತಿದ್ದಾನೆ. ಅವ ನಂತೆ ಅನೇಕರು ಸುಖ ಲೋಲುಪರಾಗಿ ಬಾಳುತ್ತಿದ್ದಾರೆ. ಆದ್ದರಿಂದ "ಗುರು ಕರುಣೆಯೇ ರವಿಕಿರಣವಿದ್ದಂತೆ" ಎಂದು ತಿಳಿದು ನಡೆದರೆ ಈ ಬಾಳಿನಲ್ಲಿ ಇಹದಲ್ಲಿ ಸೌಖ್ಯ ಪರದಲ್ಲಿ ಶಿವ ಸಾಯುಜ್ಯ ದೊರಕುವದರಲ್ಲಿ ಸಂದೇಹವಿಲ್ಲ.

## ಮುಂದಾಗುವ ಘಟನೆಯನ್ನು ಪುರಜನರಿಗೆ ತೋರಿಸಿದ ಮಹಾಯೋಗಿ

ಶ್ರೀ ಗುರು ಚನ್ನವೃಷಭೇಂದ್ರ ಶಿವಯೋಗಿಗಳು ದಿನಾಲು ಪ್ರಾತಃಕಾಲ ತಮ್ಮ ಶಿವಪೂಜೆ ಜಪತಪಗಳನ್ನು ಮುಗಿಸಿಕೊಂಡು ಉಳಿದ ವೇಳೆಯನ್ನು ಸದಾ ಶಿವಪರ ಶಾಸ್ತ್ರ ಶಿವ ಸಾಮರಸ್ಯ, ತತ್ವಸಾರ, ನಿಜಗುಣರ ಕೈವಲ್ಯ, ಪಂಚದಶಿ ಸಾರ್ಥ ಎಂಬ ತತ್ವಾವಲೋಕನೆಯಲ್ಲಿ ಕಾಲ ಕಳೆಯುತ್ತಿದ್ದರು. ಸುಧೆ ಇದ್ದಡೆ ಜ್ಞಾನಿಗಳು, ಪಂಡಿತರು, ಸನ್ನಿಧಾನಕ್ಕೆ ಸುಧೆ ಸವಿಯಲು ದಿನಾಲು ಇರತಕ್ಕದರೇ, ಗ್ರಾಮದ ಸಾತ್ವೀಕ ಬಸಲಿಂಗಪ್ಪ ಹೂಗಾರ, ಕುಂಬಾರ ಸಾಯಿಬಣ್ಣ, ಮತ್ತಿನ್ನಿತರ ನಾಲ್ಕು ಐದು ಜನಗ್ರಾಮಸ್ಥರು ಗುರುಗಳ ಮುಂದೆ ಕುಳಿತು ಕೈಜೋಡಿಸಿಕೊಂಡು ಕೇಳುವದು ಪರಿಪಾಟವೇ ಸರಿ.

ಪುರದಲ್ಲಿ ಹಿಂದೂ (ಕುರುಬ) ಸಮಾಜದ ಕೆಂಚರಾಯ ಎಂಬ ದೇವ ಸ್ಥಾನ ದೇವರ ಹಗಲಿರುಳೂ ಆರಾಧಿಸುವ ಆ ದೇವರ ಭಕ್ತರಾದ ಭೂತಾಳೆಪ್ಪ ಪೂಜಾರಿ ಮತ್ತು ಕೆಂಚಪ್ಪ ಪೂಜಾರಿ ಇವರೀರ್ವರು ಎಂದಿನಿಂದಲೂ ಈ ದೇವರ ಮೇಲೆ ಸ್ರದ್ಧೆ ಹೆಚ್ಚು. ಪ್ರತಿ ವರ್ಷ ಆ ಗುಡಿಯಲ್ಲಿ ಹೇಳಿಕೆ ಕೇಳಲು

ಸುತ್ತ ಕಡೆಯ ಜನರು ಭಕ್ತಿಯಿಂದ ಬರತಕ್ಕವರೇ ಅಂದು ಭೂತಾಳೆಪ್ಪ ಮತ್ತು ಕೆಂಚಪ್ಪ ಇವರೀರ್ವರೂ ಹೇಳಿದ ಹೇಳಿಕೆ ಎಂದೂ ಸುಳ್ಳಾಗಿಲ್ಲ. ಇಲ್ಲಿಯ ಗ್ರಾಮಸ್ಥ ಸಮಸ್ತ ಜನ ಒಪ್ಪುತ್ತಾರೆ. ಸುತ್ತ ಮುತ್ತಲಿನ ಹೇಳಿಕೆ ಕೇಳಿದ ಜನರೂ ಒಪ್ಪುತ್ತಾರೆ.

ಆದರೆ ಮುಂದೆ ಅವರೀರ್ವರಿಗೂ ಹಿಂದಿನ ಜನ್ಮದ ಕರ್ಮ ಫಲವೋ ವಿಧಿಯ ಆದೇಶವೋ ತಿಳಿಯದ ಮಾತು. ಅವರೀರ್ವರಿಗೂ ರೋಗ ಬಂದು ಹಾಸಿಗೆ ಹಿಡಿದರು. ಇವರೀರ್ವರೂ ಮಲಗಿದ್ದ ಊರ ಜನರಿಗೂ ಗ್ರಾಮಸ್ಥರಿಗೂ ಬಹಳ ವ್ಯಥೆಯಾಗಿ ಚಿಕಿತ್ಸೆ ಪಡೆಯಲು ದೊಡ್ಡ ಡಾಕ್ಟರರಲ್ಲಿ ಕರೆದುಕೊಂಡು ಹೋದರು. ಎಂಥ ಬಲ್ಲ ಡಾಕ್ಟರರಲ್ಲಿ ತೋರಿಸಿದರೂ ರೋಗ ಗುಣವಾಗಲಿಲ್ಲ.

ಇವೆಲ್ಲ ಸುದ್ದಿ ಕೇಳಿ ಸಂಭಾವಿತರೂ ಶ್ರೀಮಂತರೂ ಆದ ಶಿವಪ್ಪಗೌಡ ಬಿರೇದಾರ ಇವರು ಶ್ರೀ ಚನ್ನವೃಷಭೇಂದ್ರ ಗುರುಗಳ ಮೇಲೆ ಅಚಲವಾದ ಶ್ರದ್ಧೆಯುಳ್ಳವರು, ಗುರುಗಳನ್ನು ಕೇಳದೇ ಯಾವ ಕಾರ್ಯಗಳನ್ನೂ ಮಾಡಲಾರದ ಅಚಲ ನಿಷ್ಟೆ ಇವರದಾಗಿತ್ತು. ಇವರು ಭೂತಾಳೆಪ್ಪ ಮತ್ತು ಕೆಂಚಪ್ಪನನ್ನು ಹೊರಿಸಿಕೊಂಡು ಗುರು ಸನ್ನಿಧಾನಕ್ಕೆ ತಂದು ಹಾಕಿದರು. ಮತ್ತು ನಾನಾ ಪರಿಯಿಂದ ಅವರನ್ನು ಉಳಿಸಿಕೊಡಬೇಕೆಂದು ಬೇಡಿಕೊಂಡರು. ಕೆಂಚಪ್ಪ ಹಾಗೂ ಭೂತಾಳೆಪ್ಪ ಇವರ ಬಂಧು ಬಳಗವು ಹಾಗೂ ಸಮಾಜದ ಜನರೂ ಗುರುಗಳಲ್ಲಿ ಕೈ ಮುಗಿದು ಉದ್ಧರಿಸಿ ಕಾಪಾಡಬೇಕೆಂದು ಸಾಷ್ಟಾಂಗವೆರಗಿದರು. ಕವಿ, ಪಂಡಿತರು, ಮಠದಲ್ಲಿ ನೆರೆದ ಉಳಿದ ಜನರು ಒಂದು ತರಹದ ಚಿಂತಾಕ್ರಾಂತ ವಾತಾವರಣದಲ್ಲಿ ತುಂಬಿ ನಿಗೂಢ ವಾತಾವರಣವೇ ತಲೆದೋರಿತು. ಎಲ್ಲರೂ ಗುರುಗಳ ಕಡೆಯಲ್ಲಿ ವೀಕ್ಷಿಸಲಾರಂಭಿಸಿದರು.

ಆಗ ಗುರುಗಳ ಮುಖ ಮುದ್ರೆ ಗಂಭೀರತೆಯಿಂದ ತುಂಬಿ ಕೆಲವರಿಗೆ ಚಂದ್ರನಂತೆ ಕಂಡು, ಮತ್ತೊಬ್ಬರಿಗೆ ಉರಿ ಸೂರ್ಯನಂತೆ ತೋರುತ್ತಿತ್ತು. ಯೋಗಿಗಳು ಲೋಕ ಜಂಜಾಟ ಬೇಡವೆಂದರೂ ಭಕ್ತರು ಜಂಜಡದಲ್ಲಿ ಎಳೆಯಲು ಬಯಸುತ್ತಾರೆ. ಆದರೂ ಕೋಗಿಲೆ ಕಾಗಿ ಬಳಗದಲ್ಲಿಯೇ ಬೆಳೆದರೂ ತನ್ನ ಕುಲವನ್ನೇ ಸೇರಿಕೊಂಡಂತೆ ಯೋಗಿಗಳು ಈ ಪ್ರಪಂಚದಲ್ಲಿಯೇ

ಇದ್ದು ನಮ್ಮ ಸಂಘದೊಳು ಒಡನಾಡಿ ನಮ್ಮ ಹಾಗೆ ಕಂಡರೂ ಅವರು ನುಡಿದದ್ದು ವೇದ ವಾಕ್ಯಗಳಾಗಿ, ನಡೆದದ್ದು ಮೈಲುಗಲ್ಲುಗಳಾಗಿ ದಾರಿದೀಪ ಗಳಾಗಿ ನೆಲೆಸಿದ್ದು ಕೈಲಾಸವಾಗಿ ಅವರ ನಾಮ ಕಾಮಧೇನುವಾಗಿದ್ದು ಪುರಾಣ, ಶಾಸ್ತ್ರ ಘಂಟಾ ಘೋಷವಾಗಿ ಸಾರುತ್ತಿವೆ.

ಆ ಪ್ರಕಾರವಾಗಿ ಗಂಭೀರ ಮುಖ ಮುದ್ರೆಯಿಂದ ಸಾಂತ್ವನ ಮನಸ್ಸಿ ನಿಂದ ಭೂತಾಳೆಪ್ಪ ಮತ್ತು ಕೆಂಚಪ್ಪ ಇವರಿಬ್ಬರಿಗೂ ಗುರುಗಳು ಮಸ್ತಕದ ಮೇಲೆ ಕೈಯ್ಯಾಡಿಸಿ ಕರುಣೆಯಿಂದ ನಿಮ್ಮೀರ್ವರಿಗೂ ಕೆಂಚರಾಯನು ಕರುಣಿಸಿ- ದ್ದಾನೆ. ಆನಂದದಿಂದ ನೀವೀರ್ವರೂ ಆತನ ಧ್ಯಾನದಲ್ಲಿ ಕಾಲ ಕಳೆಯಿರಿ.

ಕಡೆಗೆ ಗಂಭೀರತೆಯಿಂದ ಭೂತಾಳೆಪ್ಪನಿಗೆ ಮೊದಲು, ಮರುದಿನ ಕೆಂಚಪ್ಪ ನಿಗೆ ಕರೆಯಾಗುವದೆಂದು ಹೇಳಿ ದಿಂಗ್ಮೂಢರಂತೆ ಕುಳಿತುಕೊಂಡರು.

ಗುರುಗಳ ಈ ವಾಣಿಯನ್ನು ಕೇಳಿ ಎಲ್ಲಾ ಜನರು ನಾನಾ ರೀತಿ ಯಿಂದ ಸಂಕಲ್ಪಿಸಿದರು. ಸೇರದವರು ಸುಳ್ಳೇ ಅಂದರೂ, ಆದರೂ ಯೋಗಿ ಗಳು ಆಡಿದ್ದೇ ನುಡಿ ಮುತ್ತು ನೋಡಿದ್ದೇ ಕರುಣೆ. ಅವರ ವಾಕ್ಯದಂತೆ ಮೊದಲನೇ ದಿನ ಭೂತಾಳೆಪ್ಪನು ತೀರಿಕೊಂಡ ನಂತರ ಕೆಂಚಪ್ಪನು ತೀರಿದ. ಆದ್ದರಿಂದ ಯೋಗಿಗಳೊಡನಾಟ ಬೆಂಕಿಯ ಗೂಡ ಸರಸವಾದಿನಂತೆ ಸರಿ. ಆದಕಾರಣ ದೇವರಲ್ಲಿ, ಗುರು ಹಿರಿಯರಲ್ಲಿ ವಿಶ್ವಾಸ ಭಕ್ತಿ ಭಾವವನ್ನು ಇಟ್ಟು ಅಚಲವಾದ ಪ್ರೇಮದಿಂದ ನಡೆದು ಸಜ್ಜನರ ಸಂಗದಲ್ಲಿದ್ದು ಪುಣ್ಯ ಶ್ರವಣ, ಶಿವಕೀರ್ತನ ಕೇಳಿ ಅದರಂತೆ ನಡೆಯಲು ಮಾನವನಾಗಲು ಸಾಧ್ಯ ಮತ್ತು ದೇವ ಮಾನವನಾಗಲೂ ಸಾಧ್ಯವಾಗಿದೆ.

## ತಪಸ್ವಿಗಳ ದಿವ್ಯ ಭಸ್ಮವೇ ಪರಮೌಷಧ

ಮುದ್ದೇಬಿಹಾಳ ತಾಲೂಕಿಗೆ ಸೇರಿದ ಮಡಕೇಶ್ವರ ಗ್ರಾಮದಲ್ಲಿ ಅಯ್ಯನ ಗೌಡ ಪಾಟೀಲರು ವಾಸವಾಗಿದ್ದರು. ಅವರು ಆ ಊರಿನ ಗೌಡಕೀಯ ಮನೆ ತನದವರಾಗಿದ್ದರು. ಅಯ್ಯನಗೌಡರು ಶಿವಭಕ್ತರಿದ್ದು ಗುರುಪೂಜಕರೂ, ಲಿಂಗಾರ್ಚಕರೂ, ಸ್ವಾಮಿನಿಷ್ಠರೂ ಆಗಿದ್ದರು. ಇವರ ಧರ್ಮ ಪತ್ನಿಯೂ

ಕೂಡಾ ಪತಿವ್ರತಾ ಧರ್ಮ ಪರಾಯಣಳೂ, ಪತಿ ಪೂಜಕಳೂ, ಶಿವ ಪೂಜಾ ನಿಷ್ಠಳೂ, ಸ್ತ್ರೀ ಧರ್ಮ ಪರಿಪಾಲಕಳೂ ಸದಾ ಹರ ಗುರುಗಳ ಸೇವೆಯಲ್ಲಿ ಕಾಲ ಕಳೆಯುತ್ತಿದ್ದಳು. ದಂಪತಿಗಳು ಸ್ವಭಾವತಃ ನಿಗರ್ವಿಗಳಾಗಿದ್ದು ಗುರು ಹಿರಿಯರಲ್ಲಿ ಪೂಜ್ಯ ಭಾವದಿಂದಿದ್ದು ಜಂಗಮರಲ್ಲಂತೂ ಅನನ್ಯ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಶ್ರೀಮಂತರಾಗಿದ್ದರೂ ಸಹ ಅವರಲ್ಲಿ ತಿಲ ಮಾತ್ರ ಗರ್ವವಿರಲಿಲ್ಲವಂತೆ. ಅನಾಥರಿಗೆ ಅನ್ನದಾನ, ವಸ್ತ್ರದಾನ, ಬಡ ಮಕ್ಕಳಿಗೆ ಓದುವ ಸಲುವಾಗಿ ಹಣ ಸಹಾಯವೂ ಕೂಡಾ ಮಾಡುತ್ತಿದ್ದರು. ಈ ರೀತಿ ಕಾಲ ಕಳೆಯುತ್ತಿರಲಾಗಿ ಅಯ್ಯನ ಗೌಡರಿಗೆ ಒಂದು ಗಂಡು ಮಗು ಜನನವಾಯಿತು. ಆ ಮಗುವಿಗೆ ಬಸನಗೌಡನೆಂದು ಹೆಸರಿಟ್ಟರು. ಬಸನಗೌಡನು ಸಹ ದೇವರನ್ನೂ, ಗುರುಗಳನ್ನೂ, ಜಂಗಮರನ್ನೂ, ಮರೆಯದೆ ತಂದೆಯು ಹಾಕಿ ಕೊಟ್ಟ ಮಾರ್ಗದಲ್ಲಿ ನಡೆಯ ತೊಡಗಿದನು. ಬಸನಗೌಡನಿಗೆ ಲಗ್ನವಾಯಿತು. ಮಡದಿ, ಮಗ, ಸೊಸೆ, ಆನಂದದಿಂದ ಕಾಲ ಕಳೆಯುತ್ತಿರಲಾಗಿ ಮಗನ ಪೂರ್ವ (ಹಿಂದಿನ) ಜನ್ಮದ ಕರ್ಮವೋ ಅಥವಾ ದೇವರ ಸತ್ವ ಪರೀಕ್ಷೆಯವೋ ಬಸನಗೌಡನಿಗೆ ಭಯಂಕವಾದ ಮೂಗಿಗೆ ಗಡ್ಡೆ ಕಾಣಿಸಿಕೊಂಡಿತು. ಹಗಲಿರುಳು ನಿದ್ರೆ ನೀರಡಿಕೆ ಇಲ್ಲದೆ ಹೊಡೆತ ತಾಳಲಾರದೆ ಶಿವನನ್ನು ನೆನೆಯುತ್ತ ಗೋಳಾಡ ತೊಡಗಿದನು. ಮಗನ ಸ್ಥಿತಿಯನ್ನು ನೋಡಿ ಅಯ್ಯನಗೌಡರು ಅನೇಕ ವೈದ್ಯರಲ್ಲಿ ತೋರಿಸಿದರು. ಇದು ಅಲ್ಲದೆ ದೊಡ್ಡ ದೊಡ್ಡ ದವಾಖಾನೆಗೆ ಕರೆದುಕೊಂಡು ಹೋಗಿ ತೋರಿಸಿದರೂ ಸಹ ಗುಣಮುಖವಾಗಲಿಲ್ಲ. ಇಷ್ಟೊಬ್ಬ ಮಗನ ಸ್ಥಿತಿ ಹೀಗಾಯಿತಲ್ಲಾ ಎಂದು ಪರಿ ಪರಿಯಿಂದ ದುಃಖಿಸತೊಡಗಿದನು.

ಶ್ರೀಗುರು ಚನ್ನವೃಷಭೇಂದ್ರ ಮಹಾಸ್ವಾಮಿಗಳವರ ಕೀರ್ತಿ ಸುತ್ತ ಮುತ್ತಲಿನ ಹಳ್ಳಿ ಹಳ್ಳಿಗಳಲ್ಲಿ, ಗ್ರಾಮ ಗ್ರಾಮಗಳಲ್ಲಿ, ಪಟ್ಟಣಗಳಲ್ಲಿಯೂ ಕೂಡಾ ಹಬ್ಬಿ ಸುವಾಸನೆಯಂತೆ ಪರಿಮಳ ಬೀರಿತು. ಅದೇ ಗ್ರಾಮದ (ಮಡಕೇಶ್ವರ) ಸಾರವಾಡ ಮನೆತನದ ಶ್ರೀ ಮತಿ ಶಿವಬಸಮ್ಮನವರು ಪ್ರತಿ ಶ್ರಾವಣ ಮಾಸಕ್ಕೆ ಮಾಗಣಗೇರಿಗೆ ಬಂದು ಗುರುಗಳವರ ದರ್ಶನದ ಭಾಗ್ಯ ಪಡೆದುಕೊಂಡು ಹೋಗುತ್ತಿದ್ದಳು. ಅವಳು ಯಾವುದೇ ಕಾರ್ಯ ಮಾಡಬೇಕಾದರೆ

ಮಹಾಸ್ವಾಮಿಗಳಿಗೆ ತಿಳಿಸಿ ಅವರ ಅಪ್ಪಣೆಯಂತೆ ಮಾಡುತ್ತಿದ್ದಳು. ಗುರುಗಳವ ರನ್ನು ಸಾರವಾಡದವರು ಮಡಕೇಶ್ವರಕ್ಕೆ ಕರೆದುಕೊಂಡು ಹೋಗಿ ಮನೆಯಲ್ಲಿ ಪಾದಾ ಹಾಕಿಸುತ್ತಿದ್ದರು. ಗುರುಗಳವರ ಜತೆಯಲ್ಲಿ ಶರಣರಾದ ಶ್ರೀ ಕಂತೆಪ್ಪ-ನವರು ಇರುತ್ತಿದ್ದರು.

ಅಯ್ಯನಗೌಡನು ಮಗನ ಚಿಂತೆಯಲ್ಲಿಯೇ ಇರುತ್ತಿರಲು ಒಂದು ದಿನ ಮಾಗಣಗೇರಿಯ ತಪಸ್ವಿಗಳವರ ಹೆಸರನ್ನು ಕೇಳಿದ. ಇದು ಅಲ್ಲದೆ ಗುರು-ಗಳವರ ಮಹಿಮೆ ಸುತ್ತ ಮುತ್ತಲಿನ ಗ್ರಾಮದ ಜನರಿಂದ ತಿಳಿದುಕೊಂಡು ಮಾಗಣಗೇರಿಗೆ ಬರುವಂಥವನಾದನು.

ಗುರುಗಳಲ್ಲಿಗೆ ಬಂದು ಭಯ ಭಕ್ತಿಯಿಂದ ಕೈ ಜೋಡಿಸಿ ತನ್ನ ಅಳಲನ್ನು ತೋಡಿಕೊಂಡನು. ನನ್ನ ಮಗನನ್ನು ತಾವು ನನ್ನ ಗ್ರಾಮಕ್ಕೆ ಬಂದು ಕಾಪಾಡಬೇಕೆಂದು ಅನಂತ ರೀತಿಯಿಂದ ಕೇಳಿಕೊಳ್ಳುತ್ತಿರಲಾಗಿ ಆಗ ಕರುಣಾಮಯಿ-ಗಳಾದ ಗುರುಗಳು ಆಗಲಿ ಎಂದು ಅಪ್ಪಣೆ ಕೊಡಿಸಿದರು. ಅವರ ಒಪ್ಪಿಗೆ-ಯನ್ನು ಕೇಳಿ ಸಂತೋಷಗೊಂಡು ಗೌಡನು ಮಡಕೇಶ್ವರಕ್ಕೆ ಗುರುಗಳವರನ್ನು ಬರಮಾಡಿಸಿಕೊಂಡನು. ಮಡಕೇಶ್ವರಕ್ಕೆ ಹೋದ ನಂತರ ಬಸನಗೌಡನಿಗೆ ಗುರಗಳವರು ಮೂಗಿನ ಮೇಲೆ ಹುಣ್ಣು ಆಗಿರುವದನ್ನು ನೋಡಿ ತಮ್ಮ ಚೀಲ (ಜೋಳಿಗೆ) ದಲ್ಲಿರುವ ಭಸ್ಮವನ್ನು ತೆಗೆದುಕೊಂಡು ಮಂತ್ರಿಸಿ ಸ್ವತಃ ಅಮೃತ ಹಸ್ತದಿಂದ ಹಚ್ಚಿದರು. ನೀವು ಒಂದು ತಿಂಗಳ ಮುಗಿಯುವವರೆಗೆ ಈ ಭಸ್ಮ ಹಚ್ಚುತ್ತಾ ಹೋಗಿರಿ ಎಂದು ಹೇಳಿ ಆಶೀರ್ವದಿಸಿದರು. ಸ್ವಾಮಿಗಳವರ ಅಪ್ಪಣೆ ಯಂತೆ ಒಂದು ತಿಂಗಳ ಒಳಗಾಗಿ ಮೂಗಿನ ಮೇಲಿರುವ ಗಡ್ಡೆ ಸಂಪೂರ್ಣ ಮಾಯ್ದು ಹೋಯಿತು.

ವಚನ

ಗುರು ಮೆಟ್ಟಿದ ಧರೆಯು ಪಾವನವಾಯ್ತು ।
ಗುರು ಮುಟ್ಟಿದ ಶಿಲೆಯು ಲಿಂಗವಾಯ್ತು ।
ಗುರು ಮುಟ್ಟಿದ ಜಲವು ತೀರ್ಥ ಪ್ರಸಾದವಾಯ್ತು ।
ಗುರು ವಾಸ ಮಾಡಿದ ತಾಣವೇ ಕೈಲಾಸವಾಯ್ತು ॥

ಎಂಬ ವುಕ್ತಿಯಂತೆ ಮಹನೀಯರು ಹೇಳಿದ್ದಾರೆ. ಗುರುಗಳಲ್ಲಿ ಅಚಲವಾದ ಶ್ರದ್ಧೆ, ಅಚಲ ನಿಷ್ಠೆಯಿಂದ ಪವಿತ್ರ ಭಾವದಿಂದ ನಡೆದುಕೊಂಡರೆ ಅಂಥಾಃ ಪರಿಶುದ್ಧಾತ್ಮ ಭಕ್ತರಿಗೆ ತಮ್ಮ ಅಮೃತ ಹಸ್ತದಿಂದ ಸ್ಪರ್ಶಿಸಲು ಅನಂತ ರೋಗಾದಿಗಳು ಅಷ್ಟೇ ಏಕೆ ? ಭವ ಭಾದೆಗಳು ದೂರಾಗುವದರಲ್ಲಿ ಸಂಶಯವಿಲ್ಲ ಎಂಬೀ ಅರ್ಥದಲ್ಲಿ ಮಹನಿಯರು ಹೇಳಿದ್ದಾರೆ. ಅದರಂತೆ ಗುರುವೆಂದರೆ ಕಲ್ಪವೃಕ್ಷ, ಕಾಮಧೇನು ಎಂದು ಹೃದಯ ತುಂಬಿ ಆನಂದದಿಂದ ಹೊಗಳಿ-ಹಾಡಿದ್ದಾರೆ.

## ಶಿವೈ (ಲಿಂಗೈ) ಕ್ಯರಾದದ್ದು

೧೮೮೦ ವಿಕಾರಿ ನಾಮ ಸಂವತ್ಸರದ ಮಾರ್ಗಶಿರ ಬಹುಳ ನವಮಿ ಗುರುವಾರದ ಡಿಸೆಂಬರ ತಿಂಗಳ ೧೯೫೯ ನೇ ಇಸ್ವಿಯಂದು ಚರಪಟ್ಟಾಧ್ಯಕ್ಷ ಶ್ರೀಗುರು ಚನ್ನವೃಷಭೇಂದ್ರ ಶಿವಯೋಗಿಗಳು ಶಿವಾಧೀನರಾದರು.

ಗುರುಗಳು ಲಿಂಗೈಕ್ಯರಾದ ಸಮಯದಲ್ಲಿ ಉತ್ತರಾಧಿಕಾರಿಯನ್ನು ನೇಮಿಸುವ ಸಲುವಾಗಿ ಒಂದು ದೊಡ್ಡ ವಿವಾದವೇ ಎದ್ದಿತು. ಏಕೆಂದರೆ ಈ ಮಠವು ಪುತ್ರ ವರ್ಗ ಮಠವಿರುವದು. ಸ್ವಾಮಿಗಳ ತಮ್ಮಂದಿರ ಮಕ್ಕಳು ನಾಲ್ಕು ಮಂದಿ ಇದ್ದರು. ಅವರು ತಮ್ಮ ತಮ್ಮ ಮಕ್ಕಳನ್ನೇ ಪಟ್ಟಕ್ಕೆ ಬಿಸುತ್ತೇವೆಂದು ತಮ್ಮಲ್ಲಿಯೇ ಕಚ್ಚಾಟ ಮಾಡ ತೊಡಗಿದರು. ಇವರು ನಾಲ್ವರೂ ತಮ್ಮಷ್ಟೇ ಒಂದು ಗುಂಪನ್ನು ಕಟ್ಟಿಕೊಂಡು ಊರ ಪ್ರಮುಖರಲ್ಲಿಯೂ ಕೂಡಾ ನಾಲ್ಕು ಗುಂಪುಗಳನ್ನು ಮಾಡಿ ಬಿಟ್ಟರು. ಆದರೆ ಪರ ಊರಿನಿಂದ ಬಂದ ಹಿರಿಯ ಭಕ್ತರು ಒಂದು ವಿಚಾರವನ್ನು ಮುಂದಿಟ್ಟರು. ನಾಲ್ಕೂ ಮಂದಿ ಮಕ್ಕಳ ಹೆಸರಿನಿಂದ ಒಂದೊಂದು ಚೀಟಿ ಬರೆದು ನಾಲ್ಕೂ ಚೀಟಿಗಳನ್ನು ಗುರುಗಳ ಪಾರ್ಥಿವ ಶರೀರದ ಮುಂದೆ ಇಟ್ಟು ಒಬ್ಬ ಎರಡು ವರ್ಷದ ಬಾಲಕನಿಂದ ಆ ಚೀಟಿಯನ್ನು ಎತ್ತಿಸಿದರಾಯಿತು. ಯಾವ ಚೀಟಿ ಬರುವದೋ ಅವರೇ ಮುಂದಿನ ಪಟ್ಟಾಧಿಕಾರಕ್ಕೆ ಅರ್ಹರೆಂದು ಹೇಳಿದರು. ಇದರಂತೆ ನಾಲ್ಕೂ ಜನರೂ ಒಪ್ಪಿಗೆಯನ್ನಿತ್ತು ಅವರು ಯಾರ್ಯಾರನ್ನು ಬಿಡಬೇಕೆಂದು ಬಯಸಿದ್ದರೊ ಅವರವರ ಹೆಸರಿನಿಂದ ಚೀಟಿ ಬರೆದು ಸ್ವಾಮಿಗಳ ಮುಂದೆ ಇರಿಸಿ ಮಂಗಳಾರತಿ ಎತ್ತಿ ಎರಡು ವರ್ಷದ ಬಾಲಕನಾದ ಶಿವಶಂಕ್ರಯ್ಯನಿಂದ ಚೀಟಿ ಎತ್ತಿಸಲಾಗಿ ವಿಶ್ವಾರಾಧ್ಯ ಹೆಸರಿನಿಂದ ಚೀಟಿ ಎದ್ದಿತು. ಇದಲ್ಲದೆ ಲಿಂ|| ಗುರುಗಳ ಅಪೇಕ್ಷೆಯೂ ಕೂಡಾ ಇದೇ ಹುಡುಗನ ಮೇಲೆ ಇತ್ತು. ಅಂತೆಯೇ ಅವರು ಕಾಶೀ ಯಾತ್ರೆಯಿಂದ ಮರಳಿದ ಬಳಿಕವೇ ಹುಟ್ಟಿದ ಕೂಸಿಗೆ ವಿಶ್ವಾರಾಧ್ಯರೆಂದೇ ನಾಮ ಮಾಡಿಸಿದ್ದರು. ಅವರ ಅಭಿಪ್ರಾಯದಂತೆಯೇ ವಿಶ್ವಾರಾಧ್ಯರದೇ ಚೀಟಿ ಎದ್ದದ್ದರಿಂದ ಆ ಕೂಡಲೇ ಶ್ರೀ ಷ|| ಬ್ರ|| ಅಯ್ಯಪ್ಪ ಶಿವಾಚಾರ್ಯರ ಸ್ವಹಸ್ತದಿಂದ ವಿಧಿವತ್ ಪಟ್ಟಾಧಿಕಾರ ಕೊಡಿಸಿದರು. ಶ್ರೀ ಷ|| ಬ್ರ|| ಸಿದ್ದಲಿಂಗ ಶಿವಾಚಾರ್ಯರು ಹಿರೇಮಠ ಮಳ್ಳಿ, ಕಲಬುರ್ಗಿಯ ಸತ್ಯ ಶರಣ ಬಸವೇಶ್ವರರ ಗುರುಗಳಾಗಿರುವ

ಶ್ರೀ ಷ|| ಬ್ರ|| ಮರುಳಾರಾಧ್ಯ ಶಿವಾಚಾರ್ಯ ಹಿರೇಮಠ ಕಲಕೇರಿ, ಶ್ರೀ ಷ|| ಬ್ರ|| ಚನ್ನಮಲ್ಲ ಶಿವಾಚಾರ್ಯ ಸ್ವಾಮಿಗಳು ಹಿರೇಮಠ ಕಕ್ಕಳಮೇಲಿ ಶ್ರೀ ಷ|| ಬ್ರ|| ಅಸ್ಕಿ ಪಟ್ಟದ್ದೇವರು ಹಿರೇಮಠ ಅಸ್ಕಿ ಇನ್ನೂ ಹರಗುರು ಚರ ಮೂರ್ತಿಗಳು ಬಂದು ನೂತನ ವಟುವಿಗೆ ಅಧಿಕಾರ ಕೊಡಿಸಿ ಶ್ರೀ ಷ|| ಬ|| ವಿಶ್ವಾರಾಧ್ಯ ಶಿವಾಚಾರ್ಯರೆಂಬ ನಾಮಾಂಕಿತವನ್ನಿಟ್ಟು ಸರ್ವರೂ ಆಶೀರ್ವದಿಸಿದರು. ನೆರೆದ ಜನಸ್ತೋಮ ಜೈಜೈಕಾರ ಮಾಡಿದರು. ಅಲ್ಲದೆ ಅಂದು ಹಳ್ಳಿ ಹಳ್ಳಿಗಳಿಂದ, ಪಟ್ಟಣಗಳಿಂದ ಬಂದ ಜನರಿಗೆ ಅನ್ನ ಸಂತರ್ಪಣೆಯಾಯಿತು.

ವೀರಶೈವ ಪದ್ಧತಿಗನುಸಾರವಾಗಿ ಗುರುಗಳ ಗದ್ದುಗೆಯ ನಿರ್ಮಾಣವಾಯಿತು. ಭವ್ಯ ಸಡಗರದೊಂದಿಗೆ ಗುರುಗಳ ಪಾರ್ಥೀವ ಶರೀರದ ಅಂತಿಮ ಯಾತ್ರೆಯನ್ನು ನೆರವೇರಿಸಲಾಯಿತು. ಮುಂದೆ ಮಹಾಸ್ವಾಮಿಗಳ ಪುಣ್ಯತಿಥಿಗೆ ಎಲ್ಲಾ ಶಿಷ್ಯರೂ ಭಕ್ತರೂ ಬಂದು ಸೇರಿದರು. ಆಗ ಮಾಗಣಗೇರಿಯ ನಿವಾಸಿಗಳೂ, ಚಬನೂರದ ಬಾಲಪ್ಪಗೌಡರೂ, ಖಾನಾಪೂರ ಮಲ್ಲೇಶಪ್ಪಗೌಡರೂ ಕೂಡಿಕೊಂಡು ಗುರುಗಳ ಗದ್ದುಗೆಯ ಮೇಲೆ ಗುಡಿ ಕಟ್ಟಿಸುವ ವಿಚಾರ ಗಟ್ಟಿಯ ಸಾಹುಕಾರ ಚನ್ನಬಸಪ್ಪನವರ ಮುಂದಿಟ್ಟರು. ಚನ್ನಬಸಪ್ಪನವರು ತಮ್ಮ ತಂದೆ ತಾಯಿಗಳ ಆಜ್ಞೆಯ ಮೇರೆಗೆ ಯಥಾಶಕ್ತಿ ಗುಡಿ ಕಟ್ಟಿಸುವದಾಗಿ ಹೇಳಿದರು. ಅದರಂತೆ ಶಹಾಪೂರದ ಗಟ್ಟಿ ಚನಬಸಪ್ಪನವರೂ ಚಬನೂರ ಬಾಲಪ್ಪಗೌಡರೂ, ಖಾನಾಪೂರದ ಮಲ್ಲೇಶಪ್ಪಗೌಡ ಪಾಟೀಲರೂ, ಕರವಿನಾಳದ ಗುರುಬಸಪ್ಪ ಸಾಹುಕಾರರೂ ಕೂಡಿಕೊಂಡು ಭವ್ಯವಾದ ಮಂದಿರವನ್ನು ಕಟ್ಟಿಸಿದರು. ಇದರಲ್ಲಿ ಗಟ್ಟಿಯವರು ಮುಂದಾಳತ್ವ ವಹಿಸಿ ನಿರ್ಮಾಣಕಾರ್ಯ ಮುಗಿಸಿದರು. ಅದ್ಭುತವಾದ ಪಂಚ ಕಳಸಗಳನ್ನೊಳಗೊಂಡು ಗುಡಿಯ ನಿರ್ಮಾಣವಾದ ಬಳಿಕ ಲಿಂಗ (ಶಿವಲಿಂಗ) ಸ್ಥಾಪನೆಯ ಕಾರ್ಯಕ್ರಮವನ್ನು ಇಟ್ಟುಕೊಳ್ಳಲಾಯಿತು. ಅದರಂತೆ ಶ್ರೀ ಮದ್ವೇದ ವೇದಾಂತ ಸಿದ್ಧಾಂತ ಪುರಾಣಾಗಮೇತಿಹಾಸ ಸಕಲ ಶಾಸ್ತ್ರ ಸುಪ್ರಸಿದ್ಧ ಶ್ರೀ ಮದ್ವೀರಶೈವ ಮಹಾಮಠ ಸ್ಥಾಪನಾಚಾರ್ಯವರ್ಯ ಶ್ರೀ ಜಗದ್ಗುರು ರೇಣುಕ ಭಗವತ್ಪಾದ ಮಹಾಚಾರ್ಯ ಪರಂಪರಾಗತ ಶ್ರೀ ಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ವೀರ ವೈರಾಗ್ಯ ಚಕ್ರವರ್ತಿ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಗಂಗಾಧರ ಮಹಾ

ರಾಜ ದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರ ಅಮೃತ ಹಸ್ತದಿಂದ ತಪ್ರೋ ರತ್ನ ವೀರ ವೈರಾಗ್ಯಮೂರ್ತಿಗಳಾದ ಲಿಂ|| ಷ|| ಬ್ರ|| ಚನ್ನವೃಷಭೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ಗದ್ದುಗೆಯ ಮೇಲೆ ಶಿವಲಿಂಗ ಪ್ರತಿಸ್ಥಾಪ ನೆಯನ್ನು ನೆರವೇರಿಸಲಾಯಿತು. ಶ್ರೀ ಮದ್ದುಜ್ಜಯಿನೀ ಸದ್ಧರ್ಮ ಸಿಂಹಾಸನಾ ಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಭಗವತ್ಪಾ ದರ ಪುರಾಣ ಮಂಗಲವನು ಅಂದೇ ಮುಗಿಸಲಾಯಿತು. ಪುರಾಣವು ಶಕೆ ೧೮೯೭ ರಾಕ್ಷಸನಾಮ ಸಂವತ್ಸರ ವೈಶಾಖ ಶುದ್ಧ ಅಕ್ಷಯ ತೃತೀಯಾ ತಾ|| ೨೧-೫- ೧೯೭೫ನೇ ಬುಧುವಾರ ರಂದು ಸುಕ್ಷೇತ್ರ ಮೂಗಣಗೇರಿ ಬೃಹನ್ಮಠವ ಶ್ರೀ ಲಿ. ಚನ್ನವೃಷಭೇಂದ್ರ ಮಹಾಸ್ವಾಮಿಗಳವರ ನೂತನ ದೇವಸ್ಥಾನದ ಆವರಣದಲ್ಲಿ ಹುಬ್ಬಳ್ಳಿ ತಾಲೂಕಿನ ಶುಳ್ಳದ ಗ್ರಾಮ ಪಂಚಗ್ರಹ ಹಿರೇಮಠದ ಪುರಾಣ ಪ್ರವಚನಾಚಾರ್ಯ ಶ್ರೀ ಷ|| ಬ್ರ|| ಸಿದ್ಧರಾಮ ಶಿವಯೋಗಿ ಶಿವಾಚಾರ್ಯ ಸ್ವಾಮಿಗಳವರಿಂದ ಪುರಾಣ ಮಂಗಲ ಹೊಂದಿತು. ಶ್ರೀ ಷ|| ಬ್ರ|| ಪಂ|| ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಹಿರೇಮಠ ಮುಳಲಿ, ಶ್ರೀ ಷ|| ಬ್ರ|| ಅಯ್ಯಪ್ಪ ಶಿವಾಚಾರ್ಯ ಮಹಾಸ್ವಾಮಿಗಳು ಹಿರೇಮಠ ಕೆಂಭಾವಿ, ಶ್ರೀ ಷ|| ಬ್ರ|| ವೃಷಭಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಅಸ್ಕಿ ಇನ್ನೂ ಹರಗುರು ಚರಮೂರ್ತಿಗಳು ಆ ಕಾರ್ಯಕ್ರಮಕ್ಕೆ ಆಗಮಿಸಿದ್ದರು. ಅದೇ ದಿನ ರಾಯಚೂರ ನಿವಾಸಿಗಳಾದ ಬ್ರಹ್ಮ ಸಿದ್ಧಾಂತ ಚನ್ನಬಸವ ಶಾಸ್ತ್ರಿಗಳ ವೇದ ಘೋಷಣೆಗಳಿಂದ ನಾನಾವಿಧವಾದ್ಯಗಳೊಡನೆ ಲಿಂಗ ಸ್ಥಾಪನೆ ಮಾಡಲಾಯಿತು. ಮತ್ತು ಉಪಾಚಾರ್ಯರ ಅಮೃತ ಹಸ್ತದಿಂದ ಪಂಚಕಳಸಾರೋಹಣ ಮಾಡಿಸ ಲಾಯಿತು.

ಮಾನವ ಧರ್ಮಕ್ಕೆ ಜಯವಾಗಲಿ ! ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ! ಧರ್ಮಕ್ಕಾಗಿ ಎಳಿರಿ ! ಧರ್ಮಕ್ಕಾಗಿ ಬಾಳಿರಿ ! ಧರ್ಮಕ್ಕಾಗಿ ಆಳಿರಿ ! ಧರ್ಮ ಕ್ಕಾಗಿ ತಾಳಿರಿ ! ಮನುಷ್ಯನು ಧರ್ಮದ ಕಟ್ಟಿನಲ್ಲಿ ನಡೆಯಬೇಕು. ಧರ್ಮ ಭ್ರಷ್ಟನಾದವನಿಗೆ ಸುಖ ಶಾಂತಿ ಸದ್ಗತಿಗಳಿಲ್ಲವೆಂದು ಸಕಲ ಶಾಸ್ತ್ರಗಳೂ ಇತಿ ಹಾಸಾದಿ ವಾಙ್ಮಯಗಳೂ ಕೈಯೆತ್ತಿ ಸಾರುತ್ತಲಿವೆ. ಈ ಧರ್ಮ ರಕ್ಷಣೆಗಾಗಿ ಗುರು ಸ್ಥಾನವು ಮೂಲವಾಗಿದೆ. ಸೂರ್ಯನು ತೇಜೋನಿಧಿಯಾದಂತೆ ಗುರುವು ಧರ್ಮ ಮೂರ್ತಿಯಾಗಿರುವನು. ಜಗದಾದಿಯಿಂದಲೂ ಗುರುಪೀಠಗಳು ಧರ್ಮ

ವನ್ನು ಸ್ಥಾಪಿಸಿ ರಕ್ಷಿಸುತ್ತ ಬರುತ್ತಲಿವೆ. ಅಂದಿನಿಂದ ಇಂದಿನವರೆಗೆ ಸಮಸ್ತರೂ ಗುರುಶಾಸನಕ್ಕೊಳಪಟ್ಟು ವರ್ತಿಸಿ ಇಷ್ಟಾರ್ಥಗಳನ್ನು ಸುಖಶಾಂತಿಗಳನ್ನು ಪಡೆಯುತ್ತ ಬರುತ್ತಲಿದ್ದಾರೆ. ಜಗದಾದಿ ಪಂಚಮಹಾ ಜಗದ್ಗುರು ಪೀಠಗಳು ಸ್ಥಾಪಿಸಲ್ಪಟ್ಟು ಪರಮ ಸನಾತನ ವೀರಶೈವ ಮತವು ಇಂದಿಗೂ ವೈಭವದಿಂದ ಮೆರೆಯುತ್ತಲಿದೆ. ಇಂಥ ಮಠದಲ್ಲಿಯೇ ಉದ್ಭವಿಸಿದ ಲಿಂಗೈಕ್ಯ ಚರಪಟ್ಟಾಧ್ಯಕ್ಷ ಶ್ರೀಗುರು ಚನ್ನವೃಷಭೇಂದ್ರರು ಸರ್ವರಿಗೂ ಆಯುರಾರೋಗ್ಯ ಭೋಗ-ಭಾಗ್ಯಗಳನ್ನು ಕೊಟ್ಟು ಕಾಪಾಡಲಿ ಎಂದು ಅವರ ಪಾದದಡಿಯಲ್ಲಿ ಅನಂತ ರೀತಿಯಿಂದ ಬಿದ್ದು ಬೇಡಿಕೊಳ್ಳುವೆ.

ಶ್ರೀಗುರು ಚನ್ನವೃಷಭೇಂದ್ರರ ಆತ್ಮೀಯ ಭಕ್ತರು ಅನೇಕ ಗುರುಗಳ ಮೇಲೆ ಜಾನಪದ ಗೀತೆಗಳನ್ನು, ಭಜನೆಯ ಪದಗಳನ್ನೂ ತತ್ವಪದಗಳನ್ನೂ ಕಟ್ಟಿ ಹಾಡುತ್ತಾರೆ. ಅಂಥವರಲ್ಲಿ ಅದೇ ಊರಿನ ಕಾಳವ್ವ ಬಡಿಗೇರ ಎಂಬಾಕೆ ನಿಷ್ಠಾವಂತ ಭಕ್ತಳಾಗಿದ್ದಳು. ಅವಳು ಸ್ವಂತ ಕಟ್ಟಿದ ಪದ ಈ ಕೆಳಗಿನಂತಿವೆ. ಅವಳೇನು ವಿದ್ಯಾವಂತೆಯಲ್ಲ ಶಾಲೆಯನ್ನೇ ಅರಿಯದ ಹೆಣ್ಣುಮಗಳು. ಈಗ ಮುಪ್ಪಿನವಳಾಗಿದ್ದು ಸ್ವರ ತೆಗೆದು ಹಾಡಲು ಕುಳಿತರೆ ಎಂಥವರೂ ಮೈಮರೆಯಬೇಕು. ಇಂಪಾದ ಕೋಗಿಲೆ ಕಂಠದಿಂದ ಸುಂದರ ಸುಮಧುರವಾಗಿ ಹಾಡು ಹೇಳುತ್ತಾಳೆ. ನಾನು ಒಮ್ಮೆ ದೇವಿಯ ಗುಡಿಗೆ ದರ್ಶನಭಾಗ್ಯ ಪಡೆಯಲು ಹೋದಾಗ ದೇವಿಯ ಪೂಜಾರಿಯಾದ ಕಾಳಮ್ಮ ನನ್ನ ಪರಿಚಯ ಮಾಡಿಕೊಂಡಳು. ಹಾಗೇ ಮಾತನಾಡುತ್ತಿರುವಾಗ ಚರಪಟ್ಟಾಧ್ಯಕ್ಷರಾದ ಮಹಾಸ್ವಾಮಿಗಳ ವಿಷಯದ ಬಗ್ಗೆ ಸ್ವಲ್ಪ ಮಾಹಿತಿ ಕೇಳಿದೆ. ಆದರೆ ಆ ಮಹಾಸ್ವಾಮಿ ಅವರ ಸಂಪೂರ್ಣ ಮಾಹಿತಿ ಹೇಳಿದ ಮೇಲೆ ತಾನು ರಚಿಸಿದ ಪದಗಳನ್ನು ಹಾಡತೊಡಗಿದಳು. ನಾನಂತೂ ಪದ ಮುಗಿಯುವವರೆಗೆ ಬೇರೆ ಲೋಕದಲ್ಲಿಯೇ ಇರುವೆನೆಂಬ ಭಾಸವಾಗಿತ್ತು. ಇದರಂತೆಯೇ ಒಬ್ಬ ಮುಸಲ್ಮಾನ ಭಕ್ತ ಕಾಶೀಮ ಮಾಸ್ತರ ಮಾಗಣಗೇರಿ ಎಂಬಾತನು ತತ್ವ ಪದಗಳನ್ನು ಕಟ್ಟಿದ್ದಾನೆ. ಇವನು ಜಾತಿಯಲ್ಲಿ ಮುಸಲ್ಮಾನನಾದರೂ ಕೂಡಾ ಅವನಲ್ಲಿ ನಮ್ರ, ವಿನಯ, ಭಕ್ತಿ ಇತ್ತು. ಗುರುಗಳಲ್ಲಿ ಸದಾ ಇರುತ್ತಿದ್ದನು. ತತ್ವ ಶಾಸ್ತ್ರಗಳ ಬಗ್ಗೆ ವಿಚಾರ ಮಾಡುತ್ತಿದ್ದನು. ಅವನಲ್ಲಿರತಕ್ಕ ಅಚಲವಾದ ಭಕ್ತಿಗೆ

ಮೆಚ್ಚಿ ಅವನಿಗೆ ಆಶೀರ್ವದಿಸಿದರು. ಅವನ ಎರಡು ತತ್ವ ಪದಗಳನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ. ಅಲ್ಲದೆ ಇನ್ನೂ ಕೆಲವು ಭಜನೆಯ ಪದಗಳೂ ಕವನಗಳೂ ಉಂಟು. ಅವುಗಳನ್ನು ಮುರಡಿಯ ಗ್ರಾಮದ ಗುರುಸುತ ಎಂಬಾತನು ರಚಿಸಿದ್ದಾನೆ. ಇವೆಲ್ಲವುಗಳನ್ನೂ ಆರಿಸಿಕೊಂಡು ಇಲ್ಲಿ ಬರೆಯಲಾಗಿದೆ. ಗುರುಸುತನು ಅಜ್ಞಾನಿಯಾಗಿದ್ದು ಅವುಗಳಲ್ಲಿ ಏನಾದರೂ ತಪ್ಪು ತಡಿಯಾಗಿದ್ದರೆ ವಾಚಕರು ಕ್ಷಮಿಸಿ ಪ್ರೋತ್ಸಾಹಿಸುವರೆಂದು ಅವರ ಪರವಾಗಿ ನಾನು ವಿನಂತಿಸಿಕೊಳ್ಳುವೆ.

# ಶ್ರೀ ಗುರು ಚೆನ್ನವೃಷಭೇಂದ್ರರ ತತ್ವ ಪದಗಳು

೧

ಶರಣು ಶರಣೆಂಬೆನಯ್ಯ ನಾಗಣಪುರವಾಸನೆ
ಶರಣು ಶರಣೆಂಬೆನಯ್ಯ ಶ್ರೀಗುರು ಹರಗೆ ॥ಪ॥

ಶರಣು ಶರಣಯ್ಯ ಕರುಣ ಮೂರುತಿಗೆ
ಗೌರೀ ಹರ ಕೈಲಾಸಪುರ ವಾಸಗೇ ॥೧॥

ಪರಮು ಪರತರ ಭಕ್ತರ ಪೊರೆವಗೆ
ಚೈತನ್ಯ ಮೂರುತಿ ಪರಮ ಪಾವನಗೆ ॥೨॥

ಅಂಬಿಗ ನಾನೆಂದು ಗಮ್ಮಿಲೆ ಹೊರಟೀನೋ
ಗುರುಕರುಣೆಯಿಲ್ಲದೆ ನೀರೊಳು ಮುಳಗಿದೆನಯ್ಯ ॥೩॥

ಅರುಣೋದಯದೊಳೆದ್ದು ಪಾವನ ಚರಮೂರ್ತಿ
ನಿನ್ನ ಪಾದವ ನೆನೆದರೆ ಪಾಪ ಪರಿಹಾರವಯ್ಯ ॥೪॥

ಚನ್ನ ವೃಷಭೇಶ್ವರ ನಿನ್ನ ನಾಮುವ ಜಪಿಸುವ
ಸದ್ಭಕ್ತ ಗುರುಸುತ ಮುರಡಿ ಪುರವಾಸ ॥೫॥

೨

ಎನ್ನ ಹಡದವ್ವ ಕೇಳನ್ವಾ
ಗುರುವಿನ್ನ ಕೂಡಿಕೊಂಡೆನ್ವಾ ॥ಪ॥

ಆತ್ಮದೊಳಗೆ ಪರಮಾತ್ಮನ ಕಂಡೆನವ್ವ
ಆತ್ಮ ಪರಮಾತ್ಮರಲ್ಲಿ ಭೇದ ಕಾಣೆನವ್ವ ॥೧॥

ಆರು ಗುಣಗಳನಳಿದು ಸದ್ಗುಣಿಯಾದೆನವ್ವ
ಸದ್ಗುರು ಶರಣರು ಕೈ ಮಾಡಿ ಕರೆದರವ್ವ ॥೨॥

ಸಾವು ಹುಬ್ಬಿನೊಳು ಶಿಣಶ್ಯಾಡಿ ಬಂದೆನವ್ವ
ನಿಜಗುರು ಚನ್ನವೃಷಭೇಶ ಬೋಧ ಹೇಳಿದನವ್ವ ॥೩॥

ಅರುವಿನಾ ಲಯದೊಳು ಗುರುವಿನ ಕಂಡೆನವ್ವ
ಅರುವೇ ಗುರುವೆಂದು ಸಿದ್ಧ ಮಾಡಿದನವ್ವ ॥೪॥

ಕರುಣೆಯ ಮೂರುತಿ ಶ್ರೀ ಗುರು ಹೇಳಿದ
ಮುದ್ದು ಮಗ ಗುರುಸುತ ಕೇಳಿದ ನೋಡವ ||೫

೫

ಕೆಂಪ ಸಾಡೆದ ಮಡಿಯು
ಕಿರಿ ಮಂಜು ರೇಶಿಮೆ
ಚಳ್ಳಗುರು ಕಿರಿ ಜಡಿ ಮುಂದೇನ್ಹೇಳಲಿ
ಏನು ಹೇಳಲಿ ಗುರುವೆ ೧||

ಏನು ಹೇಳಲಿ ಗುರುವೆ
ಚಿಕ್ಕ ಬುಜದ ಸ್ವಾಮಿ ವಸ್ತ್ರ
ವರ್ಣಿಸಿದರ ಪ್ರೀತಿ ತೀರದು
ಏನು ಹೇಳಲಿ ಗುರುವೆ ||೨||

ತಂಬಿಗಿ ತಾಲಿ ತುಂಬಿ ಕೊಡ್ತ್ರವರು
ಜಪಮಣಿ ರುದ್ರಾಕ್ಷಿ ಕೊರಳಲ್ಹಾಕುವರು
ಏನು ಹೇಳಲಿ ಗ.ರುವೆ ||೩||

ಹನ್ನೆರಡು ವರ್ಷಕ ಬಿಕ್ಷೇನ್ಹೇಳಲಿ
ನಿಂಬ ಹಣ್ಣಿನಂಗ ತುಂಬಿ ತುಳಕುವರು
ಏನು ಹೇಳಲಿ ಗುರುವೆ ||೪||

ಸ್ವೈಮಗ್ಗ ಹಾಕ್ವರು ಐದು ದಿವ್ಸ ತೆಗೆವರು
ಸೂತ್ರದ ಗೊಂಬೆಂಗ ಸುಳದ ಕೊಡ್ತ್ರವರು
ಏನು ಹೇಳಲಿ ಗುರುವೆ ||೫||

ತಂದಿಗಿ ಮಗನಿಗೆ ಹೊಡೆದಾಟ ಬಡಿದಾಟ
ಪ್ರಪಂಚ ಮಾಡುವರು ಮುಕ್ತಿ ಪಡೆವರು
ಏನು ಹೇಳಲಿ ಗುರುವೆ ||೬||

ಧರಾಯೊಳಧಿಕಪುರ ಮೆರೆವ ಮಾಗಣಗೇರಿ
ಅಪ್ಪ ಚರ ಮೂರ್ತಿಯ ಪಾದಕ್ಕೊಂದುವೆನು
ಏನು ಹೇಳಲಿ ಗುರುವೆ ||೭||

೪

ಶಿವ ಶಿವಶರಣರು
ಅವರು ಸತ್ಯವ ತೋರುವರ
ಸತ್ತು ಸಾಯದಂಗ ಇರುವ್ರವರ ನಮ್ಮ ಶಿವ ಶಿವಶರಣರ
ಸತ್ತು ಸಾಯದಂಗ್ಯ
ಇರುವ ಚನಬಸವ ಯೋಗಿ
ಸತ್ಯವ ತೋರ್ಸ್ಯಾರ ಜಗಕೆಲ್ಲ ನಮ್ಮ ಶಿವ ಶಿವಶರಣರ
ಅಕ್ಕ ಮಾಗಣಗೇರಿ ಹೊಕ್ಕು ನೋಡುನು ಬಾರ
ಅಪ್ಪ ಹಾನೇನ ಮಠದಾಗ । ಚರಲಿಂಗನ
ಪತ್ತುರ್‍ಗಿ ಪೂಜ ಉದಯಕ ||೧||
ತಾಯಿ ಮಾಗಣಗೇರಿ ಹೋಗಿ ನೋಡುನ ಬಾರ
ತಂದಿಹಾನೇನ ಮಠದಾಗ । ಚರಲಿಂಗನ
ಲಿಂಗದ ಪೂಜ ಉದಯಕ ||೨||
ಮಾಗಣಗೇರಿಯ ಊರಾಗ ವಿಸ್ತಾರೆನ್ಹೇಳಲಿ
ಅಷ್ಟಂಗದ ಗುಡಿಯ ಐಸಿರಿ । ಪೌಳಿದ ಮುಂದ
ಭಜನಿ ಮಾಡ್ಯಾರ ಬಹುತಾಳ ||೩||
ಕಾಯಿ ಒಡೆಯುವವರು ಕಡಿಮಿಲ್ಲ ಗುಡಿ ಮುಂದ
ಧೂಪದವರಿಗೆ ಎಡೆಯಿಲ್ಲ । ಶಹಾಪೂರದ
ಗಟ್ಟಿಸಾಹುಕಾರ ಗುಡಿ ಕಟ್ಟಿದ ||೪||
ಮಲಗುವ ಮಂಚವ ಬಿಟ್ಟ ಕುಂದ್ರು ತೇಜಿಯ ಬಿಟ್ಟ
ತಾಯಿ ಹಂಪಮ್ಮನ ಕೈ ಬಿಟ್ಟ । ಚರಲಿಂಗ
ಬೆಸ್ತವಾರ ದಿವಸ ಜೀವ ಬಿಟ್ಟ ||೫||

ಎಡ ಬಲ ತೋಳಿಗಿ ವಡೆಯ ನಿನ್ನ ಕುಂದರಿಸಿ
ಕೊರಳಿಗ್ಹಾಕ್ಯಾರ ಜಪಮಣಿಯ । ಚರಲಿಂಗನ
ಕೊಡವೇಕಾರುತಿ ಬೆಳಗ್ಯಾರ ||೬||

ಮಡಿಗೋಳು ಉಡಿಸ್ಯಾರ ಕೊಡಿಗೋಳು ಏರಿಸ್ಯಾರ
ಎಡ ಬಲ ಚೌರ ಬೀಸ್ಯಾರ । ಚರಲಿಂಗಗ
ಸತ್ಯುಳ್ಳವರ ಕಳಸ ಬೆಳಗ್ಯಾರ ||೭||

ಬಾಣಗೋಳು ಬಿಡಿಸ್ಯಾರ ತಾಸ್ಯಾಗೋಳು ಹಿಡಿಸ್ಯಾರ
ನಗಾರಿನವಬತ್ತ ನುಡಿಸ್ಯಾರ । ಚರಲಿಂಗಗ
ಐಸಿರಿಲಿ ಮಠವ ಇಳಿಸ್ಯಾರ ||೮||

ವಿಮಾನ ಮಾಡಿಸ್ಯಾರ ಗದ್ದುಗಿ ಕಟ್ಟಿಸ್ಯಾರ
ವೈಭವದ ಮೆರವಣಿಗೆ ತಗಸ್ಯಾರ । ಚರಲಿಂಗಗ
ಮಠದಾಗ ಐಕ್ಯ ಮಾಡ್ಯಾರ ||೯||

ಯೋಗಿ ಬಂದಿಳಿದಲ್ಲಿ ಏಳೂರ ಜಾತುರಿ
ಬಾಳಿಯ ಕಂಭ ಮಠ ಮಾನ್ಯ । ಚರಲಿಂಗ
ಯೋಗಿ ಇಳಿದಲ್ಲಿ ಕೈಲಾಸ ||೧೦||

೫

ತೆಳ್ಳನ ಪಾದಕ ಬೆಳ್ಳಿಯ ಆಂವಿಗಿ
ಚೆಳ್ಳುಗರ ಚಲುವ । ಚರಲಿಂಗ
ಮಾಗಣಗೇರಿ ಸನ್ಯಾಸಿ ಚಲುವ ಮಠದಾಗ ||೧||

ಅಡ್ಡ ಬಿದ್ದೆನ ನನ್ನ ದೊಡ್ಡ ಚರ ಮೂರ್ತಿಗಿ
ಕಡ್ಡಿ ಕೈಸಾದ ವಡೆಯರು । ಚಿರಲಿಂಗಗ
ಅಡ್ಡ ಬಿದ್ದು ಹರಕಿ ಮುಟ್ಟಸಿದೆ ||೨||

ಕೈ ಬೀಸಿ ನಡದಾರ ಸೋಗಲಾಡಿ ಅಂತಾರ
ಹತ್ತ್ಯಾಗಿ ನಡದರ ಅರಿದ ಮಳ್ಳಿ ಅಂತಾರ । ನನಗಿಂತ
ಮುತ್ತಿನ ಮೂಗುತಿ ಕೈ ಕೋರ ||೩||

೬

ಎಲ್ಲಿಲ್ಲವೋ ಪರಮಾತ್ಮಾ ಎಲ್ಲಿಲ್ಲವೋ
ಎಲ್ಲ ತ್ರಿಜಗ ಜೀವಗಳ ಪಾಲನ ಕರ್ತನು ||ಪ||
ಲೋಕದೊಳಗಿಹ ಹಲವು ಪ್ರಾಣಿಗಳ
ಅಖಿಳ ಚರಾಚರ ಜಲಚರಾದಿಗೊಂದು
ಅಕಳಂಕ ರೂಪುಳ್ಳ ಲಿಂಗ ಮಧ್ಯದೊಳ
ಮುಖ್ಯ ಕೂಡಿ ಕೊಂಡಿಹವು ನೋಡೈ ||೧||
ಕಾಯ ಪುರಸೊಳಗಿಹ ಹೃದಯ ಕಮಲ
ಏನೋಪಾಯದಿಂ ಸಜ್ಜವ್ರಗೊಳಿಸಿ
ಮಾಯವು ದೂಡುತ ಸುಸ್ಥಿರವಾಗಿ
ಜಯ ಜೀವಾತ್ಮನ ಲಿಂಗ ನೋಡೋನಿ ||೨||
ದ್ವಾದಶ ಚಿನ್ನಂಕಿತ ಗುರುವಿನ ಪಡೆದು
ನವವಿಧ ಭಕ್ತಿಯಂ ಕರ್ಣತ್ರಯ ಪೂರ್ವಕ
ಸೇವೆಯ ಗೈದು ಗುರು ವಾಕ್ಯಾಮೃತ ಸವಿದು
ಭವದೀಗುವ ಮೋಕ್ಷಾಂಗವು ಸಾಧಿಸೋ ||೩||
ಭಾವಶುದ್ಧಾತ್ಮಿಕ ಪುಷ್ಪವು ಧರಿಸಿ ತವನಿಜ
ಧ್ಯಾನವೆಂಬ ಗಂಧವರ್ಪಿಸಿ ಪಾವಕ
ಚಕ್ರಾಗ್ರ ಭ್ರೂಮಧ್ಯ ದೃಷ್ಟಿಸಿ ಪಾವನ
ಚಿತ್ತಾಚಲ ದೀಪವ ನಿರಿಸೋ ||೪||
ದೇಹದಂಡನ್ಯಷ್ಟಾಂಗ ನೈವಿದ್ಯಗೈದು
ಮೋಹದಿ ವೈರಾಗ್ಯ ಕರ್ಮರುಜ್ವಲಿಸಿ
ಬಹು ಜೋಕೆಯ ಮನಧೂಪಾಕ್ಷಿ
ಮಹಿದತಿ ವಯೋಗಾಂಗದ ಆರುತಿ ಪಾಡೊ ||೫||
ಸ್ಥಿರವಾದ ಲಿಂಗವು ತನ್ನಲ್ಲಿರಲು
ಮರೆದು ಜ್ಞಾನ ವಿಕೃತಿಯ ಭಾವದಿಂಘರೆ
ಶಿತಿಕಾಷ್ಟದಿ ರಚಿಸಿದ ಪ್ರತಿಮೆಗೆ
ಎರಗುವುದು ಇದು ಎಂಥ ಅನ್ಯಾಯವು ||೬||

ದೇಶದೊಳಧಿಕವಾದ ಮಾಗಣಪುರದೊಳ್
ವಾಸಿಸುವ ಚರಮೂರ್ತಿ ಸ್ವಾಮಿಯ
ದಾಸ ಕಾಶಿಮನ ಬಾಲಜಲ್ಪಿತವು
ಧ್ಯಾಸಕೆ ತಂದು ನೀವು ದಯಾ ಮಾಡೀಕ್ಷಿಸಿರಿ ||೭||

೭

ಗುರುವೆ ಕಾಪಾಡೆನ್ನನು ಕರುಣಸಿಂಧುವೆ
ನೀನು ಪರಮ ಪಾವನರಿಗೊದಗಿದ ಪರಿಹರಿಸೈದುರ್ಮತಿಯನು ||ಪ||
ಹೃದಯಪೋಳೀದಾಸನ ಸದಾ ನಿಮ್ಮ ದಿವ್ಯ ವಚನ
ಮುದದಿ ಸ್ಥಿರದಾಗ್ಯುದಯಿಸು ಶುಧೆ ಸಂಯುಕ್ತದಾತ್ಮಜ್ಞಾನ ||೧||
ತಾಪಸೋತ್ತು ಮನೆ ತಪೋನಿಷ್ಠಾಗ್ರಣ್ಯನೇ
ವಪುಪ್ಪುರಾಂತಕನ ಸ್ವರೂಪದಿಂ ಪ್ರಕಾಸಿಶುವನೆ ||೨||
ಭಕ್ತ ಮನೋಲ್ಹಾಸನೆ ಶಕ್ತಿಯನ್ನು ವಿಜಿತನೆ
ಅತ್ಯಧಿಕಾದರದಿನೀಂ ಮುಕ್ತಿ ಪಥವು ತೋರುವವನೆ ||೩||
ಅನುದಿನಗೆಟ್ಟ ಸಾಹುಕಾರನು ತನಯನ ಬಯಸಿ
ಬಳಲಿದನು ಅನುಲಕ್ಷಿಸಿದ್ವಯ ಪುತ್ರರಂ ಅನುಗ್ರಹಿಸಿದವರ
ದಾತನು ||೪||
ಜರಾಜನ್ಮನಾಶನೆ ಪುರ ಮಾಗಣಗೇರೀಶನೆ ಚರಮೂರ್ತಿ
ಘನಲಿಂಗನೆ ತರುಕಲ್ಪ ಸಂಯುಕ್ತಾತ್ಮನೆ ||೫||

ಈ ಪ್ರಕಾರವಾಗಿ ನಿಷ್ಠಾಪೂರ್ಣ ಭಕ್ತಿಯಿಂದ ರಚಿಸಿದ ಶ್ರೀಗುರು ಚರ-ಪಟ್ಟಾಧ್ಯಕ್ಷ ಶ್ರೀ ಷ ||ಬ್ರ|| ಚನ್ನವೃಷಭೇಂದ್ರ ಮಹಾಸ್ವಾಮಿಗಳ ಪುಣ್ಯ ಚರಿತ್ರೆಯವು ಇಲ್ಲಿಗೆ ಮಂಗಲವಾಗುತ್ತದೆ.

"ಓಂ ಪೂರ್ಣಮದಃ ಪೂರ್ಣಮಿದಂ । ಪೂರ್ಣಾತ್ಪೂರ್ಣ
ಮುದಚ್ಯತೆ । ಪೂರ್ಣಸ್ಯ ಪೂರ್ಣ ಮಾದಾಯ ।
ಪೂರ್ಣ ಮೇವಾವಶಿಷ್ಯತೇ ॥

ಓಂ ಶಾಂತಿಃ ಶಾಂತಿಃ ಶಾಂತಿಃ

# ಧನಸಹಾಯ ಸಲ್ಲಿಸಿದ ದಾನಿಗಳು

ಶ್ರೀ ಬಾಲಪ್ಪಗೌಡ, ದಿ. ಸೋಮವ್ವಗೌಡತಿ, ಸೌ. ಸಿದ್ದವ್ವಗೌಡತಿ ಪಾಟೀಲ
ಚಬನೂರ



ಶ್ರೀ ನಿಂಗನಗೌಡ ಪಾಟೀಲ
(ಲಿಂಗದಳ್ಳಿ)



ಶ್ರೀ B.R. ಪಾಟೀಲ (ಲಿಂಗದಳ್ಳಿ)
ಚೇರಮನ್
B.L.D.E ಅಸೋಸಿಯೇಷನ್ ಬಿಜಾಪೂರ.

# ಧನಸಹಾಯ ಸಲ್ಲಿಸಿದ ದಾನಿಗಳು



ಶ್ರೀ B. B. ಪಾಟೀಲ ಚಬನೂರ



ಶ್ರೀ S. B ಪಾಟೀಲ ಚಬನೂ



ಶ್ರೀ ಡಾ. N. S. ಬಿರಾದಾರ
(ಹಂದ್ರಾಳ) M.B.B.S.D.A.
ಗದಗ



ಶ್ರೀ G. A ದೊಡನುನಿ
ಚಬನೂರ

# ಧನಸಹಾಯ ಸಲ್ಲಿಸಿದ ದಾನಿಗಳು



ಶ್ರೀ B. B. ಪಾಟೀಲ ಚಬನೂರ



ಶ್ರೀ S. B ಪಾಟೀಲ ಚಬನೂ



ಶ್ರೀ ಡಾ. N. S. ಬಿರಾದಾರ
(ಹಂದ್ರಾಳ) M.B.B.S.D.A.
ಗದಗ



ಶ್ರೀ G. A ದೊಡನುನಿ
ಚಬನೂರ

# ಈ ಗ್ರಂಥ ಮುದ್ರಣಕ್ಕಾಗಿ ಧನ ಸಹಾಯ ಸಲ್ಲಿಸಿದ ದಾನಿಗಳು

| | | | |
|---|---|---|---|
| ೧ | ಶ್ರೀ | ಬಿ. ಆರ್ ಪಾಟೀಲ (ಲಿಂಗದಳ್ಳಿ) ಚೇರಮನ್, ಬಿ.ಎಲ್.ಡಿ.ಇ.ಎ.ಬಿ. ಬಿಜಾಪೂರ | ೫೦೧-೦೦ |
| ೨ | ,, | ಡಾ|| ಎನ್.ಎಸ್. ಬಿರಾದಾರ (ಹಂದ್ರಾಳ) M B.B.S D.A ಗದಗ | ೫೦೧-೦೦ |
| ೩ | ,, | ನಿಂಗನಗೌಡ ರಾ. ಪಾಟೀಲ ಲಿಂಗದಳ್ಳಿ | ೫೦೧-೦೦ |
| ೪ | ,, | ಬಾಲಪ್ಪಗೌಡ ಬಿ. ಪಾಟೀಲ ಚಬನೂರ | ೫೦೧-೦೦ |
| ೫ | ,, | ಬಸನಗೌಡ ಬಿ. ಪಾಟೀಲ ,, | ೫೦೧-೦೦ |
| ೬ | ,, | ಸೋಮನಗೌಡ ಬಿ. ಪಾಟೀಲ ,, | ೫೦೧-೦೦ |
| ೭ | ,, | ಗಡ್ಡೀಸಾಬ ಅ. ದೋಡಮನಿ ,, | ೫೦೧-೦೦ |
| ೮ | ,, | ಪರಪ್ಪಗೌಡ ಬಿ. ಪಾಟೀಲ ,, | ೨೫೦-೦೦ |
| ೯ | ,, | ಶಿದ್ಧನಗೌಡ ಅ. ಧನ್ನೂರ ,, | ೨೫೦.೦೦ |
| ೧೦ | ,, | ಬಸನಗೌಡ ರಾಮನಗೌಡ ಪಾಟೀಲ ಚಬನೂರ | ೩೦೧-೦೦ |
| ೧೧ | ,, | ಸೋಮನಗೌಡ ರಾ. ಬಿರಾದಾರ (ಟಕ್ಕಳಕಿ) ,, | ೩೦೧-೦೦ |
| ೧೨ | ,, | ಎನ್.ಆಯ್. ಮೊಗಲಿ ಕ್ಯಾಪಮಾರ್ಟ ಬಿಜಾಪೂರ | ೩೦೧-೦೦ |
| ೧೩ | ,, | ಮಲ್ಹಾರಾವ ಮಾ. ದೇಶಪಾಂಡೆ ಚಬನೂರ | ೧೦೧-೦೦ |
| ೧೪ | ,, | ಮಡಿವಾಳಪ್ಪಗೌಡ ಗು. ಯಾಳವಾರ ,, | ೧೦೧.೦೦ |
| ೧೫ | ,, | ಶಿವಶಂಕರಗೌಡ ಗು. ಪಾಟೀಲ ,, | ೧೦೧-೦೦ |
| ೧೬ | ,, | ನಾನಾಗೌಡ ರೇಶಾಮಿ (ಕಲಕೇರಿ) ,, | ೧೦೧-೦೦ |
| ೧೭ | ,, | ಸಿದ್ಧಪ್ಪ ವಡೀರ ,, | ೧೦೧.೦೦ |
| ೧೮ | ,, | ಸಿದ್ದಪ್ಪ ಯ. ಮೇಟಿ ,, | ೧೦೧-೦೦ |
| ೧೯ | ,, | ಶಂಕ್ರೆಪ್ಪ ಸಿದ್ದಪ್ಪ ಹೂಗಾರ ,, | ೧೦೧-೦೦ |
| ೨೦ | ,, | ಕಂತೆಪ್ಪ ಚನ್ನೂರ ತಾಳಿಕೋಟಿ ,, | ೧೦೧-೦೦ |
| ೨೧ | ,, | ವೆಂಕಣ್ಣಗೌಡಪ್ಪ ಪೆಳ್ಳಿಗೇರಿ ಬಿಜಾಪೂರ | ೧೦೧-೦೦ |



ಶ್ರೀಗುರುಗಳ ದೇವಸ್ಥಾನ : ಸುಕ್ಷೇತ್ರ ಮಾಗಣಗೇರಿ